# ಇಂಗ್ಲಿಷ್ ಭಾಷೆಯಲ್ಲಿ ಕಾರಂತರ ಕಾದಂಬರಿಗಳು

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು :

ರಾಜೇಂದ್ರ ಎಸ್. ನಾಯಕ

ಮಾರ್ಗದರ್ಶಕರು :

ಡಾ. ಎ. ಸುಬ್ಬಣ್ಣ ರೈ

ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ,

ಭಾಷಾ ನಿಕಾಯ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ

೨೦೧೧

# ಇಂಗ್ಲಿಷ್ ಭಾಷೆಯಲ್ಲಿ ಕಾರಂತರ ಕಾದಂಬರಿಗಳು

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು :

**ರಾಜೇಂದ್ರ ಎಸ್. ನಾಯಕ**

ಮಾರ್ಗದರ್ಶಕರು :

**ಡಾ. ಎ. ಸುಬ್ಬಣ್ಣ ರೈ**

ಪ್ರಾಧ್ಯಾಪಕರು





**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ,**

**ಭಾಷಾ ನಿಕಾಯ,**

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ.

೨೦೧೧

# ಸಂಶೋಧಕರ ಘೋಷಣಾ ಪತ್ರ

**ಇಂಗ್ಲಿಷ್ ಭಾಷೆಯಲ್ಲಿ ಕಾರಂತರ ಕಾದಂಬರಿಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎ. ಸುಬ್ಬಣ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೨-೦೪-೨೦೧೧

(ರಾಜೇಂದ್ರ ಎಸ್. ನಾಯಕ)

ಸಹಪ್ರಾಧ್ಯಾಪಕರು

ಸ.ಪ್ರ.ದ. ಕಾಲೇಜು, ಕೋಟ-ಪಡುಕರೆ

ಉಡುಪಿ.

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ರಾಜೇಂದ್ರ ಎಸ್. ನಾಯಕ ಅವರು **ಇಂಗ್ಲಿಷ್ ಭಾಷೆಯಲ್ಲಿ ಕಾರಂತರ ಕಾದಂಬರಿಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೨-೦೮-೨೦೧೧

**ಡಾ. ಎ. ಸುಬ್ಬಣ್ಣ ರೈ.**
ಪ್ರಾಧ್ಯಾಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ ೫೮೩೨೭೬

# ಪರಿವಿಡಿ

# ಅಧ್ಯಾಯ – ೧

## ೧. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ದೀರ್ಘವಾದ ಚರಿತ್ರೆಯನ್ನು ಹೊಂದಿರುವ ಭಾಷಾಂತರದ ಬಗೆಗಿನ ಅಧ್ಯಯನ ಬಹು ಹಿಂದಿನಿಂದಲೂ ನಡೆದುಬಂದುದಾಗಿದೆ. ಇತರ ಭಾಷೆಗಳಲ್ಲಿ ನಡೆದ ಚರ್ಚೆಗಳಿಗೆ ಹೋಲಿಸಿ ನೋಡಿದಾಗ ಕನ್ನಡದಲ್ಲಿ ಭಾಷಾಂತರದ ಬಗೆಗಿನ ಅಧ್ಯಯನ ಅಷ್ಟಾಗಿ ನಡೆದಿಲ್ಲ ಎಂದೇ ಹೇಳಬೇಕಾಗುತ್ತದೆ. ಒಂದು ಉತ್ತಮವಾದ ಭಾಷಾಂತರ ಹೇಗಿರಬೇಕು ಮತ್ತು ಭಾಷಾಂತರಿಸಲು ಗೊತ್ತುಪಡಿಸಿದ ನಿರ್ದಿಷ್ಟವಾದ ರೂಪರೇಶೆಗಳು ಯಾವುವು ಎಂಬುದನ್ನು ಖಚಿತವಾಗಿ ಹೇಳಲು ಇಂದಿಗೂ ಕಷ್ಟಸಾಧ್ಯ. ಮೂಲ ಕೃತಿಯನ್ನು ಭಾಷಾಂತರಿಸುವ ಸಂದರ್ಭದಲ್ಲಿ ಭಾಷಾಂತರಕಾರನಿಗೆ ಸ್ವಾತಂತ್ರ್ಯವಹಿಸುವ ಅವಕಾಶ ಇದೆಯೇ, ಇಲ್ಲವೇ? ಎಂಬುದನ್ನು ಕೂಡ ನಿರ್ಧರಿಸುವುದು ಕಷ್ಟ. "ಭಾಷಾಂತರಕಾರನಿಗೆ ಮೂಲಕೃತಿಯ ಅರ್ಥವನ್ನು ತನಗೆ ಇಷ್ಟಬಂದ ಶೈಲಿ ಮತ್ತು ಭಾಷಾರೂಪದಲ್ಲಿ ವ್ಯಕ್ತಪಡಿಸುವ ಸ್ವಾತಂತ್ರ್ಯವಿದೆಯೇ, ಇಲ್ಲವೇ? ಇಲ್ಲಿ ಪ್ರಶ್ನೆಗಳು ಎರಡಿದ್ದರೂ ವಿಷಯ ಒಂದೇ ಆಗಿದೆ. ಸುಮಾರು ಎರಡುಸಾವಿರ ವರ್ಷಗಳಿಂದ ಈ ವಿಷಯವನ್ನು ಕುರಿತು ಚರ್ಚೆ ನಡೆದಿದೆ" [ನಾಗಭೂಷಣಸ್ವಾಮಿ ಓ.ಎಲ್.; ೧೯೯೩, ಪು. ೩]. ಇದು ಭಾಷಾಂತರದ ಬಗೆಗಿನ ಚರ್ಚೆ ಹಿಂದಿನಿಂದಲೂ ನಡೆಯುತ್ತಲೇ ಬಂದಿದೆ ಎಂಬುದನ್ನು ಸಾಬೀತುಪಡಿಸುತ್ತದೆ.

ಇಂದು ಭಾಷಾಂತರದ ಬಗೆಗಿನ ಚಿಂತನೆಯು ಅಂತರಶಿಸ್ತೀಯ ತೌಲನಿಕ ಅಧ್ಯಯನವಾಗಿಯೂ ಪರಿಣಮಿಸಿದೆ. ವಿವಿಧ ಜ್ಞಾನ ಶಿಸ್ತುಗಳ ಸಂಪರ್ಕಸ್ಥಾನವಾಗಿ ಭಾಷಾಂತರ ಮೂಡಿ ಬಂದಿದೆ ಎನ್ನಬಹುದು. ನಾವು ನಡೆಸುವ ಸಂವಹನಗಳು ಒಂದಲ್ಲ ಒಂದು ರೀತಿಯಿಂದ ಭಾಷಾಂತರವೇ ಆಗಿರುತ್ತದೆ ಎಂಬ ಧೋರಣೆ ತಾತ್ವಿಕವಾಗಿ ಹಾಗೂ ತಾಂತ್ರಿಕವಾಗಿ ಪ್ರಬಲವಾಗುತ್ತಿದೆ. ಹಲವು ಭಾಷೆಗಳನ್ನು ಆಡುವ ಜನರ ಬದುಕನ್ನು ತಿಳಿಯುವ ಒಂದು ಸಾಧನವಾಗಿ ಭಾಷಾಂತರವನ್ನು ಬಳಸಲಾಗುತ್ತಿದೆ. ಆದರೆ ಭಾಷೆ ಎಂಬುದು ದೇವರು ನೀಡಿರುವ ಕಾಣಿಕೆ ಇದನ್ನು ಯಾವ ಕಾರಣಕ್ಕೂ ಬದಲಾಯಿಸದೇ

ಇದು ಇದ್ದಂತೇ ಒಪ್ಪಿಕೊಂಡು ನಡೆಯಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವವರು ಇದ್ದಾರೆ. ಇವರ ಪ್ರಕಾರ ಭಾಷಾಂತರವನ್ನು ಮಾಡುವುದು ತಪ್ಪು. ಇದು ಮೂಲಭಾಷೆಗೆ ಅಪಚಾರ ಮಾಡಿದಂತೆ ಆಗುತ್ತದೆ. ಆದರೆ ಧಾರ್ಮಿಕ ಗ್ರಂಥಗಳ ವಿಚಾರದಲ್ಲಿ ಈ ವಿಚಾರ ತಪ್ಪು ಎನಿಸುತ್ತದೆ. ಬೈಬಲ್, ಭಗವದ್ಗೀತೆ ಮುಂತಾದ ಧಾರ್ಮಿಕ ಗ್ರಂಥಗಳನ್ನು ಭಾಷಾಂತರಿಸುವ ಮೂಲಕ ಆಯಾ ಧರ್ಮದ ಪ್ರಭಾವ ಸಾಕಷ್ಟು ಆಗಿದೆ ಎಂದು ಭಾವಿಸಿ ಸಾಕಷ್ಟು ಭಾಷಾಂತರ ನಡೆದುಹೋಗಿರುವುದು ನಮಗೆ ತಿಳಿದಿರುವ ಸಂಗತಿ. ಧರ್ಮದ ಪ್ರಚಾರಕ್ಕಾಗಿ ಭಾಷಾಂತರ ಸಾಕಷ್ಟು ನಡೆದದ್ದು ಕಂಡುಬರುತ್ತದೆ.

ಭಾಷಾಂತರದಿಂದ ಮನುಷ್ಯನಿಗೆ ತನ್ನ ಪ್ರಾಚೀನ ಜಗತ್ತಿನ ವಿವೇಕವನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಭಾಷಾಂತರ ಪ್ರಾಚೀನ ಕಾಲಕ್ಕೂ ಆಧುನಿಕ ಕಾಲಕ್ಕೂ ಒಂದು ಸಂಪರ್ಕಸಾಧನವಾಗಿ ಕೆಲಸ ಮಾಡುತ್ತದೆ. ಹೊಸದಾದ ಆಲೋಚನಾ ಕ್ರಮವನ್ನು ಬೆಳೆಸಲು ಭಾಷಾಂತರ ಸಹಕಾರಿಯಾದುದಾಗಿದೆ. "ಮುಖ್ಯವಾಗಿ ರಿನೇಸಾನ್ಸ್ ಕಾಲದ ಯುರೋಪಿನ ಭಾಷಾಂತರ ಚಟುವಟಿಕೆಗಳು ಚಿಂತನೆಯ ಹೊಸ ದಿಗಂತಗಳನ್ನು ಸೃಷ್ಟಿಸಿದವು. ಸಂಸ್ಕೃತದಂಥ ಭಾಷೆಯಿಂದ ಹಳಗನ್ನಡ ಪಡೆದುಕೊಂಡದ್ದನ್ನೇ ನೋಡಿದರೂ ಇದು ಸ್ಪಷ್ಟವಾಗುತ್ತದೆ. ಹಳಗನ್ನಡದಲ್ಲಿ ಹುಟ್ಟಿದ ವಿವಿಧ ರೂಪದ ಭಾಷಾಂತರಗಳು ಪ್ರಾಚೀನ ಸಂಸ್ಕೃತದ ಚಿಂತನೆಯ ಒರೆಗಲ್ಲಾಗಿಟ್ಟುಕೊಂಡು ಕನ್ನಡದ ಚಿಂತನೆಯನ್ನು ಬೆಳೆಸಲು, ಸಂಸ್ಕೃತದ ಅಭಿವ್ಯಕ್ತಿರೂಪಗಳನ್ನು ಕನ್ನಡಕ್ಕೆ ಒಗ್ಗಿಸಿಕೊಳ್ಳಲು ಅಳವಡಿಸಿಕೊಳ್ಳಲು ಅಥವಾ ವಿರೋಧಿಸಿ ಹೊಸ ರೂಪವನ್ನು ನಿರ್ಮಿಸಲು ಪ್ರಚೋದನೆ ಕೊಟ್ಟವು. ಆಧುನಿಕ ಕನ್ನಡಕ್ಕೂ ಇಂಗ್ಲಿಷ್ ಮತ್ತಿತರ ಭಾಷೆಗಳಿಗೂ ಇರುವ ಭಾಷಾಂತರ ಸಂಬಂಧವಾದರೂ ಇಂತಹುದೇ. ಬಿ.ಎಂ.ಶ್ರೀ ಹಟ್ಟಿಯಂಗಡಿ ನಾರಾಯಣರಾಯರು ಇಂಥವರ ಭಾಷಾಂತರ ಪ್ರಯತ್ನಗಳು ಹೊಸಕಾಲದ ಅನುಭವಕ್ಕೆ ರೂಪಕೊಡಲು ಬೇಕಾದ ಹೊಸ ದೃಷ್ಟಿಕೋನವನ್ನು, ಹೊಸ ಮೂಲ ಸಾಮಗ್ರಿಗಳನ್ನು ವರ್ತಮಾನ ಮತ್ತು ಭೂತಕಾಲದ ಸಂಬಂಧದ ಸ್ವರೂಪದ ವಿವರಣೆಗೆ ಹೊಸಬಗೆಯ ತರ್ಕವನ್ನು ತಂದುಕೊಟ್ಟವು" [ಅದೇ ಪು. ೯]. ತನ್ನ ಭಾಷೆಯಲ್ಲಿ ಇಲ್ಲದ್ದನ್ನು ಇನ್ನೊಂದು ಭಾಷೆಯಲ್ಲಿ ಹುಡುಕಿ ಅದನ್ನು ತನ್ನ ಭಾಷೆಗೆ ತರುವ ಕೆಲಸವನ್ನು ಭಾಷಾಂತರ ಮಾಡುತ್ತದೆ. ಜ್ಞಾನದ ವಿವಿಧ ಆವಶ್ಯಕತೆಗಳನ್ನು ಪೂರೈಸುವ ಪ್ರಕ್ರಿಯೆಯಲ್ಲಿ ಭಾಷಾಂತರಕಾರ ತನ್ನದಲ್ಲದ ಇನ್ನೊಂದು ಸಂಸ್ಕೃತಿ, ನಾಗರಿಕತೆಯ ಭಾಷೆಯೊಂದಿಗೆ ಸಂಪರ್ಕ ಬೆಳೆಸುತ್ತಾನೆ. ಇದು ಭಾಷಾಂತರಕಾರನಿಗೆ ಮಾತ್ರ ಸಾಧ್ಯವಾಗುವ ಸಂಗತಿಯಾಗಿದೆಯೇ ಹೊರತು ಎಲ್ಲರಿಗೂ ಅಲ್ಲ. ಇನ್ನೊಂದು ಸಂಸ್ಕೃತಿಯನ್ನು,

ನಾಗರಿಕತೆಯನ್ನು ಅರಿಯುವ, ಅವರೊಂದಿಗೆ ಬೆರೆಯುವ, ಅದನ್ನು ತನ್ನದಾಗಿಸಿಕೊಳ್ಳುವಲ್ಲಿ ಎದುರಿಸುವ ತೊಂದರೆಯನ್ನು ನಿವಾರಿಸಿಕೊಳ್ಳುವ ವಿಧಾನವೇ ಭಾಷಾಂತರ ಅಥವಾ ಅನುವಾದ ಎನ್ನಬಹುದಾಗಿದೆ.

ಇಂಗ್ಲಿಷಿನ `Translation' ಎಂಬ ಪದವನ್ನು ಕನ್ನಡದಲ್ಲಿ ಅನುವಾದ, ಭಾಷಾಂತರ, ತರ್ಜುಮೆ ಇತ್ಯಾದಿ ಪದಗಳಿಂದ ಗುರುತಿಸಲಾಗುತ್ತದೆ. ಆಪ್ಟೆಯವರು ಅನುವಾದ ಶಬ್ದವನ್ನು ಅರ್ಥೈಸುತ್ತಾ 'ಪ್ರಾಪ್ತಸ್ಯ ಪುನಃಕಥನ' ಅಥವಾ 'ಜ್ಞಾತಾರ್ಥಸ್ಯ ಪ್ರತಿಪಾದನ' ಎಂದರೆ 'ಪೂರ್ವದಲ್ಲಿ ಹೇಳಿದ್ದನ್ನು ಇನ್ನೊಮ್ಮೆ ಹೇಳುವುದು' ಎಂದಿದ್ದಾರೆ. 'ಭಾಷಾಂತರ'ಕ್ಕೆ ಸಂಸ್ಕೃತದಲ್ಲಿ 'ಇನ್ನೊಂದು ಭಾಷೆ' ಎಂಬ ಅರ್ಥವಿರುವುದರಿಂದ ಒಂದು ಭಾಷೆಯಲ್ಲಿ ಹೇಳಿರುವುದನ್ನು ಇನ್ನೊಂದು ಭಾಷೆಯಲ್ಲಿ ಹೇಳುವುದೇ ಭಾಷಾಂತರ ಎನ್ನಬಹುದು. **'ತರ್ಜುಮೆ'** ಇದು ಉರ್ದುಭಾಷೆಯ 'ತರ್ಜುಮಾ' ಶಬ್ದದಿಂದ ಬಂದದ್ದಾಗಿದ್ದು ಉರ್ದು ಪ್ರಭಾವ ಸಾಕಷ್ಟಿರುವ ಹಳೇಮೈಸೂರು ಪ್ರದೇಶದಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ[೧].

ಭಾಷಾಂತರದ ಬಗೆಗಿನ ಜಿಜ್ಞಾಸೆ ನಮ್ಮ ದೇಶೀ ಸಾಹಿತ್ಯದಲ್ಲಾಗಲಿ, ಸಂಸ್ಕೃತದಲ್ಲಾಗಲಿ ಬಹಳಷ್ಟು ನಡೆದಿಲ್ಲ ಎಂಬುದು ತಿಳಿದಿರುವ ವಿಚಾರ. ಆದರೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಈ ಬಗ್ಗೆ ಸಾಕಷ್ಟು ಆಲೋಚನೆ-ವಿವೇಚನೆ ನಡೆದಿರುವುದು ಕಂಡುಬರುತ್ತದೆ. ಬಹುಶಃ ಭಾಷಾಂತರದ ಪ್ರಯೋಜನವನ್ನು ಮನಗಂಡೇ ಪಾಶ್ಚಾತ್ಯ ಸಾಹಿತ್ಯದಲ್ಲಿ ಭಾಷಾಂತರದ ಮಹಾಪೂರವೇ ಹರಿದುಬಂದಿದೆ. ಪಾಶ್ಚಾತ್ಯ ಸಾಹಿತ್ಯದ ಪೈಕಿ ಇಂಗ್ಲಿಷ್ ಸಾಹಿತ್ಯ ಭಾಷಾಂತರಕ್ಕೆ ಅಗ್ರಪಂಕ್ತಿ ಸಿಕ್ಕಿದೆ. ಇಂಗ್ಲಿಷ್ ಭಾಷೆಯಲ್ಲಿ ಭಾಷಾಂತರ ಪದಕ್ಕೆ ಸಂವಾದಿಯಾಗಿ ವಿವಿಧ ರೂಪಗಳನ್ನು ಬಳಸಲಾಗುತ್ತದೆ. `Translation', `Version', `Rendering' ಈ ಮೂರು ಪದಗಳು ಭಾಷಾಂತರ ಎಂಬ ಪದವನ್ನು ಅರ್ಥೈಸುತ್ತವೆಯಾದರೂ Version ಎಂಬ ಪದಕ್ಕೆ 'ಬೈಬಲ್ಲಿನ ಭಾಷಾಂತರ' ಎಂಬ ವಿಶಿಷ್ಟಾರ್ಥವೂ ಇದೆ. Translation ಎಂಬ ಶಬ್ದವೂ ಕೂಡ ಮೂಲದಲ್ಲಿ ಬೇರೆಯೇ ಅರ್ಥವನ್ನು ಹೊಂದಿತ್ತು. "ವಾಸ್ತವವಾಗಿ 'translation' ಶಬ್ದಕ್ಕೆ 'ಚಪ್ಪಲಿ ರಿಪೇರಿ ಮಾಡುವುದು' ಎಂಬುದರಿಂದ ಹಿಡಿದು 'ಸಜೀವ ಸ್ವರ್ಗಾರೋಹಣ' ಎಂಬುದರವರೆಗೆ ನಾನಾ ಅರ್ಥಗಳಿವೆ". [ಪ್ರಧಾನ ಗುರುದತ್ತ ; ೨೦೦೭; ಪು. ೨] ಹೇಗೆ ಪ್ರಚಲಿತ ಅರ್ಥಕ್ಕಿಂತ ಭಿನ್ನವಾದ ಇನ್ನೊಂದು ಅರ್ಥದಲ್ಲಿ ಒಂದು ಶಬ್ದ ಬಳಕೆಯಾಗುತ್ತಿತ್ತು ಹಾಗೂ ಕಾಲಾಂತರದಲ್ಲಿ ಬೇರೆಯದೇ ಅರ್ಥವನ್ನು ಶಬ್ದವೊಂದು ಕಟ್ಟಿಕೊಳ್ಳುತ್ತದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ವಿಜ್ಞಾನ, ತಂತ್ರಜ್ಞಾನ

---

೧. ತುಳು ಭಾಷೆಯಲ್ಲಿಯೂ ಭಾಷಾಂತರಕ್ಕೆ 'ತರ್ಜುಮೆ' ಎಂಬ ಪದವನ್ನು ಬಳಸಲಾಗುತ್ತದೆ.

ಬೆಳೆಯುತ್ತಿರುವ ಇಂದಿನ ಆಧುನಿಕ ಜಗತ್ತಿನಲ್ಲಿ ಪ್ರಪಂಚದ ಯಾವುದೇ ಮೂಲೆಯಿಂದಲಾದರೂ ಜ್ಞಾನವನ್ನು ಸಂಗ್ರಹಿಸುವ ಒಂದು ಮಾಧ್ಯಮವಾಗಿ ಭಾಷಾಂತರ ಕಾರ್ಯಮಾಡುತ್ತಿದೆ. ಆಧುನಿಕ ಮನುಷ್ಯನಿಗೂ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು, ಅದು ಜಗತ್ತಿನ ಯಾವುದೇ ಮೂಲೆಯಲ್ಲಿರಲಿ ಅದನ್ನು ತನ್ನದಾಗಿಸಿಕೊಳ್ಳಬೇಕು ಎಂಬ ಬಯಕೆ ಹೆಚ್ಚುತ್ತಿರುವುದರಿಂದಲೇ ಭಾಷಾಂತರದ ಮೊರೆಹೊಕ್ಕು ಈ ಜ್ಞಾನವನ್ನು ತನ್ನದಾಗಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಹೀಗಾಗಿ ಜ್ಞಾನಕ್ಷೇತ್ರ ದಿನೇ ದಿನೇ ಬೆಳೆಯುತ್ತಿದೆ. ಭಾಷಾಂತರವೂ ಬೆಳೆಯುತ್ತಿದೆ. ಜ್ಞಾನಕ್ಷೇತ್ರದ ಮುನ್ನಡೆಯಲ್ಲಿಯೂ ಭಾಷಾಂತರ ಪ್ರಮುಖವಾದ ಸ್ಥಾನವನ್ನು ವಹಿಸಿದೆ ಎನ್ನಬಹುದು.

ಭಾಷಾಂತರ ಎಷ್ಟರಮಟ್ಟಿಗೆ ಬೆಳೆದಿದೆ ಎಂದರೆ ಲಂಡನ್‌ನಿನ 'ಟೈಮ್ಸ್ ಲಿಟರರಿ ಸಪ್ಲಿಮೆಂಟ್' ವರದಿ ಮಾಡಿರುವಂತೆ ಪಾಶ್ಚಾತ್ಯ ಸಾಹಿತ್ಯ ಪ್ರಪಂಚದ ಶೇಕಡಾ ೩೦ರಷ್ಟು ಪ್ರಕಟಣೆಗಳು ಭಾಷಾಂತರವೇ ಆಗಿರುತ್ತದೆ. ಕನ್ನಡದಲ್ಲಿ ಪ್ರಕಟಗೊಳ್ಳುವ ಕೃತಿಗಳ ಹತ್ತಾರು ವರ್ಷಗಳ ಅಂಕಿಅಂಶಗಳನ್ನು ಗಮನಿಸಿದರೂ ಶೇ. ೧೦ರಷ್ಟು ಪ್ರಕಟಣೆಗಳು ಅನುವಾದಗಳೇ ಆಗಿರುತ್ತದೆ. ಇಲ್ಲಿ ಕನ್ನಡದಲ್ಲೂ ಭಾಷಾಂತರ ಎಷ್ಟು ಪ್ರಭಾವ ಬೀರಿದೆ ಎಂಬುದು ತಿಳಿಯುತ್ತದೆ. ಇತ್ತೀಚಿನ ದಿನಗಳಲ್ಲಿ ಸಾರ್ವಜನಿಕ ಸಂಸ್ಥೆಗಳಾದ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್‌ಟ್ರಸ್ಟ್, ಭಾರತೀಯ ಜ್ಞಾನಪೀಠ ಮೊದಲಾದವುಗಳು, ಬಹುತೇಕ ಎಲ್ಲಾ ವಿಶ್ವವಿದ್ಯಾನಿಲಯಗಳು, ಧಾರ್ಮಿಕ ಸಂಸ್ಥೆಗಳು ಅನುವಾದ ಸಾಹಿತ್ಯಕ್ಕೆ ಹೆಚ್ಚಿನ ಆದ್ಯತೆ ನೀಡಿ ಸಾಕಷ್ಟು ಅನುವಾದಗಳು ಪ್ರಕಟವಾಗುವಂತೆ ಮಾಡುತ್ತಿವೆ. ಹಲವು ವಿಶ್ವವಿದ್ಯಾಲಯಗಳಲ್ಲಿ ಅನುವಾದ ಒಂದು ಅಧ್ಯಯನ ಶಿಸ್ತಾಗಿ ರೂಪುಗೊಂಡಿರುವುದನ್ನು ಕಾಣಬಹುದಾಗಿದೆ. ಹಲವು ಜನಪ್ರಿಯ ನಿಯತಕಾಲಿಕಗಳನ್ನು ನೋಡಿದರೂ ಅನೇಕ ಕಥೆ, ಕಾದಂಬರಿ, ಕವನ ಮುಂತಾದವುಗಳು ಅನುವಾದಗೊಂಡು ಪ್ರಕಟವಾಗುತ್ತಿರುವುದನ್ನು ಕಾಣಬಹುದಾಗಿದ್ದು ಇವು ಅನುವಾದ ಆಧುನಿಕ ಜಗತ್ತಿನಲ್ಲಿ ಜ್ಞಾನದ ವೃದ್ಧಿಯ ಸಾಧನವಾಗಿ ಒಂದು ಕಡೆಯ ಜ್ಞಾನವನ್ನು ಇನ್ನೊಂದು ಕಡೆಗೆ ಕೊಂಡೊಯ್ಯುವ ವಾಹಕವಾಗಿ ಕೆಲಸಮಾಡುತ್ತಿದೆ ಹಾಗೂ ಆಧುನಿಕ ಜಗತ್ತಿನಲ್ಲಿ ಮನ್ನಣೆಯನ್ನು ಪಡೆದುಕೊಂಡು ಸಾಹಿತ್ಯದ, ಶಿಕ್ಷಣದ ಒಂದು ಪ್ರಕಾರವಾಗಿ ಅತ್ಯಂತ ವೇಗವಾಗಿ ಬೆಳೆಯುತ್ತಿದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

ಅಭಿವೃದ್ಧಿಯನ್ನು ಬಯಸುವ ಜಗತ್ತಿನಲ್ಲಿ ಅನೇಕ ರೀತಿಯಲ್ಲಿ ಪರಿವರ್ತನೆಗಳು ನಡೆಯುತ್ತಲೇ ಇರುತ್ತವೆ. ಜಾಗತೀಕರಣದ ಪ್ರಭಾವದಿಂದಾಗಿ ಜಗತ್ತು ಇಂದು ವಿಜ್ಞಾನ,

ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಕಷ್ಟು ಹೊಸತುಗಳನ್ನು ಕಂಡುಕೊಳ್ಳುತ್ತಿದೆ. ಹೊಸ ಹೊಸ ಆವಿಷ್ಕಾರಗಳಿಗೆ, ಹೊಸ ಹೊಸ ಆಲೋಚನಾ ಕ್ರಮಗಳಿಗೆ ಅಧ್ಯಯನವನ್ನು ನೀಡುವ ಈ ಕ್ಷೇತ್ರಕ್ಕೆ ಭಾಷಾಂತರದ ಅನಿವಾರ್ಯತೆ ತೀರಾ ಇದೆ. ಭಾಷಾಂತರದ ನೆರವಿಲ್ಲದೇ ಈ ಕ್ಷೇತ್ರದಲ್ಲಿ ಯಾವ ಪ್ರಗತಿಯನ್ನು, ಪರಿವರ್ತನೆಯನ್ನು ಕಂಡುಕೊಳ್ಳುವುದು ಸಾಧ್ಯವೇ ಇಲ್ಲ ಎಂಬಷ್ಟರಮಟ್ಟಿಗೆ ಭಾಷಾಂತರ ವಿಜ್ಞಾನ ತಂತ್ರಜ್ಞಾನಕ್ಷೇತ್ರಕ್ಕೆ ಅನಿವಾರ್ಯವಾಗಿ ಬಿಟ್ಟಿದೆ. ಭಾಷಾಂತರದ ಪ್ರಯೋಜನವನ್ನು ಪಡೆದುಕೊಂಡೇ ಜಗತ್ತಿನ ಮುಂದುವರಿದ ರಾಷ್ಟ್ರಗಳು ಹೆಚ್ಚಿನ ಸಾಧನೆಗಳನ್ನು ಮಾಡುತ್ತಿವೆ ಎನ್ನಬಹುದು. ಇಲ್ಲಿ ಭಾಷಾಂತರದ ಶಾಲೆಗಳನ್ನೇ ಸ್ಥಾಪಿಸಿ ಅತ್ಯಂತ ಶೀಘ್ರದಲ್ಲಿ ಬೇರೆ ಭಾಷೆಯಲ್ಲಿ ಪ್ರಕಟವಾದ ಕೃತಿಗಳನ್ನು ಭಾಷಾಂತರಿಸುವ ವ್ಯವಸ್ಥೆ ಇದೆ. "ರಷ್ಯಾ ಮತ್ತು ಜಪಾನಿನಂತಹ ಕೆಲವು ಮುಂದುವರಿದ ದೇಶಗಳಲ್ಲಿ ಸ್ಥಾಪಿತವಾಗಿರುವ ಭಾಷಾಂತರ ಶಾಲೆಗಳು ಕ್ಷಿಪ್ರಾತಿಕ್ಷಿಪ್ರವಾಗಿ –ಸುಮಾರು ೩೦ ದಿವಸಗಳಲ್ಲಿ ಬೇರೆ ಯಾವುದೇ ಭಾಷೆಯಲ್ಲಿ ಪ್ರಕಟವಾದ ಮಹತ್ವಪೂರ್ಣ ಗ್ರಂಥಗಳನ್ನು ತಮ್ಮ ಭಾಷೆಗೆ ಭಾಷಾಂತರಿಸಿಕೊಳ್ಳುವ ವ್ಯವಸ್ಥೆ ಮಾಡಿಕೊಂಡಿವೆ ಎಂದು ಹೇಳಲಾಗಿದೆ". [ಅದೇ ಪು. ೧೭] ಇದು ಇಂದು ಭಾಷಾಂತರದ ವಿಶ್ವವ್ಯಾಪಕ ಗುಣವನ್ನು ಎತ್ತಿ ತೋರಿಸುತ್ತದೆ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಅಭಿವೃದ್ಧಿಯಲ್ಲಿ ಭಾಷಾಂತರ ವಹಿಸುವ ಪ್ರಮುಖ ಪಾತ್ರವನ್ನು ಸಾಬೀತುಪಡಿಸುತ್ತದೆ.

ಇನ್ನು ಭಾಷಾಂತರದ ಮುಖಾಂತರ ಸಂಸ್ಕೃತಿಯ ವಿನಿಮಯ ಸಾಧ್ಯವಾಗುತ್ತದೆ. ವಿವಿಧ ಸಂಸ್ಕೃತಿಗಳ ವಿನಿಮಯದ ಮುಖೇನ ಭಾವನಾತ್ಮಕವಾದ ಏಕತೆಯನ್ನು ಸಾಧಿಸಲು ಇದರಿಂದ ಸಾಧ್ಯವಾಗುತ್ತದೆ. ಪರಸ್ಪರ ಅರಿವನ್ನು ಉಂಟುಮಾಡಲು ಇದು ಸಹಕಾರಿ. ಭಾಷಾಂತರದಿಂದ ಭಾಷೆ ಪರಿತವಾಗುವುದು, ಹೊಸತನವನ್ನು ಕಂಡುಕೊಳ್ಳುವುದು ಸಾಧ್ಯವಾಗುತ್ತದೆ. ಬೇರೆ ಬೇರೆ ಭಾಷೆಗಳ ಗುಣಾವಗುಣಗಳು ಪರಿಚಿತವಾಗುತ್ತವೆ. ಹಾಗೂ ಭಾಷಾಂತರದಲ್ಲಿ ತೌಲನಿಕವಾದ ವಿಮರ್ಶೆ ಏರ್ಪಡುವುದರಿಂದ ನಮಗೆ ನಮ್ಮ ಭಾಷೆ, ಸಾಹಿತ್ಯಗಳ ಬಗೆಗಿರುವ ದುರಭಿಮಾನ, ಅತಿರೇಕಗಳು ದೂರವಾಗುತ್ತವೆ. ನಮ್ಮ ಭಾಷೆ, ಸಾಹಿತ್ಯದ ನೆಲೆಬೆಲೆಗಳು ಸ್ಪಷ್ಟವಾಗಿ ಅರಿವಾಗಲು ಭಾಷಾಂತರ ಸಹಕಾರಿಯಾಗುತ್ತದೆ.

ಭಾಷಾಂತರದ ಕ್ರಾಂತಿಕಾರಕ ಪರಿಣಾಮಗಳು ಕೇವಲ ಸಾಹಿತ್ಯಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿದುದಾಗಿರದೆ ಅದು ಇತರ ಕ್ಷೇತ್ರಗಳಾದ ರಾಜಕೀಯ, ಸಾಮಾಜಿಕ ಕ್ಷೇತ್ರಗಳ್ಲೂ ಕ್ರಾಂತಿಗಳನ್ನು ಉಂಟುಮಾಡಬಹುದು. "ಪಾಶ್ಚಾತ್ಯ ಸಾಮಾಜಿಕ–ರಾಜಕೀಯ ಇತಿಹಾಸವನ್ನು ಬಲ್ಲವರಿಗೆ ಬೈಬಲ್ಲಿನ ಭಾಷಾಂತರ ಜನರ ಮೌಢ್ಯ–ಅಜ್ಞಾನಗಳನ್ನು ದೂರಮಾಡಿ, ಧಾರ್ಮಿಕ

ಹಾಗೂ ಸಾಮಾಜಿಕ ಗುಲಾಮಗಿರಿಯನ್ನು ತೊಡೆದುಹಾಕಿ ಎಂಥ ಕ್ರಾಂತಿಗೆ ದಾರಿಮಾಡಿಕೊಟ್ಟಿತು ಎಂಬುದು ಗೊತ್ತಿದೆ". [ಅದೇ ಪು. ೧೮]

ಭಾರತ ದೇಶ ಬಹುಭಾಷೆಗಳನ್ನು ಆಡುವ ದೇಶ. ಇಲ್ಲಿ ಭಾಷಾಂತರ ತೀರಾ ಅಗತ್ಯ. ಇಲ್ಲದಿದ್ದರೆ ದೇಶದ ಒಳಗಡೆಯೇ ಒಬ್ಬರನ್ನೊಬ್ಬರು ಅರಿಯದ ವಾತಾವರಣ ನಮಗಾಗಬಹುದು; ಅರಿವಿನ ಏಕತೆಯ ಕೊರತೆಯನ್ನು ಕಾಣಬಹುದು. ನಮ್ಮ ದೇಶ, ಭಾಷೆಯನ್ನು ಅರಿಯುವಲ್ಲಿಯೇ ನಾವು ವಿಫಲರಾಗಬಹುದು. ಭಾರತದಲ್ಲಿ ಭಾಷಾಂತರಕ್ಕೆ ಹೆಚ್ಚಿನ ಮಹತ್ತ್ವವನ್ನು ನೀಡಲಾಗಿದ್ದು ಅನೇಕ ಸಂಸ್ಥೆಗಳು ಭಾಷಾಂತರದಲ್ಲಿ ನಿರಂತರವಾಗಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಬಹುಭಾಷೆಗಳನ್ನು ಹೊಂದಿರುವ ಭಾರತ ದೇಶಕ್ಕೆ ಭಾಷಾಂತರದ ಅಗತ್ಯ ತೀರಾ ಇದೆ. ಕೇಂದ್ರ ಸಾಹಿತ್ಯ ಅಕಾಡೆಮಿ, ಕರ್ನಾಟಕರಾಜ್ಯ ಸಾಹಿತ್ಯ ಅಕಾಡೆಮಿಗಳು ಭಾಷಾಂತರ ಕ್ಷೇತ್ರದಲ್ಲಿ ಗಣನೀಯವಾದ ಕಾರ್ಯದಲ್ಲಿ ತೊಡಗಿಕೊಂಡಿವೆ. ಅಕಾಡೆಮಿ ಪ್ರಶಸ್ತಿಯನ್ನು ಪಡೆದುಕೊಂಡಿರುವ ಹಾಗೂ ಇನ್ನಿತರ ಮಹತ್ತ್ವದ ಗ್ರಂಥಗಳನ್ನು ಆಯ್ದು ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದಿಸುವ ಕಾರ್ಯದಲ್ಲಿ ನಿರತವಾಗಿದೆ. ಭಾಷಾಂತರವನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ರಾಷ್ಟ್ರೀಯ ಹಾಗೂ ಪ್ರಾದೇಶಿಕ ಅನುವಾದ ಕಾರ್ಯಾಗಾರಗಳನ್ನು ನಡೆಸುತ್ತಿರುವುದು ಇದಕ್ಕೆ ಸಾಕ್ಷಿ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯೂ ಕೂಡ ಈ ನಿಟ್ಟಿನಲ್ಲಿ ಗಮನಾರ್ಹವಾದ ಕೆಲಸ ಮಾಡುತ್ತಿದ್ದು ಹಲವಾರು ವರ್ಷಗಳಿಂದ ಸಾಹಿತ್ಯಿಕ ಮತ್ತು ಸಾಹಿತ್ಯೇತರ ಅನುವಾದ ಕೃತಿಗಳಿಗೆ ಬಹುಮಾನವನ್ನು ನೀಡಿ ಪ್ರೋತ್ಸಾಹಿಸುತ್ತ ಬಂದಿದೆ. ಈ ಸಂಸ್ಥೆಯಿಂದ ಹೊರಬರುತ್ತಿರುವ 'ಅನಿಕೇತನ' ಎಂಬ ತ್ರೈಮಾಸಿಕ ಪತ್ರಿಕೆ ಅನುವಾದಗಳಿಗೆ ಮೀಸಲಾಗಿರುವ ಪತ್ರಿಕೆಯಾಗಿದೆ. ಇತ್ತೀಚಿನ ಬೆಳವಣಿಗೆಯಲ್ಲಿ ಪ್ರತ್ಯೇಕವಾದ ಅನುವಾದ ಸಾಹಿತ್ಯ ಅಕಾಡೆಮಿಯೇ ಸ್ಥಾಪಿತವಾಗಿರುವುದರಿಂದ ಭಾಷಾಂತರದ ಚಟುವಟಿಕೆಗಳಿಗೆ ಹೊಸದಾದ ಆಯಾಮ ದೊರಕಿದಂತಾಗಿದೆ.

ಈ ಎಲ್ಲ ಹಿನ್ನೆಲೆಗಳ ಆಧಾರದ ಮೇಲೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ನಡುವಿನ ಭಾಷಾಂತರದ ಪ್ರಕ್ರಿಯೆಯನ್ನು ಅವಲೋಕಿಸಿದಾಗ ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರಗೊಂಡ ಕೃತಿಗಳು ಅಪಾರವಾಗಿದ್ದು ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಗೊಂಡ ಕೃತಿಗಳು ತೀರಾ ಕಡಿಮೆ ಎಂಬುದನ್ನು ಗಮನಿಸಬಹುದಾಗಿದೆ. ಅಲ್ಲೊಂದು ಇಲ್ಲೊಂದು ಕೃತಿಗಳು ಭಾಷಾಂತರಗೊಂಡಿವೆಯಾದರೂ ತೀರಾ ಗಮನಾರ್ಹವಾದ ರೀತಿಯಲ್ಲಿ ಭಾಷಾಂತರಗೊಂಡಿಲ್ಲ ಎಂಬುದಂತೂ ಸ್ಪಷ್ಟ. ಇಂಗ್ಲಿಷ ಸಾಹಿತ್ಯದಿಂದ ಕನ್ನಡಕ್ಕೆ

ಭಾಷಾಂತರಿಸಿದವರಲ್ಲಿ ಕನ್ನಡಿಗರೇ ಹೆಚ್ಚು, ಹಾಗೂ ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಗೊಳಿಸಿದವರೂ ಕೂಡ ಕನ್ನಡಿಗರೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತಾರೆ. ಭಾಷಾಂತರಕ್ಕೆ ಇತ್ತೀಚಿನ ದಿನಗಳಲ್ಲಿ ಇಷ್ಟೊಂದು ಪ್ರಾಮುಖ್ಯತೆ ದೊರೆತಿದ್ದರೂ ವಿದೇಶೀ ಭಾಷಾಂತರಕಾರರು ಕನ್ನಡ-ಇಂಗ್ಲಿಷಗಳ ಭಾಷಾಂತರಿಸದಿರಲು ಕಾರಣಗಳೇನಿರಬಹುದು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಂಗ್ಲಿಷ ಭಾಷಾಂತರಕಾರರಿಗೆ ಕನ್ನಡ ಭಾಷೆಯ ಸಂಪೂರ್ಣ ಹಿಡಿತವಿಲ್ಲದಿರುವುದು ಎಂಬ ಕಾರಣ ಕೊಡಬಹುದಾದರೂ ಇದಕ್ಕೂ ಮೀರಿದ ಇನ್ನಿತರ ಕಾರಣಗಳು ಇದ್ದಿರಬಹುದು ಎಂಬ ಅನುಮಾನ ಹುಟ್ಟಿಕೊಳ್ಳುತ್ತದೆ.

ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಗೊಂಡ ಕನ್ನಡದ ಸೃಜನಸಾಹಿತ್ಯದ ವಿವಿಧ ಪ್ರಕಾರಗಳಾದ ಕಾವ್ಯ, ನಾಟಕ, ಕತೆ, ಕಾದಂಬರಿ, ಪ್ರಬಂಧ ಮುಂತಾದವುಗಳಲ್ಲಿ ಕಾದಂಬರಿ ಪ್ರಕಾರವನ್ನು ಗಮನಿಸಿದಾಗ ಕಾದಂಬರಿಗಳು ಇಂಗ್ಲಿಷ ಭಾಷೆಗೆ ಅನುವಾದಗೊಂಡದ್ದು ತೀರಾ ಕಡಿಮೆ ಎನ್ನಬಹುದು. ಭಾಷಾಂತರಗೊಂಡ ಕಾದಂಬರಿಗಳಲ್ಲಿ ಶಿವರಾಮ ಕಾರಂತರ ಕಾದಂಬರಿಗಳೇ ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಕಾದಂಬರಿಗಳು ಏಕೆ ಹೆಚ್ಚಿನ ಸಂಖ್ಯೆಯಲ್ಲಿ ಅನುವಾದಗೊಳ್ಳುತ್ತಿಲ್ಲ ಎಂಬ ಅಂಶವನ್ನು ಜಿಜ್ಞಾಸೆಗೆ ಒಳಪಡಿಸಿದಾಗ ಒಂದು ಭಾಷೆಯ ಕಾದಂಬರಿಯ ವಿಶಿಷ್ಟ ಶೈಲಿಯನ್ನು ಇನ್ನೊಂದು ಭಾಷೆಗೆ ಅಳವಡಿಸುವುದು ಅಷ್ಟೊಂದು ಸುಲಭಸಾಧ್ಯವಾದ ವಿಚಾರವಲ್ಲ. ಸಾಮಾನ್ಯ ಕಾದಂಬರಿಗಳ ವಿಷಯದಲ್ಲಿ ಈ ಮಾತು ಅಷ್ಟಾಗಿ ಅನ್ವಯವಾಗಲಾರದಾದರೂ ಒಂದು ಸಾಂಸ್ಕೃತಿಕ ಪಠ್ಯದ ವಿಚಾರದಲ್ಲಿ ಇದು ಸತ್ಯವಾದ ಮಾತು. ಇಂತಹ ಮಿತಿಯೊಳಗಡೆಯೂ ಭಾರತದ ಕೆಲವಾದರೂ ಮಹತ್ವದ ಲೇಖಕರ ಸಾಹಿತ್ಯಕೃತಿಗಳು ಜಾಗತಿಕ ಭಾಷೆಯಾದ ಇಂಗ್ಲಿಷಗೆ ಅನುವಾದಗೊಂಡಿರುವುದು ಸ್ವಾಗತಾರ್ಹವಾದ ಬೆಳವಣಿಗೆಯೇ ಸರಿ. ಆ ಮೂಲಕ ಭಾರತೀಯ ಸಾಹಿತ್ಯದ ಉತ್ಕೃಷ್ಟತೆ, ವಿಶಿಷ್ಟತೆ, ಅನನ್ಯತೆಗಳ ಕೆಲವು ಮಾದರಿಗಳಾದರೂ ಜಾಗತಿಕ ಮಟ್ಟದಲ್ಲಿ ಪರಿಚಿತವಾಗಿವೆ ಎಂದು ತೃಪ್ತಿಪಟ್ಟುಕೊಳ್ಳಬಹುದು. ಅಂತಹ ಮಹತ್ವದ ಲೇಖಕರಲ್ಲಿ ಶಿವರಾಮ ಕಾರಂತರೂ ಒಬ್ಬರು. ಕಾರಂತರ ಅನುವಾದಿತ ಕೃತಿಗಳ ಮೂಲಕ ಅವರು ವಿಶ್ವಸಾಹಿತಿಯಾಗಿ ಹೆಸರು ಪಡೆದಿದ್ದಾರೆ ಎನ್ನಬಹುದು[೧]. ಮೂಲತಃ ಒಬ್ಬ ಪ್ರಾದೇಶಿಕ ಕಾದಂಬರಿಕಾರರಾಗಿರುವ ಕಾರಂತರು ವಿಶ್ವಸಾಹಿತಿಯೂ ಹೌದೆಂಬುದನ್ನು

---

೧. ಕಾರಂತರ ಕಾದಂಬರಿಗಳು ಇತರ ಭಾಷೆಗೆ ಅನುವಾದ ಗೊಳ್ಳದಿದ್ದರೂ ಅವರು ವಿಶ್ವಸಾಹಿತಿಯೇ ಎಂಬುವುದರಲ್ಲಿ ಎರಡು ಮಾತಿಲ್ಲ. ಆದರೆ ಭಾಷಾಂತರದ ಮೂಲಕ ಅವರು ವಿಶ್ವಸಾಹಿತಿ ಎಂಬುದು ಜಗತ್ತಿಗೆ ಪರಿಚಿತವಾಯಿತು.

ಜಗತ್ತಿಗೆ ಪರಿಚಯಿಸುವ ನಿಟ್ಟಿನಲ್ಲಿ ಇಂಗ್ಲಿಷಿಗೆ ಭಾಷಾಂತರಗೊಂಡ ಅವರ ಕಾದಂಬರಿಗಳು ಯಾವ ರೀತಿಯಲ್ಲಿ ಸಫಲವಾಗಿವೆ ಎಂಬುದನ್ನು ವಿವಿಧ ಆಯಾಮಗಳ ಮೂಲಕ ಕಂಡುಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಕಾರಂತರು ಕನ್ನಡ ಸಾಹಿತ್ಯಲೋಕ ಕಂಡ ಶ್ರೇಷ್ಠ ಬರಹಗಾರರು. ಅವರ ಕಾದಂಬರಿಗಳು ಕನ್ನಡ ಸಾಹಿತ್ಯಲೋಕದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನಗಳನ್ನು ಗಳಿಸಿಕೊಂಡಿವೆ. ಎಲ್ಲ ಸಫಲ ಕಾದಂಬರಿಕಾರರಂತೆ ಕಾರಂತರು ವ್ಯಕ್ತಿಗೂ ಅವನ ಪರಿಸರಕ್ಕೂ ಇರುವ ಮತ್ತು ಇರಬೇಕಾದ ಸಂಬಂಧವನ್ನು ತಮ್ಮ ಕಾದಂಬರಿಗಳಲ್ಲಿ ನೇರವಾಗಿಯೋ, ಬಳಸಾಗಿಯೋ ಉಪಯೋಗಿಸಿ ಕೊಂಡಿದ್ದಾರೆ. ಅವರು ಬರೆದಿರುವ ಕಾದಂಬರಿಗಳು ವೈವಿಧ್ಯತೆ, ಗಂಭೀರಪ್ರಜ್ಞೆ ಮತ್ತು ಕಲಾತ್ಮಕತೆ ಇವುಗಳಿಂದ ತುಂಬಿಕೊಂಡು ಕನ್ನಡ ಸಾಹಿತ್ಯಲೋಕಕ್ಕೆ ಪ್ರಮುಖ ಕೊಡುಗೆಯೆನಿಸಿವೆ. ಇವರ ಕಾದಂಬರಿಗಳು ಒಂದಲ್ಲ ಒಂದು ರೀತಿಯಿಂದ ವಿಶಿಷ್ಟವೆನಿಸಿವೆ. ಅವರ ಅನೇಕ ಕೃತಿಗಳು ಅನ್ಯಭಾಷೆಗೆ ಅನುವಾದಗೊಂಡಿವೆ. 'ಮರಳಿಮಣ್ಣಿಗೆ' ಒಂಬತ್ತು ಭಾಷೆಗಳಲ್ಲಿ, 'ಮೂಕಜ್ಜಿಯ ಕನಸು' ಆರು ಭಾಷೆಗಳಲ್ಲಿ, 'ಚೋಮನದುಡಿ' ಎಂಟು ಭಾಷೆಗಳಲ್ಲಿ, 'ಕುಡಿಯರ ಕೂಸು', 'ಅಳಿದ ಮೇಲೆ', 'ಬೆಟ್ಟದ ಜೀವ' –ಈ ಕಾದಂಬರಿಗಳು ತಲಾ ಮೂರು ಭಾಷೆಗಳಲ್ಲಿ, 'ಮೈಮನಗಳ ಸುಳಿಯಲ್ಲಿ' ಕಾದಂಬರಿ ಎರಡು ಭಾಷೆಗಳಲ್ಲಿ, 'ಸರಸಮ್ಮನ ಸಮಾಧಿ' ಒಂದು ಭಾಷೆಯಲ್ಲಿ ಅನುವಾದಗೊಂಡಿವೆ. ಕನ್ನಡ ಸಾಹಿತ್ಯದ ಇತರ ಕಾದಂಬರಿಕಾರರಿಗೆ ಹೋಲಿಸಿದರೆ ಇಷ್ಟೊಂದು ಸಂಖ್ಯೆಯಲ್ಲಿ ಇನ್ನಿತರ ಭಾಷೆಗಳಿಗೆ ಅನುವಾದಗೊಂಡ ಕಾದಂಬರಿಕಾರರು ಮತ್ತೊಬ್ಬರಿಲ್ಲ ಎಂಬುದು ಗಮನಿಸಬೇಕಾದ ಅಂಶ. ಕಾರಂತರ ಕಾದಂಬರಿಗಳಲ್ಲಿನ ವಿಶಿಷ್ಟತೆಯನ್ನು ಶ್ರೇಷ್ಠತೆಯನ್ನು ಇದು ಸಾಬೀತುಪಡಿಸುತ್ತದೆ.

ಇಂಗ್ಲಿಷ್ ಭಾಷೆಯಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ಬಗೆಗೆ ಅವಲೋಕಿಸುವುದಾದರೆ ಎ.ಎನ್. ಮೂರ್ತಿರಾಯರು ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಬೇರೆ ಬೇರೆ ಶೀರ್ಷಿಕೆಯಡಿಯಲ್ಲಿ ಮೂರು ಬಾರಿ ಅನುವಾದಿಸಿದ್ದು ಕಂಡುಬರುತ್ತದೆ. ೧೯೫೫ರಲ್ಲಿ `The Return to the soil', ೧೯೭೪ರಲ್ಲಿ `The whispering Earth' ಎಂದು ಹಾಗೂ ಇದೇ ಕೃತಿಯನ್ನು `Back to the soil' ಎಂದೂ ಅನುವಾದಿಸಿದ್ದು ಕಂಡುಬರುತ್ತದೆ. ಒಬ್ಬನೇ ಭಾಷಾಂತರಕಾರ ಮೂರು ಪ್ರತ್ಯೇಕವಾದ ಶೀರ್ಷಿಕೆಯಡಿಯಲ್ಲಿ ಅನುವಾದಿಸಲು ಕಾರಣವೇನು ಅಥವಾ ಕೇವಲ ಶೀರ್ಷಿಕೆಗಳನ್ನು ಮಾತ್ರ ಬದಲಿಸಲಾಗಿದೆಯೇ ಎಂಬುದನ್ನು ಕಂಡುಕೊಳ್ಳಬೇಕಾಗಿದೆ. ಇದೇ ಕೃತಿಯನ್ನು

ಇನ್ನೊಬ್ಬ ಅನುವಾದಕರಾದ ಪದ್ಮಾರಾಮಚಂದ್ರ ಶರ್ಮ ಅವರು ೨೦೦೨ರಲ್ಲಿ `Return to the Earth' ಎನ್ನುವ ಶೀರ್ಷಿಕೆಯಡಿಯಲ್ಲಿ ಅನುವಾದಿಸಿದ್ದಾರೆ. ಹೀಗೆ ಈ ಒಂದೇ ಕೃತಿ ಇಂಗ್ಲಿಷಿನಲ್ಲಿ ಒಟ್ಟು ನಾಲ್ಕು ಅನುವಾದವನ್ನು ಕಂಡಿದೆ. ಇನ್ನುಳಿದ ಕಾದಂಬರಿಗಳಾದ 'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಟಿ.ಎಸ್. ಸಂಜೀವ ರಾವ್ ಇವರು ೧೯೭೯ರಲ್ಲಿ `Mookajji's Visions' ಎಂದು, ಯು. ಆರ್. ಕಲ್ಕೂರ್ ೧೯೭೮ರಲ್ಲಿ 'ಚೋಮನದುಡಿ'ಯನ್ನು `Choma's Dreams' ಎಂಬ ಶೀರ್ಷಿಕೆಯಡಿಯಲ್ಲಿ, ಇದೇ ಅನುವಾದಕರು ಕಾರಂತರ 'ಸರಸಮ್ಮನ ಸಮಾಧಿ' ಕಾದಂಬರಿಯನ್ನು ೧೯೮೪ರಲ್ಲಿ `The Shrine' ಎಂಬ ಶೀರ್ಷಿಕೆಯನ್ನು ನೀಡಿ ಭಾಷಾಂತರಿಸಿದ್ದಾರೆ. ಎಚ್. ವೈ. ಶಾರದಾಪ್ರಸಾದ್ ಇವರು ಕಾರಂತರ 'ಕುಡಿಯರ ಕೂಸು' ಕಾದಂಬರಿಯನ್ನು `Head man of the Little Hill' ಎಂದು ೧೯೭೯ರಲ್ಲಿ ಅನುವಾದಿಸಿದ್ದಾರೆ. ಕಾರಂತರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಯನ್ನು ಕೂಡ ಇದೇ ಭಾಷಾಂತರಕಾರರು ೧೯೯೭ರಲ್ಲಿ `The woman of Basrur' ಎಂದು ಅನುವಾದಿಸಿರುತ್ತಾರೆ.

ಹೀಗೆ ಇಂಗ್ಲಿಷ ಭಾಷೆಯಲ್ಲಿ ಕಾರಂತರ ಒಟ್ಟು ಆರು ಕಾದಂಬರಿಗಳು ಭಾಷಾಂತರಗೊಂಡಿವೆ. ಈ ಎಲ್ಲ ಕಾದಂಬರಿಗಳು ಕಾರಂತರ ಜೀವಿತಾವಧಿಯಲ್ಲೇ ಅನುವಾದಗೊಂಡಿವೆ. 'ಮರಳಿಮಣ್ಣಿಗೆ' ಕೃತಿಯ ಪದ್ಮಾರಾಮಚಂದ್ರ ಶರ್ಮರ ಅನುವಾದ `Return to the Earth' ಹಾಗೂ ಎಚ್.ವೈ. ಶಾರದಾಪ್ರಸಾದರ 'ಮೈಮನಗಳ ಸುಳಿ' ಕಾದಂಬರಿಯ ಅನುವಾದ ``The woman of Basrur' ಕೃತಿಗಳು ಮಾತ್ರ ಕಾರಂತರ ಮರಣಾನಂತರ ಅನುವಾದಗೊಂಡ ಕೃತಿಗಳಾಗಿವೆ.

ಜಾಗತಿಕ ಮಟ್ಟದಲ್ಲಿ ಕಾದಂಬರಿಕಾರರಾಗಿ ಬೆಳೆದುನಿಂತ ಕಾರಂತರು ವಾಸ್ತವವಾದಿ ನೆಲೆಯಲ್ಲಿ ಪ್ರಾದೇಶಿಕ ಕಾದಂಬರಿಗಳನ್ನು ರಚಿಸಿದವರು. ಕಾರಂತರ ಕಾದಂಬರಿಗಳಲ್ಲಿ ಬರುವ ಪ್ರಾದೇಶಿಕತೆ, ಸಮಾಜ, ಅಲ್ಲಿ ನಡೆದಿರುವ ಶೋಷಣೆ, ದಲಿತವರ್ಗ ತನ್ನಿರುವಿಕೆಗಾಗಿ ಪಡುವ ಬವಣೆ, ಸಮಾಜದ ಆಗುಹೋಗುಗಳೊಂದಿಗೆ ಆ ಕಾಲದ ರಾಜಕೀಯ, ಧಾರ್ಮಿಕ ಜೀವನದ ಚಿತ್ರಣ ಈ ಮುಂತಾದ ವಿಚಾರಗಳು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗಬೇಕು. ಕಾರಂತರ ಕಾದಂಬರಿಗಳಲ್ಲಿ ವಿವರಿಸಿದ ಸಮಾಜ, ಸಂಸ್ಕೃತಿ, ಕಟ್ಟುಕಟ್ಟಳೆಗಳನ್ನು ಜಗತ್ತಿನ ಇನ್ನಿತರ ದೇಶಗಳೊಂದಿಗೆ ಹೋಲಿಸಿ ಅಲ್ಲಿನ ಸಮಾಜದಲ್ಲಿರುವ ಭಿನ್ನತೆಯನ್ನು ಕಂಡುಕೊಳ್ಳಲು ಕೂಡ ಭಾಷಾಂತರಗಳು ಸಹಕಾರಿ ಆದೀತು. ಮೇಲ್ನೋಟಕ್ಕೆ ಅವು ಭಿನ್ನವೆನಿಸಿದರೂ ಅವುಗಳಲ್ಲಿ ಅಡಗಿರುವ ಸಾಮ್ಯತೆಯನ್ನು ನಾವು ಗುರುತಿಸಬಹುದು.

ಈ ಎಲ್ಲ ಕಾರಣಗಳಿಂದಲೇ ಕಾರಂತರ ಕಾದಂಬರಿಗಳು ಜಾಗತಿಕ ಮಟ್ಟದಲ್ಲಿ ಹೆಚ್ಚು ಪರಿಚಿತವಾಗಬೇಕಾದ ಆವಶ್ಯಕತೆ ಇದೆ. ಈಗಾಗಲೇ ಗಮನಿಸಿದಂತೆ ಕಾರಂತರು ಬದುಕಿರುವಾಗಲೇ ಅವರ ಅನೇಕ ಕಾದಂಬರಿಗಳು ಅನ್ಯಭಾಷೆಗಳಿಗೆ ಅನುವಾದಗೊಂಡು ಪ್ರಕಟವಾಗಿವೆ. ಆದರೆ ಕಾರಂತರ ಸಾಹಿತ್ಯ ಸೃಷ್ಟಿಯ ವ್ಯಾಪಕತೆಯನ್ನು ಗಮನಿಸಿದಾಗ ಅವರ ಇನ್ನಷ್ಟು ಕೃತಿಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಳ್ಳಬೇಕಾದ ಆವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಭಾಷೆಗೆ ಅನುವಾದವಾದ ಕಾರಂತರ ಕಾದಂಬರಿಗಳನ್ನು ಮಾತ್ರ ಸೀಮಿತವಾಗಿಟ್ಟುಕೊಂಡು ಅನುವಾದದ ಸಾಧಕ-ಬಾಧಕಗಳನ್ನು ಕುರಿತು ಅಧ್ಯಯನ ನಡೆಸುವ ಉದ್ದೇಶವನ್ನು ಇರಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನ ಅಂಶಗಳನ್ನು ಚರ್ಚಿಸಲಾಗಿದೆ:

ಜಾಗತಿಕ ಭಾಷೆಗೆ ಕಾರಂತರ ಕಾದಂಬರಿಗಳ ಅನುವಾದ ಅವಶ್ಯವೇ? ಕಾರಂತರ ಸೃಜನಶೀಲತೆ, ಪರಿಸರ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಭಾಷೆಯ ಬಳಕೆ, ವಾಸ್ತವಿಕವಾದದ ನಿಲುವು, ಸಾಂಸ್ಕೃತಿಕ ತಿಳಿವು, ಅನುವಾದ ಸಮರ್ಥವಾಗಿ ಮೂಡಲು ಸಾಧ್ಯವಾಗಿದೆಯೇ? ಕಾರಂತರ ಕಾದಂಬರಿಗಳು ತಳೆದ ನಿಲುವು ಜಾಗತಿಕಮಟ್ಟಕ್ಕೆ ಸಮರ್ಥವಾಗಿ ತಲುಪಬಲ್ಲದೆ?

ಈ ಮೇಲಿನ ಅಂಶಗಳಲ್ಲದೇ ವಸಾಹತುಶಾಹಿ ಸಂಸ್ಕೃತಿಯ ಪ್ರಭಾವ ಕಾರಂತರ ಕಾದಂಬರಿಗಳ ಮೇಲೆ ಆಗಿರುವುದನ್ನು ಕಾದಂಬರಿಗಳ ಅವಲೋಕನದಲ್ಲಿ ಕಂಡುಕೊಳ್ಳಲಾಗುವುದು. ಜಾಗತಿಕ ಭಾಷೆಯಲ್ಲಿ ಭಾಷಾಂತರಗೊಂಡಿರುವ ಕಾರಂತರ ಕಾದಂಬರಿಗಳಲ್ಲಿ ಕಾರಂತರ ಪರಿಸರ, ಸಂಸ್ಕೃತಿ, ಸಮಾಜಗಳು ಮೂಡಿಬಂದ ಬಗೆಯನ್ನು ಅರಿಯುವ ಕುತೂಹಲದೊಂದಿಗೆ ಇಲ್ಲಿನ ಸಂಸ್ಕೃತಿಯ ವರ್ಗಾವಣೆ ಎಷ್ಟು ಪ್ರಮಾಣದಲ್ಲಿ ಆಗಿದೆ ಎಂಬುದನ್ನು ತಿಳಿದುಕೊಳ್ಳುವ ಉದ್ದೇಶವನ್ನೂ ಕೂಡ ಈ ಅಧ್ಯಯನ ಹೊಂದಿದೆ.

ಹೀಗೆ ಇಂಗ್ಲಿಷಿಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಗಳಲ್ಲಿನ ಭಾಷಿಕ ಮಹತ್ವ ಹಾಗೂ ಸಾಂಸ್ಕೃತಿಕ ಮಹತ್ವಗಳನ್ನು ಗುರುತಿಸುವುದರ ಜೊತೆಗೆ ಜಾಗತಿಕ ಸಂದರ್ಭದಲ್ಲಿ ಕಾರಂತರ ಕಾದಂಬರಿಗಳನ್ನು ಅನುವಾದಕರು ಪುನರ್ ಸೃಷ್ಟಿಸಿದ ಬಗೆಯನ್ನು ಅರಿತುಕೊಂಡು ಆ ಮೂಲಕ ಅನುವಾದಿತ ಕೃತಿಗಳಲ್ಲಿನ ಸಾಧ್ಯತೆ ಹಾಗೂ ಮಿತಿಗಳನ್ನು ಕುರಿತು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ಇಂಗ್ಲಿಷಗೆ ಭಾಷಾಂತರಗೊಂಡ ಕಾರಂತರ ಆರು ಕಾದಂಬರಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳುವ ಮಿತಿಯನ್ನು ಹಾಕಿಕೊಳ್ಳಲಾಗಿದೆ.

## ೨. ಪ್ರಸ್ತುತ ಕ್ಷೇತ್ರದಲ್ಲಿನ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ವಾಸ್ತವವಾದಿ ಹಾಗೂ ಮಾನವತಾವಾದಿ ನೆಲೆಯಿಂದ ರೂಪಿತವಾದ ಕಾರಂತರ ಕಾದಂಬರಿಗಳು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷವಾದ ಮಹತ್ವವನ್ನು ಪಡೆದುಕೊಂಡಿವೆ. ಕರ್ನಾಟಕದ ಕರಾವಳಿ ಸಂಸ್ಕೃತಿಯ ವಿವಿಧ ಮಜಲುಗಳ ಚಿತ್ರಣವನ್ನು ನೀಡುವ ಈ ಕಾದಂಬರಿಗಳು ಕನ್ನಡದ ಪ್ರಾದೇಶಿಕ ಕಾದಂಬರಿಗಳೆಂದು ಗುರುತಿಸಲ್ಪಟ್ಟಿವೆ. ಪ್ರಾದೇಶಿಕತೆಯನ್ನು ಒಳಗೊಂಡೇ ಜಾಗತಿಕ ಅಂಶಗಳನ್ನು ಹೊಂದಿರುವ ಕಾರಂತರ ಕೆಲವು ಕಾದಂಬರಿಗಳು ಭಾರತದ ಇನ್ನಿತರ ಭಾಷೆಗಳಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ. ಕಾರಂತರ ಕಾದಂಬರಿಗಳಲ್ಲಿ ಚರ್ಚಿತವಾದ ವಸ್ತು ವಿಶೇಷಗಳು ಜಗತ್ತಿನ ಇನ್ನಿತರ ಪ್ರದೇಶಗಳಿಗೆ ತಲುಪುವಲ್ಲಿ ಜಾಗತಿಕ ಭಾಷೆಯಾದ ಇಂಗ್ಲಿಷ ಮಹತ್ವದ ಪಾತ್ರವನ್ನು ವಹಿಸಿದೆ. ಇಂಗ್ಲಿಷ ಭಾಷೆಯೂ ಸೇರಿದಂತೆ ಇತರ ಸುಮಾರು ೧೪ ವಿವಿಧ ಭಾಷೆಗಳಲ್ಲಿ ಕಾರಂತರ ಕಾದಂಬರಿಗಳು ಅನುವಾದಗೊಂಡಿವೆ. ಸೀಮಿತವಾದ ಓದುಗರನ್ನು ಹೊಂದಿರುವ ಪ್ರದೇಶದಲ್ಲಿ ರಚಿತವಾದ ಸಾಹಿತ್ಯ ಕೃತಿಗಳು ಜಗತ್ತಿನ ಇತರ ಭಾಷೆಗಳನ್ನು ಆಡುವ ಓದುಗರನ್ನು ತಲುಪುವಲ್ಲಿ ಭಾಷಾಂತರ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಈ ಉದ್ದೇಶದಿಂದಲೇ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾಕಷ್ಟು ಭಾಷಾಂತರಗಳು ಹಿಂದಿನಿಂದಲೂ ನಡೆಯುತ್ತಲೇ ಬಂದಿವೆ. ಭಾಷಾಂತರದ ರೀತಿನೀತಿಗಳನ್ನು ಅರಿತುಕೊಳ್ಳಲು ಸಹಕಾರಿಯಾಗುವಂತಹ ಅನೇಕ ಅಧ್ಯಯನಗಳು ಕನ್ನಡದಲ್ಲಿ ಇದುವರೆಗೆ ನಡೆದಿವೆ ಹಾಗೂ ಪ್ರಸ್ತುತ ಸಂದರ್ಭದಲ್ಲಿಯೂ ಈ ಬಗೆಯ ಅಧ್ಯಯನಗಳು ನಡೆಯುತ್ತಲೇ ಇವೆ. ಭಾಷಾಂತರದ ಕುರಿತಾಗಿ ನಡೆದಿರುವ ಅಧ್ಯಯನಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ.

**ಅ. ಭಾಷಾಂತರದ ಕುರಿತಾದ ವಿಮರ್ಶಾಕೃತಿಗಳು**

೧. "ಭಾಷಾಂತರದ ಪ್ರವೇಶಿಕೆ" ಹೆಸರೇ ಸೂಚಿಸುವಂತೆ ಭಾಷಾಂತರದ ವಿಧಿ ವಿಧಾನಗಳನ್ನು ತಿಳಿಸುವ ಒಂದು ಪ್ರವೇಶಿಕೆಯಾಗಿ ಮಹತ್ವವನ್ನು ಪಡೆದುಕೊಂಡಿರುವ ಈ ಕೃತಿಯನ್ನು ಮಹೇಶ್ವರಪ್ಪನವರು ರಚಿಸಿದ್ದಾರೆ.

೨. ಜೆ.ಎಸ್.ಕುಳ್ಳಿ ಹಾಗೂ ಜಿ.ಪಿ. ಮುರುಡಿ ಈ ಲೇಖಕರು ಸೇರಿ ರಚಿಸಿರುವ ಗ್ರಂಥ "ಅನುವಾದ ಕಲೆ" ಪ್ರಸ್ತುತ ಗ್ರಂಥದಲ್ಲಿ ಅನುವಾದದ ಮಹತ್ವವನ್ನು ತೊಡಕುಗಳನ್ನು

ಪಾಲಿಸಬೇಕಾದ ನಿಯಮಗಳ ಕುರಿತಾದ ವಿವರಣೆ ಇದೆ.

೩. ಅನುವಾದ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನು ನೀಡಿರುವ ಪ್ರಧಾನ ಗುರುದತ್ತರು ಭಾಷಾಂತರದ ಕುರಿತಾಗಿ "ಅನುವಾದ ಆಧುನಿಕ ಜಗತ್ತಿನಲ್ಲಿ", "ಭಾಷಾಂತರ ಕಲೆ" "ಅನಾವರಣ" ಎನ್ನುವ ಗ್ರಂಥಗಳನ್ನು ರಚಿಸಿದ್ದು ಅನುವಾದದಲ್ಲಿ ತೊಡಗುವವರಿಗೆ ಇವು ಮಹತ್ವದ ವಿಚಾರಗಳನ್ನು ನೀಡುವ ಕೈಪಿಡಿಗಳಾಗಿವೆ.

೪. ಕನ್ನಡ ಸಾಹಿತ್ಯದ ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿಯವರ "ಬಯಲು-ಆಲಯ"ವು ಕೂಡ ಭಾಷಾಂತರದ ಕುರಿತಾದ ವಿಚಾರಗಳನ್ನು ಹೊಂದಿದ ಕೃತಿಯಾಗಿದೆ.

೫. ಭಾಷಾಂತರ, ವಸಾಹತುವಾದ ಮತ್ತು ಇಂಗ್ಲಿಷನ ಉನ್ನತಿ ಇದು ನಿರಂಜನ ತೇಜಸ್ವಿಯವರ ಗ್ರಂಥದ ಕನ್ನಡ ಅನುವಾದವಾಗಿದ್ದು ಇದನ್ನು ಹೆಚ್.ಎಸ್. ರಾಘವೇಂದ್ರರಾವ್ ಅವರು ಅನುವಾದಿಸಿದ್ದಾರೆ.

೬. ಭಾಷಾಂತರದ ಗುಣವಿಶೇಷತೆಯನ್ನು ಹೇಳುವ ಕೃತಿ "ಭಾಷಾಂತರ ಸೌರಭ" ವನ್ನು ಲಕ್ಷ್ಮೀ ನಾರಾಯಣ ಆರೋರು ಇವರು ರಚಿಸಿದ್ದಾರೆ.

೭. ಸಾಂಸ್ಕೃತಿಕ ನೆಲೆಯಿಂದ ರೂಪಿತವಾದ ಭಾಷಾಂತರದ ಪ್ರಕ್ರಿಯೆಯ ವಿವಿಧ ಮಜಲುಗಳನ್ನು ಪರಿಚಯಿಸುವ ಕೃತಿ "ಭಾಷಾಂತರದ ಸಾಂಸ್ಕೃತಿಕ ನೆಲೆಗಳು" ಕೃತಿಯನ್ನು ಕರೀಗೌಡ ಬೀಚನಹಳ್ಳಿ ಇವರು ಸಂಪಾದಿಸಿದ್ದಾರೆ.

ಭಾಷಾಂತರದ ಕುರಿತಾಗಿ ರಚಿಸಿರುವ ಈ ಕೆಳಗಿನ ಲೇಖನಗಳನ್ನು ಇದು ಹೊಂದಿದೆ.

i. "ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯದ ಭಾಷಾಂತರ" ಲೇ ಓ.ಎಲ್.ನಾಗಭೂಷಣ ಸ್ವಾಮಿ

ii. "ಭಾಷಾಂತರದ ಭಾಷೆಯಾಗಿ ಕನ್ನಡ" ಲೇ. ಕೆ.ವಿ. ನಾರಾಯಣ.

೮. ಭಾಷಾಂತರದ ಕುರಿತಾದ ಕೆಲವು ಮಹತ್ವದ ವಿಚಾರಗಳನ್ನು ತಿಳಿಸುವ ಕೃತಿಯಾದ 'ರಚನೆ - ನಿರಚನೆ' ಯನ್ನು ಕೇಶವ ಶರ್ಮ ಕೆ. ಇವರು ಬರೆದಿದ್ದಾರೆ.

೯. ಕನ್ನಡ ನಾಟಕ ಕ್ಷೇತ್ರದಲ್ಲಿನ ಇಂಗ್ಲಿಷ ಮತ್ತು ಇತರ ಭಾಷಾಂತರ ಹಾಗೂ ರೂಪಾಂತರಗಳನ್ನು ವಿವರಿಸುವ ಕೃತಿ "ಇಂಗ್ಲಿಷ್ ಮತ್ತು ಇತರ ಭಾಷಾಂತರ ರೂಪಾಂತರಗಳು" ಆಗಿದ್ದು ಇದನ್ನು ಎಂ. ರಾಮರಾಯರು ರಚಿಸಿದ್ದಾರೆ.

**ಆ. ಭಾಷಾಂತರದ ಕುರಿತಾದ ಬಿಡಿಲೇಖನಗಳು, ವಿಶೇಷ ಲೇಖನಗಳು ವಿಶೇಷ ಸಂಚಿಕೆ ಇತ್ಯಾದಿ**

೧. ಭಾಷಾಂತರದ ಕುರಿತಾದ ಕೆಲವು ವಿದ್ವಾಂಸರ ಲೇಖನಗಳನ್ನು ಒಳಗೊಂಡಿರುವ 'ಪ್ರಬುದ್ಧ ಕರ್ನಾಟಕದ ಚಿನ್ನದ ಸಂಚಿಕೆ ೧೯೬೯ ರಲ್ಲಿ ಪ್ರಕಟವಾಗಿದೆ. ಇದರಲ್ಲಿನ ಈ ಕೆಳಗಿನ ಲೇಖನಗಳನ್ನು ಉಲ್ಲೇಖಿಸಬಹುದಾಗಿದೆ.

i. "ಅನುವಾದ : ಇಂಗ್ಲೀಷ್ ಸಾಹಿತ್ಯ" ಲೇ. ಎಂ. ರಾಮರಾವ್

ii. "ಅನುವಾದ : ಸಂಸ್ಕೃತ ಸಾಹಿತ್ಯ" ಲೇ. ಎಂ.ಜಿ. ನಂಜುಂಡಾರಾಧ್ಯ.

iii. "ಅನುವಾದ : ಹಿಂದಿ ಸಾಹಿತ್ಯ" ಲೇ. ಪ್ರಧಾನ ಗುರುದತ್ತ

iv. "ಅನುವಾದ : ಇತರ ಭಾಷೆಗಳು" ಲೇ. ಎನ್. ಅನಂತರಂಗಾಚಾರ್

೨. ಅನುವಾದ ಸಾಹಿತ್ಯದ ಕುರಿತಾದ ಗ್ರಂಥಗಳ ವಿವರಣೆಯನ್ನು ಹೊಂದಿರುವ ಕೃತಿ 'ಕನ್ನಡ ಗ್ರಂಥ ಸೂಚಿ : ಅನುವಾದ ಸಾಹಿತ್ಯ ಸಂ.೨, ಯನ್ನು ಹಾ.ಮಾ. ನಾಯಕರು ರಚಿಸಿದ್ದಾರೆ.

೩. 'ಯಜಮಾನಿಕೆಗಾಗಿ ಭಾಷಾಂತರ' ಇದು ವಿಜಯಕುಮಾರ ಎಂ. ಬೋರಟ್ಟಿ ಇವರು ಬರೆದ ಲೇಖನವಾಗಿದ್ದು 'ಸಂಕ್ರಮಣ' ಪತ್ರಿಕೆಯಲ್ಲಿ ಪ್ರಕಟವಾಗಿದೆ.

ಮೇಲಿನ ವಿವರಗಳನ್ನು ಆಧರಿಸಿ ಹೇಳುವುದಾದರೆ ಭಾಷಾಂತರಕ್ಕೆ ಸಂಬಂಧಿಸಿದಂತೆ ಸಾಕಷ್ಟು ಅಧ್ಯಯನಗಳು ಕನ್ನಡದಲ್ಲಿ ನಡೆಯುತ್ತಲೇ ಬಂದಿವೆ. ಆದರೆ ಪ್ರಸ್ತುತ ಮಹಾಪ್ರಬಂಧದ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಇತರ ಭಾಷೆಗಳಿಗೆ ಅನುವಾದಗೊಂಡ ಕಾರಂತರ ಕಾದಂಬರಿಗಳ ಕುರಿತಾಗಿ ಹೆಚ್ಚಿನ ಆಧ್ಯಯನಗಳಾದ ಬಗ್ಗೆ ತಿಳಿದು ಬರುವುದಿಲ್ಲ. ಈ ಕುರಿತಾಗಿ ಸಂಶೋಧನಾತ್ಮಕ ಗ್ರಂಥಗಳಾಗಲಿ, ವಿಮರ್ಶಾತ್ಮಕ ಗ್ರಂಥಗಳಾಗಲಿ ಅಷ್ಟೊಂದು ರಚನೆಯಾಗಿಲ್ಲ. ಕಾರಂತರ ಕಾದಂಬರಿಗಳು ಕನ್ನಡೇತರ ಭಾಷೆಗಳಲ್ಲಿ ಅನುವಾದಗೊಂಡಿದ್ದರೂ ಇತರ ಭಾಷೆಗಳಲ್ಲಿ ಕಾರಂತರ ಅನುವಾದಿತ ಕಾದಂಬರಿಗಳ ಕುರಿತಾಗಿ ಸಮರ್ಪಕವಾದ ಆಧ್ಯಯನ ನಡೆದಿಲ್ಲ ಎಂದೇ ಹೇಳಬೇಕಾಗುತ್ತದೆ. ಆದರೆ ಮರಾಠಿ ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳ ಕುರಿತಾಗಿ ವಿಮರ್ಶೆ ಮಾಡಲಾಗಿದ್ದು ಅದು ಪುಸ್ತಕ ರೂಪದಲ್ಲಿ ಹೊರಬಂದಿದೆ. ಮೂಲತಃ ಮರಾಠಿಯ 'ಆಲೋಚನಾ' ಎಂಬ ಪತ್ರಿಕೆಯಲ್ಲಿ ಪ್ರಕಟವಾದ ಕಾದಂಬರಿಗಳ ಕುರಿತಾದ ಮರಾಠಿ ಭಾಷೆಯಲ್ಲಿನ ವಿಮರ್ಶೆಗಳನ್ನು ವಿರೂಪಾಕ್ಷ ಕುಲಕರ್ಣಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ. "ಕಾರಂತರ ಕಾದಂಬರಿಗಳು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ" ಎಂಬ ಶೀರ್ಷಿಕೆಯನ್ನು ಹೊಂದಿರುವ ಪ್ರಸ್ತುತ ಕೃತಿಯನ್ನು ಸ್ವತಃ ಅನುವಾದಕರೇ ಸಂಪಾದಿಸಿದ್ದಾರೆ. ಮರಾಠಿ

ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳಾದ "ಚೋಮನದುಡಿ", "ಮರಳಿ ಮಣ್ಣಿಗೆ", "ಬೆಟ್ಟದ ಜೀವ", "ಅಳಿದ ಮೇಲೆ", "ಮೂಕಜ್ಜಿಯ ಕನಸುಗಳು", "ಮೈಮನಗಳ ಸುಳಿಯಲ್ಲಿ". ಈ ಆರು ಕಾದಂಬರಿಗಳ ಕುರಿತಾದ ವಿಮರ್ಶೆಯನ್ನು ಹೊಂದಿದ ಕೃತಿ ಇದಾಗಿದೆ. "ಸರಸಮ್ಮನ ಸಮಾಧಿ", "ಕುಡಿಯರ ಕೂಸು" ಕಾದಂಬರಿಗಳ ಕುರಿತಾಗಿಯೂ ವಿಮರ್ಶೆಯನ್ನು ಒಳಗೊಂಡ ಕೃತಿ ಇದಾಗಿದೆ. ಇಂಗ್ಲಿಷ ಹಾಗೂ ಮರಾಠಿ ಈ ಎರಡು ಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ತುಲನಾತ್ಮಕವಾದ ಅಧ್ಯಯನಕ್ಕೆ ಇದು ಸಹಕಾರಿಯಾಗುತ್ತದೆ[೧]. ಮರಾಠಿ ಭಾಷೆಯಲ್ಲಿ ಮಾತ್ರ ಕಾರಂತರ ಕಾದಂಬರಿಗಳ ಕುರಿತಾದ ವಿಮರ್ಶೆಯು ಪುಸ್ತಕ ರೂಪದಲ್ಲಿ ದೊರಕಿರುವುದನ್ನು ಹೊರತುಪಡಿಸಿದರೆ ಉಳಿದಂತೆ ಕಾರಂತರ ಕಾದಂಬರಿಗಳು ಅನುವಾದಗೊಂಡ ಇತರ ಭಾಷೆಗಳಲ್ಲಿ ಈ ರೀತಿಯಾದ ವಿಮರ್ಶೆ ಸಮಗ್ರರೂಪದಲ್ಲಿ ಇದುವರೆಗೆ ಲಭ್ಯವಾಗಿಲ್ಲ. ಕನ್ನಡೇತರ ಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ಕುರಿತಾಗಿ ಕೆಲವೇ ಕೆಲವು ವಿಮರ್ಶಾತ್ಮಕ ಲೇಖನಗಳು ಪ್ರಕಟಗೊಂಡಿರುವುದಾಗಿ ತಿಳಿದು ಬಂದಿದೆ.

ಇಂಗ್ಲಿಷ ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳ ಕುರಿತಾಗಿಯೂ ಈ ಮಾತು ಅನ್ವಯಿಸುತ್ತದೆ. ಅಂತಹ ಕೃತಿಗಳ ಬಗೆಗೆ ಸಾಕಷ್ಟು ಅಧ್ಯಯನಗಳು ಇನ್ನೂ ನಡೆಯಬೇಕಾಗಿದೆ. ಅದಾಗ್ಯೂ ಬಸವರಾಜ ನಾಯ್ಕರ್‌ರವರು ಇಂಗ್ಲಿಷನಲ್ಲಿ ರಚಿಸಿರುವ ವಿಮರ್ಶಾ ಗ್ರಂಥ "Indian Literature in English Translation" ನಲ್ಲಿ ಕಾರಂತರ ಕಾದಂಬರಿ "ಮೈಮನಗಳ ಸುಳಿಯಲ್ಲಿ"ಯ ಇಂಗ್ಲಿಷ ಅನುವಾದ "The Woman of Basrur" ನ ಕುರಿತಾಗಿ ವಿಮರ್ಶಾ ಲೇಖನವೊಂದನ್ನು ಬರೆದಿದ್ದಾರೆ. ಪ್ರಸ್ತುತ ವಿಮರ್ಶಾತ್ಮಕ ಲೇಖನದಲ್ಲಿ ಬಸವರಾಜ ನಾಯ್ಕರ್ ರವರು ಕಾದಂಬರಿಯ ಅನುವಾದದ ಕುರಿತಾಗಿ ಮೆಚ್ಚುಗೆಯ ಮಾತುಗಳನ್ನು ಆಡಿದ್ದಾರೆ. ಆದರೆ ಕಾದಂಬರಿಯ ಇಂಗ್ಲೀಷ್ ಅನುವಾದದ ಶೀರ್ಷಿಕೆಯ ಕುರಿತಾಗಿ ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಉಳಿದಂತೆ ಇಂಗ್ಲೀಷ್ ಭಾಷೆಗೆ ಅನುವಾದಗೊಂಡ ಇತರ ಕಾದಂಬರಿಗಳ ಕುರಿತಾಗಿ ಅಧ್ಯಯನ ಸಮಗ್ರವಾಗಿ ನಡೆದಿಲ್ಲ.

ಆದರೆ ಕಾರಂತರ ಒಟ್ಟು ಸಾಹಿತ್ಯದ ಕುರಿತಾಗಿ ಸಾಕಷ್ಟು ಸಂಶೋಧನಾತ್ಮಕ-ವಿಮರ್ಶಾತ್ಮಕ-ಸಮೀಕ್ಷಾತ್ಮಕ ಅಧ್ಯಯನಗಳು ನಡೆದಿವೆ. ಅವೆಲ್ಲವುಗಳ ವಿವರವಾದ

---

೧. ಈ ಕೃತಿಯ ಬಗೆಗಿನ ವಿವರವಾದ ವಿಶ್ಲೇಷಣೆಯನ್ನು ಮುಂದಿನ "ಅನ್ಯ ಭಾಷೆಗಳಲ್ಲಿ ಕಾರಂತರ ಕಾದಂಬರಿಗಳು: ಒಂದು ಸ್ಥೂಲ ನೋಟ" ಎಂಬ ಅಧ್ಯಾಯದಲ್ಲಿ ಮಾಡಲಾಗಿದೆ.

ಸಮೀಕ್ಷೆ ಇಲ್ಲಿ ಅಪ್ರಸ್ತುತ ಎನಿಸಿದರೂ ಪ್ರಸ್ತುತ ಅಧ್ಯಯನಕ್ಕೆ ಪೂರಕವೆಂಬಂತೆ ಕೆಲವು ಅಧ್ಯಯನಗಳನ್ನಷ್ಟೇ ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಕಾರಂತರ ಒಟ್ಟು ಸಾಹಿತ್ಯದ ಕುರಿತಾಗಿ ಹಲವು ಪ್ರಕಾರಗಳಲ್ಲಿ ಅಧ್ಯಯನಗಳಾಗಿದ್ದು ಅವುಗಳನ್ನು ಸಂಶೋಧನಾತ್ಮಕ ಹಾಗೂ ವಿಮರ್ಶಾತ್ಮಕ ಸಮೀಕ್ಷಾತ್ಮಕ ಅಧ್ಯಯನಗಳು ಎಂದು ವಿಂಗಡಿಸಿಕೊಳ್ಳಬಹುದಾಗಿದೆ. ಪಿ.ಎಚ್.ಡಿ. ಎಂ.ಫಿಲ್. ಅಧ್ಯಯನಗಳು ಸಂಶೋಧನಾತ್ಮಕವಾದ ಅಧ್ಯಯನಗಳೆನಿಸಿಕೊಂಡರೆ, ವಿಮರ್ಶಾತ್ಮಕ/ಸಮೀಕ್ಷಾತ್ಮಕ ಗ್ರಂಥಗಳು, ಅಭಿನಂದನಾ ಗ್ರಂಥಗಳು, ವಿಶೇಷ ಸಂಚಿಕೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಬಿಡಿಬರಹಗಳು ಇತ್ಯಾದಿಗಳನ್ನು ವಿಮರ್ಶಾತ್ಮಕ/ಸಮೀಕ್ಷಾತ್ಮಕ ಅಧ್ಯಯನಗಳು ಎಂದು ಹೆಸರಿಸಬಹುದಾಗಿದೆ. ಇವುಗಳ ವಿವರಗಳನ್ನು ಪ್ರತ್ಯೇಕವಾಗಿ ಈ ಕೆಳಗೆ ನೀಡಲಾಗಿದೆ.

**ಅ. ಸಂಶೋಧನಾತ್ಮಕ ಅಧ್ಯಯನಗಳು:**

**೧. ಪಿ.ಎಚ್.ಡಿ ಹಾಗೂ ಎಂ.ಫಿಲ್. ಅಧ್ಯಯನಗಳು:**

i. 'ಕುವೆಂಪು ಮತ್ತು ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ' – ತೌಲನಿಕ ಅಧ್ಯಯನ' ಇದು ಸುಮಿತ್ರ ಎಲ್.ಸಿ. ಇವರು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧವಾಗಿದೆ.

ii. ಮುನಿಯಪ್ಪ ಇವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ 'ಶಿವರಾಮ ಕಾರಂತರ ಕಾದಂಬರಿಗಳಲ್ಲಿ ರಾಜಕೀಯ ಪ್ರಜ್ಞೆ ಒಂದು ಅಧ್ಯಯನ' ಎಂಬ ವಿಷಯದ ಕುರಿತು ಸಂಶೋಧನೆ ನಡೆಸಿದ್ದಾರೆ.

iii. ನಾಗೇಂದ್ರ ಕುಮಾರ ಬಿ.ಸಿ. ಇವರು 'ಶಿವರಾಮ ಕಾರಂತರ ಸಂಸ್ಕೃತಿ ಪರಿಕಲ್ಪನೆಯ ನೆಲೆಗಳ' ಎನ್ನುವ ವಿಷಯದ ಕುರಿತು ಸಂಶೋಧನೆಯನ್ನು ಮಾಡಿದ್ದಾರೆ.

iv. 'ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಜಾನಪದೀಯ ಅಂಶಗಳು' ಇದು ಶಾರದಾ ಬೋಪಟ್ಟನವರ್ ಇವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆಸಿದ ಎಂ.ಫಿಲ್. ಅಧ್ಯಯನವಾಗಿದೆ.

**ಆ. ವಿಮರ್ಶಾತ್ಮಕ / ಸಮೀಕ್ಷಾತ್ಮಕ ಅಧ್ಯಯನಗಳು**

**೧. ಕಾರಂತರ ಸಾಹಿತ್ಯದ ಕುರಿತು ಪ್ರಕಟವಾದ ವಿವಿಧ ವಿಮರ್ಶಾತ್ಮಕ/ಸಮೀಕ್ಷಾತ್ಮಕ ಗ್ರಂಥಗಳು**

ಕಾರಂತರ ಸಾಹಿತ್ಯದ ಕುರಿತು ಅನೇಕ ವಿಮರ್ಶಾತ್ಮಕ/ಸಮೀಕ್ಷಾತ್ಮಕ ಗ್ರಂಥಗಳು

ರಚಿಸಲ್ಪಟ್ಟಿವೆ. ಅವುಗಳ ವಿವರವನ್ನು ಈ ಮುಂದಿನಂತೆ ಪಟ್ಟಿಮಾಡಲಾಗಿದೆ. 'ಕಾರಂತರ ಕಾದಂಬರಿಗಳು' ಲೇಖಕರು: ಎಸ್. ಅನಂತನಾರಾಯಣ, 'ಶಿವರಾಮ ಕಾರಂತ' ಲೇಖಕರು: ವಿ. ಸೀತಾರಾಮಯ್ಯ, 'ಶಿವರಾಮ ಕಾರಂತ ಬದುಕು – ಬರಹ ಲೇ.: ವಿ.ಎಂ. ಇನಾಂದಾರರು, 'ಕಾರಂತರ ಕೆಲವು ಮುಖಗಳು' ಪ್ರಕಟಣೆ: ಮಿತ್ರ ಪ್ರಕಾಶನ ಮೈಸೂರು, 'ಶಿವರಾಮ ಕಾರಂತ – ಹತ್ತು ಅಧ್ಯಯನಗಳು' ಲೇ: ಶಿವರಾಮ ಕಾಡನ ಕುಪ್ಪೆ, "ಮೂಕಜ್ಜಿಯ ಕನಸುಗಳು ಮತ್ತು ಮಾನವ ಶಾಸ್ತ್ರ" ಲೇ: ಜಿ ಭಾಸ್ಕರ ಮಯ್ಯ. 'ಕಾರಂತರ ಕಾದಂಬರಿಗಳಲ್ಲಿ ನಿಸರ್ಗ' ಲೇ.: ಎಸ್. ಅನಂತನಾರಾಯಣ, 'ಶಿಕ್ಷಣ, ಕಾರಂತರ ದೃಷ್ಟಿ–ಸೃಷ್ಟಿ' ಲೇ: ಮಹಾಬಲೇಶ್ವರ ರಾವ್, 'ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡಿಗರು: ಶಿವರಾಮ ಕಾರಂತ' ಲೇ: ಪ್ರೋ. ವಿ. ಸೀತರಾಮಯ್ಯ ಹಾಗೂ ಪಾ.ವೆಂ. ಆಚಾರ್ಯ, 'ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ' 'ಕನ್ನಡ ಸಾಹಿತ್ಯ–ಈ ಶತಮಾನದ ನೋಟ–ಶಿವರಾಮ ಕಾರಂತ', 'ಕಾರಂತ ಮಂಥನ', 'ಕಾರಂತರ ಕಾದಂಬರಿಗಳಲ್ಲಿ ಗಂಡು–ಹೆಣ್ಣು'–ಇವು ಟಿ.ಪಿ. ಅಶೋಕರು ಕಾರಂತರ ಸಾಹಿತ್ಯದ ಕುರಿತು ರಚಿಸಿದ ವಿಮರ್ಶಾ ಗ್ರಂಥಗಳಾಗಿವೆ. 'ನಾನು ಕಂಡ ಕಾರಂತರು', 'ಶಿವರಾಮ ಕಾರಂತರ ಕಿನ್ನರ ಲೋಕ', 'ಶಿವರಾಮ ಕಾರಂತರ ವಾಙ್ಮಯ ವೃತ್ತಾಂತ' ಇವು ಮಾಲಿನಿ ಮಲ್ಯ ಅವರು ಸ್ವತಃ ರಚಿಸಿದ ಕೃತಿಗಳಾಗಿದ್ದು 'ಶಿವರಾಮ ಕಾರಂತ ಕೃತಿ ಕೈಪಿಡಿ' 'ಕಾರಂತ ಉವಾಚ' ಇವು ಅವರ ಸಂಪಾದಿತ ಕೃತಿಗಳಾಗಿವೆ. 'ಕಾರಂತ ಹಕ್ಕಿನೋಟ' ಲೇ: ಎಸ್.ಚೆನ್ನಪ್ಪ, 'ಕಾರಂತರು ಮತ್ತು ಪರಿಸರ' ಲೇ: ಶಂಪಾ ದೈತೋಟ, 'ಕಾರಂತರ ಕಾದಂಬರಿಗಳಲ್ಲಿ ನಿರೂಪಕ' ಲೇ: ಸಿ.ಎನ್.ರಾಮಚಂದ್ರ, 'ಅಂಗಳದೊಳಗಿನ ಕಡಲು' ಲೇ.: ಬಿ.ಎನ್.ಸುಮಿತ್ರಾ ಬಾಯಿ, 'ಕಡಲಂತೆ ಕಾರಂತರು' ಲೇ.: ಬಿದರಹಳ್ಳಿ ಶಂಕರಮೂರ್ತಿ, 'ಡಾ. ಶಿವರಾಮ ಕಾರಂತ (ಒಂದು ನೆನಪು, ನಮನ) ಲೇ.: ಎಲ್.ಎಸ್. ಶೇಷಗಿರಿ ರಾವ್, 'ಬಹುಮುಖಿ' ಲೇ: ಮನುಬಳಿಗಾರ್, 'ಕಾರಂತ–ಯುಗಾಂತ' ಸಂ. ಜಯಪ್ರಕಾಶ ಮಾವಿನಕುಳಿ, 'ಕಾರಂತ ಕೊಂಗಾಟ' ಲೇ. ಸೂರ್ಯನಾರಾಯಣ ಚಡಗ ಮುಂತಾದವುಗಳು.

**೨. ಕಾರಂತರ ಕುರಿತಾಗಿ ಹೊರಬಂದಿರುವ ಅಭಿನಂದನಾ ಗ್ರಂಥಗಳು:**

ಕಾರಂತರ ಸಾಹಿತ್ಯದ ಕುರಿತಾಗಿ ಈ ಮೇಲೆ ವಿವರಿಸಿದ ವಿಮರ್ಶಾತ್ಮಕ–ಸಮೀಕ್ಷಾತ್ಮಕ ಗ್ರಂಥಗಳಲ್ಲದೇ ವಿವಿಧ ಸಂದರ್ಭಗಳಲ್ಲಿ ಕಾರಂತರ ಕುರಿತಾಗಿ ಅನೇಕ ಅಭಿನಂದನಾ ಗ್ರಂಥಗಳು ಹೊರಬಂದಿದ್ದು ಅವುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದ

i. ಕಾರಂತರ ಷಷ್ಠ್ಯಬ್ಧಿ ಸಮಾರಂಭದ ಸಂದರ್ಭದಲ್ಲಿ ಕಾರಂತ ಸನ್ಮಾನ ಸಮಿತಿ,

ಉಡುಪಿ ಇವರು – "ಕಾರಂತ ಅರವತ್ತು" ಎನ್ನುವ ಕೃತಿಯನ್ನು ಹೊರತಂದಿದ್ದಾರೆ.

ii. ಕಾರಂತರ ಸಾಹಿತ್ಯ ಮತ್ತು ಕಲಾ ಪ್ರತಿಭೆಗಳ ಬಗ್ಗೆ ಬೆಳಕು ಚೆಲ್ಲುವ ಸುಮಾರು ಅರವತ್ತು ಪ್ರಸಿದ್ಧ ಸಾಹಿತಿಗಳ ಲೇಖನಗಳನ್ನು ಒಳಗೊಂಡಿರುವ ಕೃತಿ 'ಕಾರಂತ ಪ್ರಪಂಚ' ವನ್ನು ಕಾರಂತ ಅಭಿನಂದನಾ ಸಮಿತಿ, ಉಡುಪಿ ಇವರು ಪ್ರಕಟಿಸಿದ್ದಾರೆ.

iii. ಕಾರಂತರ ಅಭಿನಂದನ ಉತ್ಸವದ ನೆನಪಿನ ಸಂಚಿಕೆ 'ಅಭಿನಂದನ'ವನ್ನು ಉಡುಪಿಯ ಕಾರಂತರ ಅಭಿನಂದನ ಸಮಿತಿಯು ಹೊರತಂದಿದೆ.

iv. ಕಾರಂತರಿಗೆ ೧೯೬೯ರಲ್ಲಿ ಏರ್ಪಡಿಸಿದ್ದ ಅಭಿನಂದನಾ ಕಾರ್ಯಕ್ರಮದ ಭಾಷಣ ಮತ್ತು ಇತರೇ ವಿವರಗಳನ್ನು ಒಳಗೊಂಡಿರುವ ಕೃತಿ 'ಅಭಿನಂದನ'ಯನ್ನು ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ ಇದು ಪ್ರಕಟಪಡಿಸಿದೆ.

v. 'ಹತ್ತು ಮುಖ – ಅಭಿನಂದನ' ಇದು ಕಾರಂತ ಅಭಿನಂದನ ಸಮಿತಿ ಮಂಗಳೂರು ಇವರು ಹೊರತಂದ ಕೃತಿಯಾಗಿದೆ.

vi. ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದಾಗ ಅವರನ್ನು ಅಭಿನಂದಿಸಿ ಬರೆದ ೧೦ ಕನ್ನಡ ಲೇಖನಗಳನ್ನು ೦೪ ಇಂಗ್ಲೀಷ್ ಲೇಖನಗಳನ್ನು ಒಳಗೊಂಡಿರುವ ಕೃತಿ "ಕಾರಂತ ಕಿರಣ"ಯನ್ನು ಎಲ್.ಎಸ್. ಶೇಷಗಿರಿ ರಾವ್ ಇವರು ಸಂಪಾದಿಸಿದ್ದಾರೆ.

**ಈ. ಕಾರಂತರ ಸಾಹಿತ್ಯದ ಕುರಿತಾಗಿ ಏರ್ಪಡಿಸಿದ್ದ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳು:**

ಕಾರಂತರ ಸಾಹಿತ್ಯದ ಕುರಿತಾಗಿ ಏರ್ಪಡಿಸಿದ ಅನೇಕ ವಿಚಾರ ಸಂಕಿರಣಗಳಲ್ಲಿ ವಿವಿಧ ವಿದ್ವಾಂಸರುಗಳು ಏರ್ಪಡಿಸಿದ ಪ್ರಬಂಧಗಳು ಗ್ರಂಥ ರೂಪದಲ್ಲಿ ಪ್ರಕಟವಾಗಿವೆ.

i. ೧೯೭೮ರ ದಶಂಬರ ೯, ೧೦ ಮತ್ತು ೧೧ರಂದು ನಡೆದ ವಿಚಾರ ಸಂಕಿರಣದಲ್ಲಿ ಮುಖ್ಯವಾಗಿ ಕಾರಂತರ ಕಾದಂಬರಿಗಳ ಕುರಿತಾದ ಅಧ್ಯಯನ ಪೂರ್ಣ ಪ್ರಬಂಧಗಳನ್ನು ಒಳಗೊಂಡಿರುವ ಕೃತಿ 'ಸಂಕಿರಣ'ವನ್ನು ಸಾಹಿತ್ಯ ಸಂಘ. ಕಿರಿಯ ಕಾಲೇಜು, ಮಲ್ಲಾಡಿಹಳ್ಳಿ ಇದು ಪ್ರಕಟಿಸಿದೆ.

ii. ಕಾರಂತರ ಕಾದಂಬರಿಗಳ ಕುರಿತಾಗಿ ಮಂಡಿಸಿದ ಪ್ರಬಂಧಗಳು ಹಾಗೂ ಅಧ್ಯಕ್ಷೀಯ ಭಾಷಣ ಇತ್ಯಾದಿಗಳನ್ನು ಒಳಗೊಂಡಿರುವ ಕೃತಿ – 'ಕಾದಂಬರಿಕಾರರಾಗಿ ಕಾರಂತ'ಯನ್ನು ಜಿ.ಎಸ್. ಶಿವರುದ್ರಪ್ಪ ಇವರು ಸಂಪಾದಿಸಿದ್ದಾರೆ.

### ಉ. ಕಾರಂತರ ಸಾಹಿತ್ಯದ ಕುರಿತಾದ ವಿಶೇಷಾಂಕಗಳು:

ಕಾರಂತರ ಸಾಹಿತ್ಯದ ಕುರಿತಾಗಿ ಹಲವು ವಿಮರ್ಶಾ ರೂಪದ ಬರಹಗಳು ಕೆಲವು ವಿಶೇಷಾಂಕಗಳಲ್ಲಿ, ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಮುಖ್ಯವಾಗಿರುವ ಕೆಲವನ್ನು ಇಲ್ಲಿ ನೀಡಲಾಗಿದೆ.

i. ರಾಮಚಂದ್ರ ದೇವ ಇವರಿಂದ ಸಂಪಾದಿತವಾದ ತ್ರೈಮಾಸಿಕ ಪತ್ರಿಕೆ 'ಸಾಕ್ಷಿ' ಇದರ ಎಪ್ರಿಲ್ ವಸಂತ ಸಂಚಿಕೆಯಲ್ಲಿ ಶಿವರಾಮ ಕಾರಂತರ ಕಾದಂಬರಿಗಳ ಕುರಿತಾಗಿ ಎರಡು ವಿದ್ವಾಂಸರ ಲೇಖನಗಳು ಪ್ರಕಟವಾಗಿವೆ.

ii. ಜಿ.ಎಸ್. ಶಿವರುದ್ರಪ್ಪನವರು ಸಂಪಾದಿಸಿದ ಬೆಂಗಳೂರು ವಿಶ್ವವಿದ್ಯಾಲಯದಿಂ ಪ್ರಕಟಗೊಂಡ 'ಸಾಧನೆ' ಇದರ ಜುಲೈ – ಸಪ್ತಂಬರ ಸಂ.೭ ಸಂಚಿಕೆ–೭ರಲ್ಲಿ ಕಾರಂತರ ಕುರಿತಾ ಎರಡು ವಿಮರ್ಶಾ ಬರಹಗಳನ್ನು ಕಾಣಬಹುದು.

iii. ಕಾರಂತರ ಬರವಣಿಗೆಯ ಮೇಲೆ ಬರೆದಿರುವ ೧೮ ಬರಹಗಳನ್ನು ಒಳಗೊಂಡಿರುವ ಶಿವರಾಮ ಕಾರಂತ ವಿಶೇಷಾಂಕ 'ಜೀವನ ವಿಕಾಸ' ಮೇ–ಜೂನ್ ಇದು ಕಲಬುರ್ಗಿಯಲ್ಲಿ ಪ್ರಕಟವಾಗಿದೆ.

iv. ಶೂದ್ರ ಶ್ರೀನಿವಾಸ್ ಇವರು ಸಂಪಾದಿಸಿರುವ ಬೆಂಗಳೂರಿನಲ್ಲಿ ಪ್ರಕಟವಾಗಿರುವ ಪತ್ರಿಕೆ 'ಶೂದ್ರ ಸಂಪುಟ–೭ ಸಂಚಿಕೆ ೫–೬' ಇದು ಕಾರಂತರ ಕುರಿತಾಗಿ ಇದೆ.

v. ಮೈಸೂರಿನ ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ೧೯೯೮ರಲ್ಲಿ ಕಾರಂತ ವಿಶೇಷ ಸಂಚಿಕೆ 'ಪುಸ್ತಕ ಪ್ರಪಂಚ'ವನ್ನು ಪ್ರಕಟಿಸಿದೆ.

vi. ಕನ್ನಡ ಕೂಟ, ವಿದ್ಯಾರಣ್ಯ ಶಾಖೆ, ಇಲಿನಾಯ್ಸ್, ಯು.ಎಸ್.ಎ. ಇವರು ಪ್ರಕಟಿಸಿದ 'ಸಂಗಮ' ಸಂಪುಟ ೧೯ ಸಂಚಿಕೆ ೧ರಲ್ಲಿ ಕಾರಂತರ ಸಾಹಿತ್ಯದ ಕುರಿತಾದ ಕೆಲವು ಬರಹಗಳಿವೆ.

vii. ಬೆಂಗಳೂರಿನ ಶಿವರಾಮ ಕಾರಂತ ವೇದಿಕೆಯು ಕಾರಂತರ ಕುರಿತಾಗಿ 'ಹಣತೆ' ಸಂಪುಟ ೬, ಸಂಚಿಕೆ ೧, ಅಕ್ಟೋಬರ, ದಶಂಬರ್ ೧೯೯೮ರಲ್ಲಿ ಪ್ರಕಟಿಸಿದೆ.

ಹೀಗೆ ಕಾರಂತರ ಸಾಹಿತ್ಯದ ಕುರಿತಾಗಿ ಹಲವು ವಿಮರ್ಶೆಗಳು, ಅಧ್ಯಯನಗಳು, ಸಮೀಕ್ಷಾ ಕೃತಿಗಳು, ಅಭಿನಂದನಾ ಗ್ರಂಥಗಳು, ನೆನಪಿನ ಸಂಚಿಕೆಗಳು ಪ್ರಕಟವಾಗಿವೆ. ಈ ಮೇಲೆ ನಡೆಸಿರುವ ಸಮೀಕ್ಷೆಯನ್ನು ಆದರಿಸಿ ಕಂಡುಕೊಳ್ಳುವ ಅಂಶವೇನೆಂದರೆ

ಕಾರಂತರ ಸಮಗ್ರ ಸಾಹಿತ್ಯದ ಕುರಿತಾಗಿ ಸಾಕಷ್ಟು ಚರ್ಚೆಗಳು, ವಿಮರ್ಶೆಗಳು, ಸಂಶೋಧನೆಗಳು ವಿಶೇಷವಾಗಿ ಕನ್ನಡದಲ್ಲಿ ನಡೆದಿವೆ. ಅವರ ಕಾದಂಬರಿಗಳ ಕುರಿತಾಗಿಯೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಅಧ್ಯಯನಗಳಾಗಿವೆ. ಆದರೆ ಕಾರಂತರ ಭಾಷಾಂತರಗೊಂಡ ಕಾದಂಬರಿಗಳ ಕುರಿತು ಅಷ್ಟಾಗಿ ಅಧ್ಯಯನಗಳು ನಡೆದಿಲ್ಲ ಎಂದೇ ಹೇಳಬೇಕಾಗುತ್ತದೆ. ಕೆಲವೇ ಕೆಲವು ಸೀಮಿತವಾದ ಅಧ್ಯಯನಗಳನ್ನು ಹೊರತುಪಡಿಸಿದರೆ ಉಳಿದಂತೆ ಕಾರಂತರ ಭಾಷಾಂತರಿತ ಕಾದಂಬರಿಗಳ ಕುರಿತು ಅಧ್ಯಯನ ನಡೆದಿಲ್ಲ ಎಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ. ಈ ಮೇಲೆ ಪ್ರಸ್ತಾಪಿಸಿರುವ ಕೃತಿಗಳಲ್ಲಿ ಪ್ರಮುಖವಾಗಿರುವವುಗಳನ್ನು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಪೂರಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

*-*-*-*

# ಅಧ್ಯಾಯ -೨

## ಪ್ರಸ್ತಾವನೆ: ವಿಷಯ ಪ್ರವೇಶ

**೧. ಭಾಷಾಂತರದ ತಾತ್ವಿಕ ಚರ್ಚೆ :**

ಭಾಷಾಂತರಕ್ಕೆ ಸಂಬಂಧಿಸಿದಂತೆ ಇನ್ನಿತರ ವಿಚಾರಗಳನ್ನು ಚರ್ಚಿಸುವ ಪೂರ್ವದಲ್ಲಿ ಭಾಷಾಂತರ ಎಂದರೇನೆಂದು ತಿಳಿದುಕೊಳ್ಳುವುದು ಅಗತ್ಯವಾಗುತ್ತದೆ. ಭಾಷಾಂತರದ ಪರಿಭಾಷೆಯನ್ನು ಸ್ಪಷ್ಟಪಡಿಸಿಕೊಳ್ಳುವ ಮುಖೇನ ಈ ವಿಚಾರ ನಮಗೆ ಹೆಚ್ಚು ಮನದಟ್ಟಾದೀತು. ಪ್ರಥಮದಲ್ಲಿ ವಿವಿಧ ಭಾಷಾಂತರಕಾರರು, ವಿದ್ವಾಂಸರು ಈ ಕುರಿತು ಏನನ್ನು ಹೇಳುತ್ತಾರೆ ಎನ್ನುವುದನ್ನು ನೋಡಬಹುದಾಗಿದೆ.

Catford (ಕ್ಯಾಟಫೋರ್ಡ್) ಅವರ ಪ್ರಕಾರ "ಮೂಲಭಾಷೆಯ ಪಠ್ಯಸಾಮಗ್ರಿಯನ್ನು ಉದ್ದಿಷ್ಟಭಾಷೆಯ ಪಠ್ಯಸಾಮಗ್ರಿಯನ್ನಾಗಿ ಪರಿವರ್ತಿಸುವುದೇ ಅನುವಾದ. (ಜಿ.ಎಸ್. ಕುಳ್ಳಿ, ಜಿ.ಪಿ. ಮುರಡಿ; ೧೯೭೫; ಪು.೨) ಇಂಗ್ಲಿಷ ಭಾಷೆಯ ಮೊಟ್ಟಮೊದಲನೆಯ ನಿಘಂಟು ರಚಿಸಿದ ಡಾ। ಜಾನ್‌ಸನ್ ಭಾಷಾಂತರದ ಬಗ್ಗೆ ಹೀಗೆ ಹೇಳಿದ್ದಾರೆ: "To change into another language retaining sense" ಅಂದರೆ ಅರ್ಥವನ್ನು ಕಾಯ್ದುಕೊಂಡು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಕೊಂಡೊಯ್ಯುವುದನ್ನು ಭಾಷಾಂತರ ಎಂದು ಇವರು ಪರಿಗಣಿಸಿದ್ದಾರೆ. (ಪ್ರಧಾನ ಗುರುದತ್ತ ೨೦೦೭; ಪು. ೩).

Oxford University Dictionary ಯಲ್ಲಿ ಭಾಷಾಂತರವನ್ನು ವಿವರಿಸಿದ ಬಗೆ ಹೀಗಿದೆ: The action or process of turning from one language into another is also product of this; a version in a different language. ಪ್ರಧಾನ ಗುರುದತ್ತರು ಇಂಗ್ಲಿಷ ಭಾಷೆಯಲ್ಲಿರುವ ವಿವರಣೆಯನ್ನು ಈ ರೀತಿ ವಿಶ್ಲೇಷಿಸಿದ್ದಾರೆ. "ಈ ಪರಿಭಾಷೆಯ ಪ್ರಕಾರ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಪರಿವರ್ತಿಸುವ ಕಾರ್ಯ ಅಥವಾ ಪ್ರಕ್ರಿಯೆ ಹಾಗೂ ಅದರ ಫಲ ಭಾಷಾಂತರವೆಂಬ ಹೆಸರಿಗೆ ಅರ್ಹವಾಗುತ್ತದೆ. ಒಟ್ಟಿನಲ್ಲಿ ಭಿನ್ನ ಭಾಷೆಯೊಂದರಲ್ಲಿನ ಆವೃತ್ತಿ ಭಾಷಾಂತರವೆನಿಸಿಕೊಳ್ಳುತ್ತದೆ" (ಅದೇ.ಪು. ೩-೪)

ಟೈಟ್ಲರ್ ಎನ್ನುವ ವಿದ್ವಾಂಸರು ಭಾಷಾಂತರವನ್ನು ಅರ್ಥೈಸುವ ರೀತಿ ಹೀಗಿದೆ:

I would therefore describe a good translation to be that in which the ment of the original work is so completely transfused into another

language as to be distinctly apprehended and as strongly fell by a native of the country to which that language belongs, as it is to those who speak a language of the original work.

ಪ್ರಧಾನ ಗುರುದತ್ತರು ಟೈಟ್ಲರನ ಹೇಳಿಕೆಯನ್ನು ಹೀಗೆ ಸ್ಪಷ್ಟಪಡಿಸುತ್ತಾರೆ. "ಮೂಲದ ಉತ್ಕೃಷ್ಟತೆಯೆಲ್ಲ ಬೇರೊಂದು ಭಾಷೆಯಲ್ಲಿ ಪೂರ್ಣವಾಗಿ ಮೈದಳೆದಿದ್ದಲ್ಲಿ, ಅರ್ಥಗ್ರಹಣ ಮೂಲದಷ್ಟೇ ಸುಲಭವಾಗಿದ್ದು ಅನುಭವದ ಸಂವೇದನೆ ಮೂಲದಷ್ಟು ತೀವ್ರವಾಗಿದ್ದಲ್ಲಿ, ಅದು ಭಾಷಾಂತರವೆನಿಸಿಕೊಳ್ಳುತ್ತದೆ ಎಂಬುದು ಈ ಪರಿಭಾಷೆಯ ಸಾರ" (ಅದೇ. ಪು. ೫).

True translation is metempsycholosis -'ನಿಜವಾದ ಅನುವಾದವೆಂದರೆ ಪರಕಾಯಪ್ರವೇಶವಿದ್ದಂತೆ' ಎಂಬುದು ವಿಲೋಮವಿಟ್ಜನ ಹೇಳಿಕೆಯಾಗಿದೆ. ಮೂಲ ಕರ್ತೃವಿನ ಮನಃಸ್ಥಿತಿಯನ್ನು ಕೃತಿಯ ಕಾಲ, ಸನ್ನಿವೇಶ, ಉದ್ದೇಶಗಳನ್ನು ಹಾಗೂ ಕೃತಿಕಾರನ ಆಶಯವನ್ನು ಅರಿತುಕೊಂಡು ಅನುವಾದ ಮಾಡಿದ್ದಲ್ಲಿ ಅದು ಮೂಲಕ್ಕೆ ಹೆಚ್ಚು ಹತ್ತಿರವಾಗುತ್ತದೆ ಎಂಬುದು ಇದರ ತಾತ್ಪರ್ಯವಾಗಿದೆ.

ವೆಬ್ಸ್ಟರ್ ಡಿಕ್ಷ್ನರಿಯಲ್ಲಿ ಭಾಷಾಂತರ ಎಂಬ ಬಗ್ಗೆ ಈ ರೀತಿಯ ವಿವರಣೆ ಸಿಗುತ್ತದೆ. ಮಾಲ್ಕಮ್ ಕೌಲೆಯ ಹೇಳಿಕೆಯನ್ನು ಉದ್ಧರಿಸಿ "Translation is an art that involves the recreation of a work in another language for readers with a different background" ಬೇರೊಂದು ಭಾಷೆಯ ಹಿನ್ನಲೆಯನ್ನು ಹೊಂದಿದ ಓದುಗರಿಗೆ ಮೂಲಕೃತಿಯ ಪುನಃಸೃಷ್ಟಿಮಾಡುವ ಕಲೆಯೇ ಭಾಷಾಂತರ ಎಂಬುದು ಇದರ ತಾತ್ಪರ್ಯ.

ಭಾಷಾಂತರವನ್ನು 'ಪ್ರಜ್ಞಾಪೂರ್ವಕಕಲೆ' ಎಂದು ಸಿ.ಪಿ. ಕೃಷ್ಣಕುಮಾರ್ ವ್ಯಾಖ್ಯಾನಿಸುತ್ತಾರೆ.

ಭಾಷಾಂತರದ ಬಗೆಗೆ ಇನ್ನೂ ಅನೇಕರು ಪರಿಭಾಷೆಯನ್ನು ನೀಡಿರುತ್ತಾರೆ. ಈ ಎಲ್ಲಾ ಪರಿಭಾಷೆಗಳನ್ನು ಸಮೀಕರಿಸಿ ಹೇಳುವುದಾದರೆ ಭಾಷಾಂತರಕಾರನು ಮೂಲಸಾಹಿತಿಯಂತೆಯೇ ಸೃಜನಶೀಲನಾಗಿರಬೇಕು. ಆಗಲೇ ಭಾಷಾಂತರ ಪುನಃಸೃಷ್ಟಿ ಎಂದು ಪರಿಗಣಿತವಾಗುತ್ತದೆ. ಮೂಲಸಾಹಿತಿಯದು ಸೃಷ್ಟಿಕಾರ್ಯವಾದರೆ ಭಾಷಾಂತರಕಾರನದು ಅನುಸೃಷ್ಟಿಕಾರ್ಯ ವೆನಿಸಿಕೊಳ್ಳುತ್ತದೆ. ಭಾಷಾಂತರಕಾರನು ಮೂಲಸಾಹಿತಿಯು ಸೃಜಿಸಿರುವುದನ್ನು ಅನುಸರಿಸಿಯೇ ಭಾಷಾಂತರವನ್ನು ಮಾಡಬೇಕಾಗುತ್ತದೆ. ಭಾಷಾಂತರಕಾರ ಯಾವ ಕಾರಣಕ್ಕೂ ಪ್ರತಿಸೃಷ್ಟಿಕರ್ತನಾಗುವುದು

ಸಾಧ್ಯವಾಗುವುದಿಲ್ಲ; ಅನುಸೃಷ್ಟಿಕರ್ತನಾಗಬೇಕಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಮೂಲಕೃತಿ ಸೃಷ್ಟಿಯಾದರೆ ಭಾಷಾಂತರ ಅನುಸೃಷ್ಟಿ ಎನಿಸಿಕೊಳ್ಳುತ್ತದೆ.

ಒಂದು ಒಳ್ಳೆಯ ಭಾಷಾಂತರಿತ ಕೃತಿ ಮೂಲದಷ್ಟೇ ಮಹತ್ವವನ್ನು, ಬೆಲೆಯನ್ನು ಹೊಂದಿದ ಕೃತಿಯೆನಿಸಿಕೊಳ್ಳುತ್ತದೆ. ಇಂತಹ ಭಾಷಾಂತರವನ್ನು ಓದುವುದು ಸುಲಭ. ಆದರೆ ಇದನ್ನು ಬರೆಯುವುದು ಸುಲಭದ ಕಾರ್ಯವಲ್ಲ. ಮೂಲದ ಭಾಷೆಯ ಜಾಯಮಾನವನ್ನು ಸಂಪೂರ್ಣವಾಗಿ ಅರಿತುಕೊಂಡ ಭಾಷಾಂತರಕಾರನು ಮಾತ್ರ ಒಂದು ಒಳ್ಳೆಯ ಭಾಷಾಂತರವನ್ನು ಮಾಡಲು ಶಕ್ತನೆನಿಸಿಕೊಳ್ಳುತ್ತಾನೆ. ಬಸವಪ್ಪ ಶಾಸ್ತ್ರಿಗಳ 'ಅಭಿಜ್ಞಾನ ಶಾಕುಂತಲ' ಕೃತಿ ಇಂತಹ ಒಂದು ಉತ್ತಮ ಭಾಷಾಂತರಕ್ಕೆ ಉದಾಹರಣೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಭಾಷಾಂತರದಲ್ಲಿ ಅನೇಕ ಪ್ರಕಾರಗಳನ್ನು ಗುರುತಿಸಬಹುದಾಗಿದೆ. ಪ್ರಧಾನ ಗುರುದತ್ತರು ಮುಖ್ಯವಾಗಿ ಎಂಟು ಪಕ್ರಾರಗಳನ್ನು ಗುರುತಿಸುತ್ತಾರೆ. ಶಬ್ದಾನುವಾದ, ವಿಸ್ತಾರಾನುವಾದ, ನಿಕಟನುವಾದ, ಭಾವಾನುವಾದ, ಸಂಗ್ರಹಾನುವಾದ, ರೂಪಾಂತರ, ಸರಳಾನುವಾದ, ಅರ್ಥಾನುವಾದ ಎಂಬುದೇ ಆ ಎಂಟು ಪ್ರಕಾರಗಳು. ಆದರೆ ಜಿ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿ ಇವರು ತಮ್ಮ ಕೃತಿ 'ಅನುವಾದ ಕಲೆ'ಯಲ್ಲಿ ಮುಖ್ಯವಾಗಿ ರೂಪಾಂತರ ಮತ್ತು ಭಾವಾನುವಾದ ಎಂಬ ಎರಡು ಪ್ರಕಾರಗಳನ್ನು ಮಾತ್ರ ಗುರುತಿಸುತ್ತಾರೆ. ಅವರ ಪ್ರಕಾರ ಭಾವಾನುವಾದವೆಂದರೆ ಈ ಪ್ರಕಾರದಲ್ಲಿ ಅನುವಾದಕನು ಸ್ವಾತಂತ್ರ್ಯವನ್ನು ವಹಿಸಿ ಮೂಲದ ಕೃತಿಯ ಭಾವಕ್ಕೆ ಭಂಗಬಾರದಂತೆ ಮೂಲಕೃತಿಯ ವಿವೇಚನೆಯನ್ನು ಹಿಗ್ಗಿಸುವ ಅಥವಾ ಒಂದಿಷ್ಟು ಕುಗ್ಗಿಸುವ ಸ್ವಾತಂತ್ರ್ಯ ವಹಿಸಬಹುದು. ಮೂಲಕೃತಿಯ ಕಥಾವಸ್ತು, ಪಾತ್ರಚಿತ್ರಣ, ಪಾತ್ರಗಳ ಹೆಸರು ಇವುಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸವನ್ನು ಮಾಡದೇ ಮೂಲಕೃತಿಯ ಬದಲಾವಣೆಗೆ ತಕ್ಕಂತೆ ವಿವರಗಳನ್ನು ಕಡಿಮೆ ಅಥವಾ ಹೆಚ್ಚು ಮಾಡಬಹುದು. ಪರಿಸರದ ಬದಲಾವಣೆಗೂ ಇಲ್ಲಿ ಅವಕಾಶವಿದೆ. ಒಂದು ಕಾಲದಲ್ಲಿ ಒಂದು ವಿಶಿಷ್ಟ ಪರಿಸರದಲ್ಲಿ ನಡೆದ ಘಟನೆ ನಮ್ಮ ಕಾಲದಲ್ಲಿ ನಮ್ಮ ಪರಿಸರದಲ್ಲಿ ನಡೆದಂತೆ ಚಿತ್ರಿಸುವ ಅವಕಾಶ ಭಾಷಾಂತರಕಾರನಿಗೆ ಇದ್ದೇ ಇದೆ ಎಂಬುದು ಅವರ ಅಭಿಪ್ರಾಯವಾಗಿದೆ.

ರೂಪಾಂತರ(Adaptation)ದಲ್ಲಿ 'ರೂಪಾಂತರ' ಎಂಬ ಹೆಸರೇ ಸೂಚಿಸುವ ಹಾಗೆ ಒಂದು ಸಂಸ್ಕೃತಿಯ ವಿಶಿಷ್ಟ ಬೆಳವಣಿಗೆಯಾದ ಮೂಲಕೃತಿಯ ವಸ್ತುವನ್ನು ಮತ್ತೊಂದು ಸಂಸ್ಕೃತಿಗೆ ಅಳವಡಿಸಿ ಉದ್ದಿಷ್ಟ ಭಾಷೆಯ ಸಂಸ್ಕೃತಿಯ ಅಂಶಗಳೊಂದಿಗೆ ಅದನ್ನು

ಸಮೀಕರಿಸಬಹುದು. ಅಲ್ಲಿ ಹೆಸರುಗಳು ಬದಲಾಗಬಹುದು, ಕಥಾವಸ್ತುವಿನ ಅಂಶಗಳನ್ನು ಹೆಚ್ಚುಕಡಿಮೆ ಮಾಡಬಹುದು. ಅಥವಾ ಮೂಲಕೃತಿಯ ಕಾಲ, ಪರಿಸರ ಬದಲಾಗಿ ಅನುವಾದಕನ ಕಾಲ, ಕೃತಿಯ ಪರಿಸರವನ್ನು ಅದು ಪಡೆದುಕೊಳ್ಳಬಹುದು, ಅಥವಾ ಮೂಲಕೃತಿಯ ಒಂದು ಭಾಗವನ್ನು ಕೈಬಿಡಬಹುದು. ಇಲ್ಲವೇ ಇನ್ನೊಂದು ಹೊಸ ಭಾಗವನ್ನು ಸೇರಿಸಬಹುದು. ಹೀಗೆ ರೂಪಾಂತರ ಕ್ರಿಯೆ ಅನುವಾದಕ್ರಿಯೆಗಿಂತ ಭಿನ್ನವಾಗಿದೆ ಎಂಬುದು ಇದರಿಂದ ತಿಳಿಯುತ್ತದೆ.

೧೭ನೇ ಶತಮಾನದಿಂದ ಈಚೆಗೆ ಭಾಷಾಂತರ ತತ್ವವೂ ಭಾಷಾಂತರವನ್ನು ಮೂರು ಗುಂಪುಗಳನ್ನಾಗಿ ವರ್ಗೀಕರಿಸುತ್ತ ಬರಲಾಗಿದೆ ಎಂಬುದು ಓ.ಎಲ್. ನಾಗಭೂಷಣ ಸ್ವಾಮಿಯವರ ಅಭಿಪ್ರಾಯವಾಗಿದೆ. ಒಂದನೆಯದ್ದು ಅಕ್ಷರಶಃ ಭಾಷಾಂತರ, ಎರಡನೆಯದ್ದು ಅನುವಾದ ಹಾಗೂ ಮೂರನೆಯದ್ದು ರೂಪಾಂತರ. ಆದರೆ ಈ ಮೂರು ವರ್ಗಗಳಲ್ಲಿನ ವ್ಯತ್ಯಾಸವನ್ನು ಕಂಡುಕೊಳ್ಳುವುದು ಕಷ್ಟ. ಇದು ಅಸ್ಪಷ್ಟವೂ ಕೂಡ. ಈ ಮೂರು ವರ್ಗಗಳು ರೂಪದ (Form) ಕಲ್ಪನೆಯ ಆಧಾರದ ಮೇಲೆ ವಿಭಜನೆಗೊಂಡಿರುವುದರಿಂದ ಈ ವಿಭಜನೆಯ ಕ್ರಮ ಡ್ರೈಡನ್‌ನ ಚಿಂತನೆಗಳ ಪ್ರಭಾವದಿಂದ ಹೆಚ್ಚಿನ ಪ್ರಚಾರವನ್ನು ಪಡೆದುಕೊಂಡದ್ದು ಕಂಡುಬರುತ್ತದೆ.

ಜಿ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿ ಅವರ ಪ್ರಕಾರ ವಸ್ತುವಿನ ಭಿನ್ನತೆಯನ್ನು ಅವಲಂಬಿಸಿ ಅನುವಾದವನ್ನು ಮೂರು ಪ್ರಕಾರಗಳನ್ನಾಗಿ ವಿಂಗಡಿಸಿಕೊಳ್ಳಬಹುದಾಗಿದೆ. ಅವುಗಳೆಂದರೆ–

೧. ವೈಜ್ಞಾನಿಕ ಸಾಹಿತ್ಯಾನುವಾದ (Translation of Scientific literature)

೨. ಸಾಮಾಜಿಕ ಸಾಹಿತ್ಯಾನುವಾದ (Translation of Social sciences)

೩. ಸೃಜನ ಸಾಹಿತ್ಯಾನುವಾದ (Translation of Aesthetic literature)

ಮೊದಲನೆಯ ಪ್ರಕಾರವಾದ ವೈಜ್ಞಾನಿಕ ಸಾಹಿತ್ಯಾನುವಾದವು ವಿಜ್ಞಾನ ಮತ್ತು ತಾಂತ್ರಿಕತೆಯ ಸಾಹಿತ್ಯಕ್ಕೆ ಸಂಬಂಧಿಸಿದ ಅನುವಾದವನ್ನು ಒಳಗೊಂಡಿರುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನದ ವಿಷಯಗಳಾದ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ, ಜೀವಶಾಸ್ತ್ರ, ವೈದ್ಯಶಾಸ್ತ್ರ ಹಾಗೂ ಎಂಜಿನಿಯರಿಂಗ್ ಮುಂತಾದ ವಿಷಯಗಳನ್ನು ಇದು ಒಳಗೊಂಡಿರುತ್ತದೆ. ಈ ಪ್ರಕಾರದ ಅನುವಾದದಲ್ಲಿ ಖಚಿತತೆ ಮತ್ತು ಸ್ಪಷ್ಟತೆ ಬಹುಮುಖ್ಯವಾದ ಅಂಶಗಳಾಗಿವೆ. ಇಂತಹ ಅನುವಾದದಲ್ಲಿ ಉದ್ದಿಷ್ಟ ಭಾಷೆಯಲ್ಲಿ ಮೂಲಕ್ಕೆ ಸಮನಾದ

ಪಾರಿಭಾಷಿಕ ಶಬ್ದಗಳು ಲಭ್ಯವಿಲ್ಲದೇ ಹೋಗುವ ಸಂದರ್ಭಗಳು ಬರಬಹುದು. ಇಂತಹ ಸಂದರ್ಭಗಳಲ್ಲಿ ಅಂತಹ ಪದಗಳಿಗೆ ವಿವರಣಾತ್ಮಕವಾದ ಅರ್ಥಗಳನ್ನು ನೀಡಿ ಮೂಲದ ಅರ್ಥವನ್ನು ಹೊರಹೊಮ್ಮಿಸುವ ಪ್ರಯತ್ನವನ್ನು ಭಾಷಾಂತರಕಾರ ಮಾಡಬೇಕಾಗುತ್ತದೆ. ಇದು ಕೂಡ ಸಾಧ್ಯವಾಗದಾದಾಗ ಭಾಷಾಂತರಕಾರ ಮೂಲಭಾಷೆಯ ಪದವನ್ನೇ ಬಳಸಿಕೊಂಡು ಅನುವಾದವನ್ನು ಮಾಡಬೇಕಾಗುತ್ತದೆ.

ಎರಡನೆಯ ಪ್ರಕಾರವಾದ ಸಾಮಾಜಿಕ ಸಾಹಿತ್ಯಾನುವಾದದಲ್ಲಿ ಇತಿಹಾಸ, ಭೂಗೋಲ, ಅರ್ಥಶಾಸ್ತ್ರ, ರಾಜಕಾರಣಶಾಸ್ತ್ರ, ಸಮಾಜಶಾಸ್ತ್ರ, ತತ್ವಶಾಸ್ತ್ರ ಮುಂತಾದ ವಿಷಯಗಳು ಅನುವಾದದ ಪ್ರಕ್ರಿಯೆಗೆ ಒಳಗೊಳ್ಳುತ್ತವೆ. ಇಲ್ಲಿಯೂ ಕೂಡ ವಿಧಿವಿಧಾನಗಳು, ತಂತ್ರಪದ್ಧತಿಗಳು ವೈಜ್ಞಾನಿಕ ಸಾಹಿತ್ಯಾನುವಾದದಂತೆಯೇ ಇರುತ್ತವೆ. ಅನುವಾದಕನಿಗೆ ಈ ಪ್ರಕಾರದ ಅನುವಾದದಲ್ಲಿಯೂ ಪಾರಿಭಾಷಿಕ ಪದಗಳ ಲಭ್ಯತೆ ಇಲ್ಲದೇ ಇರುವ ಸಾಧ್ಯತೆಗಳು ಇದ್ದೇ ಇವೆ. ಅಂತಹ ಸಂದರ್ಭದಲ್ಲಿ ಖಚಿತ ಪಾರಿಭಾಷಿಕ ಶಬ್ದಗಳನ್ನು ಬಳಸುವುದು ಅಪೇಕ್ಷಣೀಯವಾದರೂ ಅಂತಹ ಪದಗಳು ಸಿಗಲಾರದಾದಾಗ ಅನುವಾದಕ ಮೂಲಭಾಷೆಯ ಪದಗಳನ್ನೇ ಸ್ವೀಕರಿಸಿ ಅನುವಾದವನ್ನು ಮಾಡಬೇಕಾಗುವುದು ಅನಿವಾರ್ಯ.

ಸಾಮಾಜಿಕ ಸಾಹಿತ್ಯಾನುವಾದದಲ್ಲಿ ವಿವಿಧ ಸಂಸ್ಕೃತಿಗಳ ಬಗೆಗಿನ ವಿಚಾರಗಳು ಅನುವಾದಗೊಳ್ಳಬೇಕಾದಾಗ ಒಂದು ಸಂಸ್ಕೃತಿಯ ಬಗೆಗಿನ ವಿಚಾರಗಳು ಇನ್ನೊಂದು ಸಂಸ್ಕೃತಿಯಲ್ಲಿ ಇರದೇ ಹೋಗುವ ಸಾಧ್ಯತೆಗಳು ಇರುತ್ತದೆ. ಉದಾಹರಣೆಗಾಗಿ ನಮ್ಮ ಸಂಸ್ಕೃತಿಯಲ್ಲಿ ಹೆಣ್ಣುಮಗಳು ಗರ್ಭವತಿಯಾದಾಗ ಮಾಡುವ ಕುಪ್ಪಸಕಾರ್ಯ ಪಾಶ್ಚಾತ್ಯರಲ್ಲಿ ಕಂಡುಬರುವುದಿಲ್ಲ. ಈ ರೀತಿಯ ಸಂದರ್ಭಗಳನ್ನು ಕನ್ನಡದ ಕೃತಿಯೊಂದರಿಂದ ಇಂಗ್ಲಿಷಿಗೆ ಭಾಷಾಂತರಿಸುವ ಸಂದರ್ಭದಲ್ಲಿ ಹೇಗೆ ಭಾಷಾಂತರಿಸಬೇಕು ಎಂಬ ಸಮಸ್ಯೆ ಎದುರಾಗುತ್ತದೆ. ಇನ್ನೊಂದು ಸಂಸ್ಕೃತಿಯಲ್ಲಿ ಆಚರಣೆಯಲ್ಲಿ ಇಲ್ಲದ ಮೇಲೆ ಅದಕ್ಕೆ ಸಂವಾದಿಶಬ್ದಗಳು ಸಿಗುವುದು ಸಾಧ್ಯವಿಲ್ಲದ ಮಾತು. ಇಂತಹ ಸಂದರ್ಭಗಳಲ್ಲಿ ಮೂಲಪದವನ್ನೇ ಅನುವಾದದಲ್ಲಿಯೂ ಬಳಸಿಕೊಂಡು ಅನುವಾದಗೊಂಡ ಭಾಷೆಯಲ್ಲಿ ಅದಕ್ಕೆ ವಿವರಣೆಯನ್ನು ನೀಡುವುದೇ ಇದಕ್ಕಿರುವ ಪರಿಹಾರ. ಹೀಗಾಗಿ ಈ ಬಗೆಯ ಅನುವಾದದಲ್ಲಿ ಸಂವಾದಿ ಪದಗಳ ಕೊರತೆಯನ್ನು ಅನುವಾದಕ ಎದುರಿಸುವುದು ಅನಿವಾರ್ಯವಾಗಿಬಿಡುತ್ತದೆ.

ಸೃಜನ ಸಾಹಿತ್ಯಾನುವಾದವು ಈಗಾಗಲೇ ಚರ್ಚಿತವಾಗಿರುವ ವೈಜ್ಞಾನಿಕ ಮತ್ತು

ಸಾಮಾಜಿಕ ಸಾಹಿತ್ಯಾನುವಾದಗಳಿಗಿಂತ ಭಿನ್ನವಾದ ಪ್ರಕಾರವಾಗಿದೆ. ಈ ಬಗೆಯ ಅನುವಾದದ ವಿಧಿವಿಧಾನಗಳು ಉಳಿದೆರಡು ಪ್ರಕಾರಗಳಿಗಿಂತ ಭಿನ್ನವಾಗಿದ್ದು, ಇದು ಉಳಿದ ಪ್ರಕಾರಗಳಿಗಿಂತ ಕಠಿಣವಾದ ಪ್ರಕ್ರಿಯೆ ಎಂಬ ಅಭಿಪ್ರಾಯವಿದೆ. ಸೃಜನ ಸಾಹಿತ್ಯದಲ್ಲಿ ಪ್ರಕಾರಗಳು ಅನೇಕವಿದ್ದು ಪ್ರತಿಯೊಂದು ಪ್ರಕಾರದ ಅನುವಾದವು ಇನ್ನೊಂದು ಪ್ರಕಾರಕ್ಕಿಂತ ಭಿನ್ನತೆಯನ್ನು ಹೊಂದಿರುತ್ತದೆ. ಕಾವ್ಯ, ನಾಟಕ, ಕಥೆ, ಕಾದಂಬರಿ ಹಾಗೂ ಪ್ರಬಂಧ ಇವು ಸೃಜನ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಮುಖ್ಯವಾದ ಪ್ರಕಾರಗಳಾಗಿವೆ. ಬಹುತೇಕ ಅನುವಾದಕರು ಸೃಜನಸಾಹಿತ್ಯದಲ್ಲಿ ಕಾವ್ಯದ ಅನುವಾದ ಹೆಚ್ಚು ಕಷ್ಟಕರ ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಇದನ್ನೆ ಖಂಡಿತವಾಗಿಯೂ ಹೌದು ಎಂದು ಒಪ್ಪಿಕೊಳ್ಳುವಂತೆಯೂ ಇಲ್ಲ. ಏಕೆಂದರೆ, ಕಾವ್ಯವನ್ನು ಮೂಲದಷ್ಟೇ ಸೊಗಸಾಗಿ ಅನುವಾದಿಸಿದ ಅನುವಾದಕರೂ ಇದ್ದಾರೆ. ಅನುವಾದಕನು ಮೂಲಕೃತಿಕಾರನಷ್ಟೇ ಪ್ರತಿಭಾಶಾಲಿಯಾಗಿದ್ದಲ್ಲಿ ಮೂಲದ ಮಟ್ಟಕ್ಕೆ ಸಮನಾದ ಅನುವಾದ ಸಾಧ್ಯವೆನ್ನುವುದಕ್ಕೆ ತೀ.ನಂ.ಶ್ರೀ ಅವರು, ಬೇಂದ್ರೆಯವರು ಅನುವಾದಿಸಿದ ಕಾಳಿದಾಸನ 'ಮೇಘದೂತ'ವನ್ನು ಉದಾಹರಿಸಿದ್ದಾರೆ.

Fitz Gerald ಅವರು ಅನುವಾದಿಸಿದ ಓಮರ್ ಖಯ್ಯಾಮನ 'ರುಬಾಯತ್'ಗಳು, ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತಗಳು' (Pal grave's Golden Treasury ಯಿಂದ) ಈ ಕ್ಷೇತ್ರದಲ್ಲಿ ಅನುವಾದದ ಆದರ್ಶಗಳಾಗಿ ಚಿರಸ್ಥಾಯಿಯಾಗಿ ನಿಂತಿರುವುದು ಸಾಹಿತ್ಯವಲಯದಲ್ಲಿ ಎಲ್ಲರಿಗೂ ತಿಳಿದಿರುವ ವಿಚಾರವಾಗಿದೆ. ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತಗಳು' ಅನುವಾದ ಹೊಸಗನ್ನಡ ಭಾವಗೀತ ಸಾಹಿತ್ಯಕ್ಕೆ ನಾಂದಿಯನ್ನೇ ಹಾಡಿತು ಎಂಬಲ್ಲಿ ಈ ಅನುವಾದ ಎಷ್ಟು ಪ್ರಭಾವವನ್ನು ಕನ್ನಡ ಸಾಹಿತ್ಯಪ್ರಪಂಚದಲ್ಲಿ ಮಾಡಿತು ಎಂಬುದರ ಅರಿವಾಗುತ್ತದೆ. ಬಸವಪ್ಪ ಶಾಸ್ತ್ರಿಗಳು ಮಾಡಿದ ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದ ಅನುವಾದ ಕೂಡ ಉತ್ಕೃಷ್ಟವಾದ ಅನುವಾದ ಎಂಬ ಮನ್ನಣೆಯನ್ನು ಪಡೆದುಕೊಂಡಿದೆ. ಹೀಗೆ ಬಸವಪ್ಪ ಶಾಸ್ತ್ರಿಗಳು, ಬಿ.ಎಂ.ಶ್ರೀ, ಬೇಂದ್ರೆ, Fitz Gerald ಇವರ 'ಅನುವಾದಗಳು' ಒಂದು ಭಾಷೆಯು ಇನ್ನೊಂದು ಭಾಷೆಗೆ ಕಾವ್ಯದ ಭಾಷಾಂತರ ಯಶಸ್ಸನ್ನು ಸಾಧಿಸಬಹುದು ಎಂಬುದನ್ನು ತೋರಿಸಿಕೊಟ್ಟಿವೆ.

ಕಾವ್ಯೇತರ ಸಾಹಿತ್ಯಗಳ ಅನುವಾದವೂ ಕೂಡ ಕಾವ್ಯಪ್ರಕಾರದ ಅನುವಾದದಷ್ಟಲ್ಲವಾದರೂ ತಮ್ಮದೇ ಆದ ಸಮಸ್ಯೆಗಳನ್ನು ಎದುರಿಸುವುದು ಅನಿವಾರ್ಯವಾಗಿದೆ.

ಗಯಟೆ ವಿದ್ವಾಂಸನು ಭಾಷಾಂತರದಲ್ಲಿ ಮೂರು ಗುಂಪುಗಳನ್ನಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಹಾಗೂ ಈ ರೀತಿಯಾಗಿ ವಿಂಗಡಿಸಿಕೊಳ್ಳುವಾಗ ರೂಪದ ಕಲ್ಪನೆಯ

ಜೊತೆಯಲ್ಲಿಯೇ ಕಾಲದ ಕಲ್ಪನೆಯನ್ನು ಬಳಸಿಕೊಂಡು ಭಾಷಾಂತರವನ್ನು ವಿಂಗಡಿಸಿರುತ್ತಾನೆ. ಗಯಟೆಯ ಪ್ರಕಾರ ಪ್ರತಿಯೊಂದು ಸಾಹಿತ್ಯವೂ ಭಾಷಾಂತರದ ಮೂರು ಘಟ್ಟಗಳನ್ನು ಹಾಯ್ದು ಬೆಳೆಯುತ್ತದೆ. ಮೊದಲನೆಯ ಘಟ್ಟದಲ್ಲಿ ಪರಕೀಯ ಸಂಸ್ಕೃತಿಯ ಪರಿಚಯವಾದರೆ, ಎರಡನೇ ಘಟ್ಟದಲ್ಲಿ ಭಾಷಾಂತರ ಪ್ರತಿನಿಧಿಸ್ವರೂಪವನ್ನು ಹೊಂದುತ್ತದೆ. ಹಾಗೂ ಮೂರನೇ ಘಟ್ಟದಲ್ಲಿ ಭಾಷಾಂತರದಲ್ಲಿ ಪರಿಪೂರ್ಣತೆಯ ಅಪೇಕ್ಷೆಯನ್ನು ಒಳಗೊಂಡಿರುತ್ತದೆ.

ರೋಮನ್ ಜಾಕಬ್‌ಸನ್‌ನ ಭಾಷಾಂತರದ ವಿನ್ಯಾಸವು ಡ್ರೈಡನ್ ಹಾಗೂ ಇತರರಿಗಿಂತ ಹೆಚ್ಚು ಸಮಗ್ರವಾದದ್ದು ಎನಿಸುತ್ತದೆ. ಜಾಕಬ್‌ಸನ್‌ನ ಭಾಷಾಂತರದ ವಿನ್ಯಾಸ ಸಂಜ್ಞಾಶಾಸ್ತ್ರದ ದೃಷ್ಟಿಕೋನವನ್ನಾಧರಿಸಿದ್ದಾಗಿದೆ. ಈತನ ಪ್ರಕಾರ ಕಾವ್ಯದ ಭಾಷಾಂತರ ಅಸಾಧ್ಯ. ಇದಕ್ಕೆ ಕೊಡುವ ಕಾರಣ ಕಾವ್ಯದಲ್ಲಿ ಶಬ್ದಕ್ಕೂ, ಅರ್ಥಕ್ಕೂ ನಿಕಟವಾದ ಸಂಬಂಧವಿರುವುದರಿಂದ ಭಾಷಾಂತರ ಅಸಾಧ್ಯವಾಗುತ್ತದೆ. ಸೃಜನಶೀಲ ಅರ್ಥಸ್ಥಾನಾಂತರ ಮಾತ್ರ ಸಾಧ್ಯವಾಗುತ್ತದೆ. ಒಂದೇ ಭಾಷೆಯಲ್ಲಿ ಒಂದು ಕಾವ್ಯರೂಪವನ್ನು ಮತ್ತೊಂದು ಕಾವ್ಯರೂಪಕ್ಕೆ ಅಥವಾ ಮತ್ತೊಂದು ಮಾಧ್ಯಮಕ್ಕೆ ಅಥವಾ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಒಯ್ದು ಸೃಜನಶೀಲ ಅರ್ಥಸ್ಥಾನಾಂತರವನ್ನು ಸಾಧಿಸುವುದು ಸಾಧ್ಯವಿದೆ ಎಂಬುದು ಜಾಕಬ್‌ಸನ್‌ನ ಅಭಿಪ್ರಾಯವಾಗಿದೆ.

ಭಾಷಾಂತರದ ಈ ಮೇಲಿನ ತತ್ವಗಳಲ್ಲಿ ಸಮಾನವಾಗಿ ಕಂಡುಬರುವ ಅಂಶವೆಂದರೆ ಇವೆಲ್ಲವೂ ಒಂದೇ ಪ್ರಶ್ನೆಯನ್ನು ಭಿನ್ನ ರೀತಿಯಲ್ಲಿ ಪರಿಶೀಲಿಸುತ್ತವೆ ಎಂಬುದು. ಮೂಲಕೃತಿಗೆ ಎಷ್ಟರಮಟ್ಟಿಗೆ ಭಾಷಾಂತರದಲ್ಲಿ ನಿಷ್ಟವಾಗಿರಬೇಕು ಅಥವಾ ನಿಷ್ಟವಾಗಿರಬಹುದು? ಆಕರಭಾಷೆಯ ಪಠ್ಯಕ್ಕೂ ಭಾಷಾಂತರಪಠ್ಯಕ್ಕೂ ಏರ್ಪಡುವ ಸಂಬಂಧಗಳಲ್ಲಿ ಯಾವ ಬಗೆಯದನ್ನು ಅತ್ಯಂತ ಯಶಸ್ವಿಯೆಂದು ಗುರುತಿಸಬಹುದು? ಎಂಬ ವಿಚಾರಗಳ ಬಗೆಗಿನ ಚರ್ಚೆ ಅನೇಕ ವರ್ಷಗಳಿಂದ ನಡೆಯುತ್ತಲೇ ಬಂದಿದೆ.

ಭಾಷಾಂತರದ ಸಾಧ್ಯತೆಯನ್ನು ಕುರಿತ ಚರ್ಚೆ ಜ್ಞಾನಶಾಸ್ತ್ರ (ಎಪಿಸ್ಟಮಾಲಾಜಿ)ದ ಭಾಗವಾಗಿ ಬೆಳೆದಿದೆ. ಜರ್ಮನಿಯಲ್ಲಿ ಭಾಷಾಂತರದ ತತ್ವಗಳ ಕುರಿತಾದ ವಿಪುಲವಾದ ಚರ್ಚೆಯನ್ನು ಕಾಣುತ್ತೇವೆ. ವಿದ್ವಾಂಸರ ಪ್ರಕಾರ ಆಧುನಿಕ ಜರ್ಮನ್ ಭಾಷೆ ಬೆಳೆದದ್ದೇ ಲೂಥರ್‌ನ ಬೈಬಲ್ ಭಾಷಾಂತರದಿಂದ, ವಾನ್‌ನ ಹೋಮರನ ಭಾಷಾಂತರದಿಂದ ಹಾಗೂ ಶ್ಲೆಗೆಲ್ ಮುಂತಾದವರ ಶೇಕ್ಸ್‌ಪಿಯರ್‌ನ ಭಾಷಾಂತರದಿಂದ. ಈ ಎಲ್ಲ ಕಾರಣಗಳಿಂದಾಗಿ ಜರ್ಮನಿಯಲ್ಲಿ ಭಾಷಾಂತರದ ಕುರಿತು ಚರ್ಚೆ ಉನ್ನತ ತಾತ್ವಿಕ

ಚರ್ಚೆಯಾಗಿ ಬೆಳೆದಿದೆ. ಈ ಚರ್ಚೆಯಲ್ಲಿ ಭಾಷಾಂತರದ ಪ್ರಕ್ರಿಯೆಯಲ್ಲಿ ಸ್ವೀಕಾರಭಾಷೆ ಹಾಗೂ ಆಕರಭಾಷೆಗಳ ನಡುವಿನ ಸಂಬಂಧದ ಕುರಿತಾದ ಪ್ರಶ್ನೆಗಳು ಉದ್ಭವಿಸಿವೆ. ಸ್ವೀಕಾರಭಾಷೆ ತನ್ನನ್ನು ಸಂಪೂರ್ಣವಾಗಿ ಕಳೆದುಕೊಂಡು ಆಕರ ಭಾಷೆಯ ಸಾಮೀಪ್ಯ ಪಡೆಯಬೇಕೆ? ಹಾಗಾದರೆ ಭಾಷಾಂತರದ ಭಾಷೆ ಉದ್ದೇಶಪೂರ್ವಕವಾಗಿ ಅಪರಿಚಿತವಾದ ಭಾಷೆಯಾಗಿ ಪರಿಣಮಿಸುವುದಿಲ್ಲವೆ? ಅಥವಾ ಆಕರಭಾಷೆಯಿಂದ ದೂರವಿದ್ದು ತನ್ನತನವನ್ನು ಪ್ರಮುಖವಾಗಿ ಭಾಷಾಂತರ ಸ್ವೀಕಾರಭಾಷೆಗೆ ಸಹಜವಾದಂತೆ ಇರಬೇಕೆ? ಉದಾಹರಣೆಗೆ ಕನ್ನಡಕ್ಕೆ ಇಂಗ್ಲಿಷಿನಿಂದ ಏನನ್ನಾದರೂ ಭಾಷಾಂತರಿಸಿದರೆ ಕನ್ನಡವು ಇಂಗ್ಲಿಷ್‌ನಂತೆ ಇರಬೇಕೆ ಅಥವಾ ಕನ್ನಡದಂತೆಯೆ ಇರಬೇಕೆ? ಎಂಬ ಪ್ರಶ್ನೆ ಹುಟ್ಟುತ್ತದೆ. ಈ ಭಾಷಾಂತರವು ಇಂಗ್ಲಿಷಿಗೆ ಸಮೀಪವಾದರೆ ಅದು ಕನ್ನಡವೂ ಅಲ್ಲದೆ ಇಂಗ್ಲಿಷೂ ಅಲ್ಲದೆ ಭಾಷಾಂತರದ ಹೊಸಭಾಷೆಯೇ ಆಗುವುದಿಲ್ಲವೇ ಎಂಬ ಪ್ರಶ್ನೆಗಳು ಏಳುತ್ತವೆ.

ಭಾಷಾಂತರಕ್ಕೆ ಸಂಬಂಧಿಸಿದಂತೆ ಸಾರ್ವತ್ರಿಕವಾದ ಮನ್ನಣೆಯನ್ನು ಪಡೆದುಕೊಂಡ ನಿರ್ದಿಷ್ಟವಾದ ಸೂತ್ರಗಳು ನಮಗೆ ದೊರೆಯುವುದಿಲ್ಲ. ವಿವಿಧ ವಿದ್ವಾಂಸರು ನೀಡಿದ ಅಭಿಪ್ರಾಯವನ್ನು ಕ್ರೋಡೀಕರಿಸಿ ಭಾಷಾಂತರ ಎಂದರೆ ಹೀಗೆ ಎಂದು ಹೇಳಬಹುದಾದರೂ ಅದಕ್ಕೆ ಒಂದು ಖಚಿತತೆಯನ್ನು ಸಾಧಿಸಿಕೊಳ್ಳುವುದು ಇನ್ನೂ ಸಾಧ್ಯವಾಗಿಲ್ಲ. ಜಿ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿಯವರು ಭಾಷಾಂತರದ ಕುರಿತಾಗಿ ಥಿಯೋಡೋರ್ ಸೆವೊರಿ ಎಂಬ ವಿದ್ವಾಂಸರು ೧೨ ತತ್ವಗಳನ್ನು ನೀಡಿದ್ದಾರೆ. ಅವುಗಳನ್ನು ಹೀಗೆ ಪಟ್ಟಿಮಾಡಬಹುದು. ಅವುಗಳೆಂದರೆ–

೧. ಅನುವಾದವು ಮೂಲದ ಶಬ್ದಗಳನ್ನೇ ಅಭಿವ್ಯಕ್ತಗೊಳಿಸಬೇಕು.

೨. ಅನುವಾದವು ಮೂಲದ ವಿಚಾರಗಳನ್ನು ಅಭಿವ್ಯಕ್ತಿಗೊಳಿಸಬೇಕು.

೩. ಅನುವಾದವು ಮೂಲಕೃತಿಯಂತಿರಬೇಕು.

೪. ಅನುವಾದವು ಅನುವಾದದಂತಿರಬೇಕು.

೫. ಅನುವಾದವು ಮೂಲಕೃತಿಯ ಶೈಲಿಯನ್ನು ಪಡೆದಿರಬೇಕು.

೬. ಅನುವಾದವು ಅನುವಾದಕನ ಶೈಲಿಯನ್ನು ಪಡೆದಿರಬೇಕು.

೭. ಅನುವಾದವು ಮೂಲಕೃತಿಯ ಸಮಕಾಲೀನ ಚಿತ್ರವನ್ನು ಕೊಡಬೇಕು.

೮. ಅನುವಾದವು ಅನುವಾದಕನ ಸಮಕಾಲೀನ ಚಿತ್ರವನ್ನು ಕೊಡಬೇಕು.

೯. ಅನುವಾದವು ಮೂಲವನ್ನು ಮಾರ್ಪಡಿಸಬಹುದು===.

೧೦. ಅನುವಾದವು ಮೂಲವನ್ನು ಮಾರ್ಪಡಿಸಬಾರದು===

೧೧. ಪದ್ಯಕೃತಿಯ ಅನುವಾದ ಗದ್ಯದಲ್ಲಿ ಆಗಬೇಕು.

೧೨. ಪದ್ಯಕೃತಿಯ ಅನುವಾದ ಪದ್ಯದಲ್ಲಿಯೇ ಇರಬೇಕು.

ಸವೊರಿ ನೀಡಿರುವ ತತ್ವಗಳನ್ನು ಅವಲೋಕಿಸಿದಾಗ ಇವು ಒಂದಕ್ಕೊಂದು ವಿರುದ್ಧವಾದ ಅಂಶಗಳನ್ನು ತತ್ವಗಳನ್ನು ಪ್ರತಿಪಾದಿಸುವುದು ಕಂಡುಬರುತ್ತದೆ. ಭಾಷಾಂತರದ ತತ್ವಕ್ಕೆ ಖಚಿತತೆ ಇಲ್ಲ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರದಾನ ಗುರುದತ್ತರು ಈ ಎಲ್ಲ ತತ್ವಗಳನ್ನು ಗಮನಿಸಿ ಭಾಷಾಂತರದ ವಸ್ತು, ಶೈಲಿ ಮತ್ತು ಅಂಶಗಳ ದೃಷ್ಟಿಯಿಂದ ಮೂಲಕ್ಕೆ ಸದೃಶವಾದುದನ್ನು ಸೃಷ್ಟಿಸುವುದಕ್ಕೆ ನೆರವಾಗುವ ಅಥವಾ ಹಾಗೆ ಸೃಷ್ಟಿಯಾದುದನ್ನು ಈ ಮೂರು ಅಂಶಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ನೆರವಾಗುವ ಸೂತ್ರಗಳೇನಾದರೂ ಇದ್ದರೆ ಅಂಥವನ್ನು ನಾವು ಭಾಷಾಂತರದ ತತ್ವ ಅಥವಾ ಸಿದ್ಧಾಂತಗಳೆಂದು ಭಾವಿಸಬಹುದು ಎಂದು ಅಭಿಪ್ರಾಯ ಪಡುತ್ತಾರೆ.

ಪೋಸ್ಟ್‌ಗೇಟ್ ಎಂಬ ವಿದ್ವಾಂಸನು ಭಾಷಾಂತರದ ತತ್ವಗಳನ್ನು ವೈಜ್ಞಾನಿಕವಾಗಿ ನಿದರ್ಶನಪೂರ್ವಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಿರುವುದರಿಂದ ಭಾಷಾಂತರದ ತತ್ವಗಳ ಕುರಿತಾಗಿ ನಿರ್ದಿಷ್ಟತೆಯನ್ನು ಹೊಂದಲು ಅನುಕೂಲವಾಗಿದೆ. ಇವರು ಭಾಷಾಂತರಕ್ಕೆ ಸಂಬಂಧಿಸಿದಂತೆ ಐದು ತತ್ವಗಳನ್ನು ಪ್ರಸ್ತುತಪಡಿಸುತ್ತಾರೆ–

೧. ವಿಧೇಯತಾ ತತ್ವ (Principle of Fidelity)

೨. ಆನಂದ ತತ್ವ (Principle of Pleasure of the Readier)

೩. ಅನುರೂಪತಾ ತತ್ವ (Principle of Commensurateness)

೪. ಪರಿಹಾರ ತತ್ವ (Principle of Compensation)

೫. ಮೂಲಭಾಸತಾ ತತ್ವ (Principle of Originalness)

**ವಿಧೇಯತಾ ತತ್ವ:** ಈ ತತ್ವದ ಪ್ರಕಾರ ಭಾಷಾಂತರಕಾರ ಮೂಲಕ್ಕೆ ವಿಧೇಯನಾಗಿರಬೇಕಾಗುತ್ತದೆ. ಆದರೆ ಭಾಷಾಂತರಕಾರ ಯಾವುದಕ್ಕೆ ಮತ್ತು ಎಷ್ಟರಮಟ್ಟಿಗೆ ವಿಧೇಯನಾಗಿರಬೇಕೆಂಬ ಪ್ರಶ್ನೆ ಇಲ್ಲಿ ಹುಟ್ಟುತ್ತದೆ. ಮೂಲಭಾಷೆ ಹಾಗೂ ಉದ್ದಿಷ್ಟಭಾಷೆಗಳೆರಡಕ್ಕೂ ವಿಧೇಯತೆಯನ್ನು ತೋರಬೇಕಾದದ್ದು ಭಾಷಾಂತರಕಾರನ

ಕರ್ತವ್ಯವಾಗುತ್ತದೆ. ಭಾಷಾಂತರಕಾರ ಮೂಲದ 'ವಸ್ತು' (substance) ಮತ್ತು ಪ್ರಕಾರ(form)ಗಳಿಗೆ ವಿಧೇಯನಾಗಿರಬೇಕಾಗುತ್ತದೆ.

**ಆನಂದತತ್ವ:** ಮೂಲಕೃತಿಯನ್ನು ಓದಿದಾಗ ಓದುಗರಿಗೆ ಸಿಗುವ ಆನಂದವು ಭಾಷಾಂತರಿತ ಕೃತಿಯನ್ನು ಓದಿದಾಗಲೂ ಅದೇ ರೀತಿಯ ಆನಂದ ಸಿಗುವಂತಿರಬೇಕು. ಮೂಲಕೃತಿಯಂತೆಯೇ ಸಹಜವಾಗಿ ಓದುವಿಕೆ ಭಾಷಾಂತರಿತ ಕೃತಿಯಲ್ಲಿ ಸಾಧ್ಯವಾದಾಗ ಮಾತ್ರ ಈ ಆನಂದವನ್ನು ಪಡೆಯುವುದು ಸಾಧ್ಯವಾಗುತ್ತದೆ. ಮೂಲದ ಪಠ್ಯಕ್ಕೆ ದಾಸನಾಗದೇ ಮೂಲದ ಆಶಯಕ್ಕೆ ವಿಧೇಯನಾಗಿದ್ದುಕೊಂಡು ಭಾಷಾಂತರ ಮಾಡಿದರೆ ಅಂತಹ ಭಾಷಾಂತರ ಆನಂದದಾಯಕವಾಗಿರುತ್ತದೆ ಎಂಬುದು ಈ ತತ್ವದ ಸಾರವಾಗಿದೆ.

**ಅನುರೂಪತಾ ತತ್ವ:** ಭಾಷಾಂತರಿತ ಕೃತಿಯಲ್ಲಿ ಮೂಲದ ಭಾವಾಂಶ, ಚಿಂತನಾಂಶ, ರೂಪಾಂಶಗಳೆಲ್ಲ ಸಮಗ್ರ ರೂಪದಲ್ಲಿ ಮೂಡಿ ಬರಬೇಕೆನ್ನುವುದು ಈ ತತ್ವದ ಆಶಯ. ವಿಜ್ಞಾನ ಹಾಗೂ ಮಾನವಿಕ ಕ್ಷೇತ್ರಗಳಲ್ಲಿ ಈ ರೀತಿಯ ಅನುವಾದ ಸಾಧ್ಯವಾಗಬಹುದಾದರೂ ಸಾಹಿತ್ಯಕ್ಷೇತ್ರದಲ್ಲಿ ವಿಶೇಷವಾಗಿ ಕಾವ್ಯಕ್ಷೇತ್ರದಲ್ಲಿ ಇದು ಕಷ್ಟವಾದ ಸಂಗತಿಯಾಗಿದೆ. ಮೂಲಕಾವ್ಯದಲ್ಲಿರುವ ವೈಭವಯುತವಾದ ವಿಚಾರಗಳನ್ನು ಉದ್ದಿಷ್ಟಭಾಷೆಯಲ್ಲಿ ಅಷ್ಟೇ ಸಮಗ್ರ ರೂಪದಲ್ಲಿ ಭಾಷಾಂತರಿಸುವುದು ಸಾಧ್ಯವಾಗಲಾರದು.

**ಪರಿಹಾರ ತತ್ವ:** ಮೂಲಕೃತಿಯ ಸಮಗ್ರತೆಯನ್ನು ಭಾಷಾಂತರದ ಕೃತಿಯಲ್ಲಿ ಕಂಡುಕೊಳ್ಳಬೇಕೆಂಬುದು ಸತ್ಯವಾದರೂ ಇದು ಕಷ್ಟಸಾಧ್ಯವಾದ ವಿಚಾರವಾಗಿದೆ. ಕಾವ್ಯದ ಭಾಷಾಂತರದಲ್ಲಿ ಮೂಲಕಾವ್ಯದ ಅರ್ಥಭಾವ, ಲಯ ಇವುಗಳನ್ನು ಅನುವಾದದಲ್ಲಿಯೂ ತರುವುದು ಕಷ್ಟವಾದ ಕೆಲಸ. ಇಂತಹ ಸಂದರ್ಭಗಳಲ್ಲಿ ಆಗುವ ನಷ್ಟವನ್ನು ಸರಿದೂಗಿಸಲು ಪರಿಹಾರ ತತ್ವವನ್ನು ಭಾಷಾಂತರಕಾರ ಅಳವಡಿಸಿಕೊಳ್ಳಬೇಕಾಗುತ್ತದೆ. ಉದ್ದಿಷ್ಟಭಾಷೆಗೆ ಸಹಜವಾದ ಪ್ರಾಸ, ಲಯ ಮತ್ತು ಛಂದಸ್ಸುಗಳನ್ನು ಕಲ್ಪಿಸಿಕೊಂಡು ಮೂಲದಂತೆಯೇ ಭಾಷಾಂತರವೂ ಪರಿಣಾಮ ಬೀರುವಂತೆ ಮಾಡಬೇಕು ಎಂಬುದೇ ಈ ತತ್ವದ ಆಶಯ.

**ಮೂಲಭಾಸತಾ ತತ್ವ:** ಮೂಲದ ಕೃತಿ ಎಷ್ಟು ಚೆನ್ನಾಗಿ ಓದುಗನನ್ನು ಓದಿಸಿಕೊಳ್ಳುತ್ತದೆಯೋ ಅಷ್ಟೇ ಚೆನ್ನಾಗಿ ಭಾಷಾಂತರಿತ ಕೃತಿಯು ಓದಿಸಿಕೊಳ್ಳಬೇಕು ಎಂಬುದು ಈ ತತ್ವದ ಆಶಯವಾಗಿದೆ. ಯಾವ ಹಂತದಲ್ಲಿಯೂ ಓದುಗನಿಗೆ ತಾನೊಂದು ಭಾಷಾಂತರವನ್ನು ಓದುತ್ತಿದ್ದೇನೆ ಎಂಬ ಕಲ್ಪನೆ ಬರಬಾರದು. ಭಾಷಾಂತರಿತ ಕೃತಿಯೊಂದು ಈ ರೀತಿ ಓದಿಸಿಕೊಂಡರೆ ಅಂತಹ ಕೃತಿಯನ್ನು ಯಶಸ್ವಿಯಾದ ಭಾಷಾಂತರ ಎಂದು ಪರಿಗಣಿಸಬಹುದಾಗಿದೆ. ಉದ್ದಿಷ್ಟ ಭಾಷೆಯಲ್ಲಿ ಸ್ವತಂತ್ರವಾಗಿ ರಚಿತವಾದ ಕೃತಿಯಲ್ಲಿ

ಇರುವಂತೆ ಭಾಷೆ ಮತ್ತು ಅಭಿವ್ಯಕ್ತಿಯನ್ನು ಅಳವಡಿಸಿಕೊಂಡಾಗ ಇದು ಸಾಧ್ಯವಾಗುತ್ತದೆ.

ಈ ಮೇಲಿನ ತತ್ವಗಳಲ್ಲಿ ಒಂದಕ್ಕೊಂದು ಪೂರಕವಾದ ಅಂಶಗಳಿದ್ದು ಒಂದನ್ನು ಬಿಟ್ಟು ಇನ್ನೊಂದು ಕಾರ್ಯಶೀಲವಾಗುವುದಿಲ್ಲ ಹಾಗೂ ಇವು ಭಾಷಾಂತರ ಸಾರ್ವತ್ರಿಕ ತತ್ವಗಳಾಗಿ ರೂಪುಗೊಂಡಿವೆ ಎಂಬ ವಿಚಾರವನ್ನು ಪ್ರದಾನ ಗುರುದತ್ತರು ವ್ಯಕ್ತಪಡಿಸುತ್ತಾರೆ. “ಪೋಸ್ಟ್‌ಗೇಟ್ ನಿರೂಪಿಸಿರುವ ಈ ಎಲ್ಲ ತತ್ವಗಳು ಪರಸ್ಪರ ಸಾಪೇಕ್ಷವಾಗಿರುವಂಥವು; ಒಂದನ್ನು ಬಿಟ್ಟು ಇನ್ನೊಂದು ಕಾರ್ಯಶೀಲವಾಗಿರುವುದಿಲ್ಲ; ಇರಲು ಸಾಧ್ಯವಿಲ್ಲ. ಹೀಗಾಗಿ ಇವುಗಳ ನಡುವೆ ಅವಿನಾಭಾವ ಸಂಬಂಧವಿದೆ ಎಂಬುದು ಸ್ಪಷ್ಟವಾಗುತ್ತದೆ. ವಾಸ್ತವವಾಗಿ, ಇವು ಭಾಷಾಂತರ ವಿಜ್ಞಾನದ ಮೂಲಭೂತ ತತ್ವಗಳು. ಈ ತತ್ವಗಳನ್ನು ಅನ್ವಯಿಸಿಕೊಂಡು ಉತ್ತಮ ಭಾಷಾಂತರವನ್ನು ಸೃಜಿಸಬಹುದು; ಯಾವುದೇ ಭಾಷಾಂತರವನ್ನು ಈ ತತ್ವಗಳ ಒರೆಗಲ್ಲಿನಲ್ಲಿ ಉಜ್ಜಿ ನೋಡಿ, ಬೆಲೆಗಟ್ಟಬಹುದು. ಹೀಗಾಗಿ, ಇವು ದೇಶ-ಕಾಲ-ಭಾಷಾತೀತವಾದ ಸಾರ್ವತ್ರಿಕ ತತ್ವಗಳೆನಿಸಿಕೊಂಡಿವೆ. (ಪ್ರದಾನ ಗುರುದತ್ತ; ೨೦೦೭, ಪು. ೪೨).

ಅನುವಾದದ ತತ್ವಗಳನ್ನು ಅವುಗಳ ರೂಪರೇಶೆಗಳ ಬಗೆಗೆ ಅರಿವಾದ ನೇತ್ರಕ್ಕೆ ಅನುವಾದವನ್ನು ಮಾಡುವುದು ಸುಲಭಸಾಧ್ಯ ಎಂದು ತಿಳಿದರೆ ತಪ್ಪಾಗುತ್ತದೆ. ಅನುವಾದ ಮಾಡುವಾಗ ಅನುವಾದಕ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಚರ್ಚಿಸಲಾಗಿದೆ. ಅನುವಾದ ಕಲೆ ಪುಸ್ತಕದಲ್ಲಿ ಅನುವಾದದಲ್ಲಿ ಎದುರಿಸಬೇಕಾದ ಸಮಸ್ಯೆಗಳನ್ನು ಉದಾಹರಣೆ ಸಹಿತ ಒಂದೊಂದಾಗಿ ವಿವರಿಸಿದ್ದನ್ನು ಕಾಣಬಹುದಾಗಿದೆ.

೧. ಸಂವಾದಿ ಪದಗಳ ಕೊರತೆ:

ನಾವು ಬಳಸುವ ಶಬ್ದಗಳು ನಮ್ಮ ಸಂಸ್ಕೃತಿಯನ್ನು ಬಿಂಬಿಸುವವುಗಳಾಗಿರುವುದರಿಂದ ಅದು ಸಂಸ್ಕೃತಿಜನ್ಯವಾಗಿರುತ್ತವೆ. ಅವುಗಳಿಗೆ ತಮ್ಮದೇ ಆದ ವಿಶಿಷ್ಟತೆ ಇರುತ್ತದೆ ಎಂಬುದು ತಿಳಿದ ವಿಚಾರ. ನಮ್ಮಲ್ಲಿ ಹಲವಾರು ಭಾಷೆಗಳಿರುವುದರಿಂದ ಈ ಭಾಷೆಯಲ್ಲಿ ಭಿನ್ನತೆ ಇರುವುದು ಸಹಜ. ಈ ಭಿನ್ನಭಿನ್ನ ಭಾಷೆಗಳಲ್ಲಿನ ಸಂಸ್ಕೃತಿಗಳು ಕೂಡ ಭಿನ್ನವಾಗಿರುತ್ತವೆ ಎಂಬುದು ಕೂಡ ಅಷ್ಟೇ ಸಹಜ. ಒಂದು ಭಾಷೆಯಲ್ಲಿರುವ ಶಬ್ದಕ್ಕೆ ಅದೇ ಅರ್ಥವನ್ನು ಕೊಡುವ ಇನ್ನೊಂದು ಶಬ್ದ ಇಲ್ಲದೇ ಇರುವ ಸಾಧ್ಯತೆಗಳೇ ಹೆಚ್ಚು. ಇಂತಹ ಸಂದರ್ಭದಲ್ಲಿ ಅನುವಾದಕನಾದವನಿಗೆ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದಿಸುವುದು ಕಷ್ಟವಾಗುತ್ತದೆ. ಉದಾಹರಣೆಗಾಗಿ ನಮ್ಮ ಸಂಸ್ಕೃತಿಯಲ್ಲಿರುವ ಸೀಮಂತ ಕಾರ್ಯಕ್ರಮ,

ಧೋತರ ಉಡುವುದು ಈ ಮುಂತಾದವು ನಮ್ಮದಲ್ಲದ ಇನ್ನೊಂದು ಸಂಸ್ಕೃತಿಯಲ್ಲಿ ಇಲ್ಲದಿರುವಾಗ ಇಂತಹ ವಿಚಾರಗಳನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದಿಸುವುದು ಕಷ್ಟವಾಗುತ್ತದೆ. ಇನ್ನು ಕೆಲವು ಪ್ರಸಂಗಗಳಲ್ಲಿ ಮೂಲದ ಶಬ್ದ ಉದ್ದಿಷ್ಟ ಭಾಷೆಯಲ್ಲಿ ಸ್ವಲ್ಪ ಭಿನ್ನವಾದ ಅರ್ಥದಲ್ಲಿ ಬಳಕೆಯಾಗುತ್ತಿರುತ್ತದೆ. ಅಂತಹ ಸಂದರ್ಭದಲ್ಲಿ ಶಬ್ದಕೋಶದಲ್ಲಿರುವ ಅದರ ಅರ್ಥವನ್ನು ನೋಡಿ ಸಮಾನಾರ್ಥವನ್ನು ಬಳಸಿದರೂ ಅದರ ಮೂಲಾರ್ಥ ಹೊರಡುವುದಿಲ್ಲ. ಉದಾಹರಣೆಗೆ ಇಂಗ್ಲಿಷಿನ Heart ಶಬ್ದ Spanish ಭಾಷೆಯಲ್ಲಿ liver ಎನ್ನುವ ಅರ್ಥವನ್ನು ಕೊಡುತ್ತದೆಯಂತೆ. ಪದಕೋಶಗಳ ಸಹಾಯದಿಂದಲೂ ಸಮರ್ಪಕನಾದ ಅನುವಾದ ಸಾಧ್ಯವಾಗಲಾರದು. ಹೀಗಾಗಿ ಸಂವಾದಿಪದಗಳ ಕೊರತೆಯಿಂದಾಗಿ ಅನುವಾದಕನಿಗೆ ಸಮರ್ಪಕವಾದ ಅನುವಾದ ಮಾಡುವುದು ಸಾಧ್ಯವಾಗದೇ ಹೋಗಬಹುದು.

**೨. ಸಮಾನಾರ್ಥಕ ಪಡೆನುಡಿ ಹಾಗೂ ಗಾದೆಯ ಮಾತುಗಳ ಅಭಾವ:**

ಇದು ಅನುವಾದಕ ಎದುರಿಸುವ ಅತ್ಯಂತ ಕಠಿಣವಾದ ಸಮಸ್ಯೆ ಎಂಬ ಅಭಿಪ್ರಾಯವಿದೆ. ಆಯಾ ಭಾಷೆ ಮತ್ತು ಸಂಸ್ಕೃತಿಗನುಗುಣವಾಗಿ ಕೆಲವೊಂದು ವಿಶಿಷ್ಟವಾದ ಪದಪ್ರಯೋಗಗಳು, ಗಾದೆ ಮಾತುಗಳು, ಪಡೆನುಡಿಗಳು ಬಳಕೆಯಲ್ಲಿ ಇರುತ್ತವೆ. ಇವುಗಳನ್ನು ಉದ್ದಿಷ್ಟ ಭಾಷೆಯಲ್ಲಿ ಅನುವಾದಿಸುವುದು ಸಾಧ್ಯವಾಗದ ಮಾತು. ಕನ್ನಡದಲ್ಲಿ ಬಳಕೆಯಲ್ಲಿರುವ 'ಬಳೆ ಒಡೆಯಿತು', 'ಕುಂಕುಮ ಚೆಲ್ಲಿತು', 'ದೀಪ ಆರಿ ಹೋಯಿತು/ಶಾಂತವಾಯಿತು', 'ಅವನ ಬೇಳೆ ಬೇಯುವುದಿಲ್ಲ', 'ಅವನ ಮೂಗು ಮೇಲಾಯಿತು' ಮುಂತಾದ ಪ್ರಯೋಗಗಳು ಇಂಗ್ಲಿಷ್‌ಗೆ ಅನುವಾದ ಮಾಡಬೇಕಾದರೆ ಹೇಗೆ ಅನುವಾದಿಸಬೇಕು ಎಂಬ ಪ್ರಶ್ನೆ ಕಾಡುತ್ತದೆ. ಇಂತಹ ಸಂದರ್ಭಗಳಲ್ಲಿ ವಿವರಣೆಗಳನ್ನು ಉದ್ದಿಷ್ಟ ಭಾಷೆಯಲ್ಲಿ ನೀಡಿ ಆದಷ್ಟು ಅತಿ ಹತ್ತಿರದ ಅರ್ಥವನ್ನು ನೀಡಲು ಪ್ರಯತ್ನಿಸುವುದಷ್ಟೆ ಅನುವಾದಕನ ಕೆಲಸವಾಗುತ್ತದೆ. ಇಂಗ್ಲಿಷ್ ಭಾಷೆಯಲ್ಲಿಯೂ ಸಹ ಇಂತಹ ಅನೇಕ ಸಂದರ್ಭಗಳು ಬರುತ್ತವೆ. `He turned 23', `To turn the tables' ಇವುಗಳನ್ನು ಅನುವಾದಿಸುವಾಗ ಮೂಲದ ವೈಶಿಷ್ಟ್ಯತೆಗಳನ್ನು ಉಳಿಸಿಕೊಂಡು ಅನುವಾದ ಮಾಡುವುದು ಸಾಧ್ಯವಾಗಲಾರದು. ಗಾದೆಮಾತುಗಳನ್ನಂತೂ ಅನುವಾದಿಸಲು ಸಾಧ್ಯವೇ ಇಲ್ಲ. ಒಂದು ಪ್ರದೇಶದ ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಅಲ್ಲಿನ ಜನಾಂಗದ ದೈನಂದಿನ ಬದುಕಿನಲ್ಲಿ ಹಲವಾರು ವರ್ಷಗಳಿಂದ ಬಳಸಲ್ಪಡುತ್ತಿರುವ ಗಾದೆಮಾತುಗಳನ್ನು ಇನ್ನೊಂದು ಭಿನ್ನ ಭಾಷೆಯನ್ನಾಡುವ ಪರಿಸರಕ್ಕೆ ಭಾಷಾಂತರಿಸಲು ಸಾಧ್ಯವೇ ಆಗಲಾರದು. ಉದ್ದಿಷ್ಟ ಭಾಷೆಯಲ್ಲಿ ಅದೇ ಅರ್ಥವನ್ನು ಹೋಲುವ ಗಾದೆಗಳು ಬಳಕೆಯಲ್ಲಿ ಇದ್ದಲ್ಲಿ ಮಾತ್ರ ಸಂವಾದಿಯಾಗಿ ಇಂತಹ

ಗಾದೆಮಾತುಗಳನ್ನು ಬಳಸಿಕೊಳ್ಳಬಹುದಾಗಿದೆ. ಉದಾಹರಣೆಗೆ ಕನ್ನಡದಲ್ಲಿ ಬಳಕೆಯಲ್ಲಿರುವ 'ಎಮ್ಮಿಗೆ ಎರಡು ಕೋಡು'; ಹೆಮ್ಮೆಗೆ ಎಂಟು ಕೋಡು'; 'ಅಂತು ಇಂತು ಕುಂತೀ ಮಕ್ಕಳಿಗೆ ರಾಜ್ಯವಿಲ್ಲ', 'ಹಾಲಿನದು ಹಾಲಿಗೆ, ನೀರಿನದು ನೀರಿಗೆ', 'ಕೈಕೆಸರಾದರೆ ಬಾಯಿ ಮೊಸರು' ಇತ್ಯಾದಿ ಅನೇಕ ಗಾದೆಮಾತುಗಳನ್ನು ಇನ್ನೊಂದು ಭಾಷೆಗೆ ಅನುವಾದಿಸುವುದು ಸಾಧ್ಯವಾಗದ ಮಾತು.

**೩. ಸಮಾನ ಪಾರಿಭಾಷಿಕ ಪದಗಳ ಕೊರತೆ:**

ವೈಜ್ಞಾನಿಕ ಅನುವಾದ, ದರ್ಶನಶಾಸ್ತ್ರ ಮುಂತಾದವುಗಳಲ್ಲಿ ಕೆಲವೊಂದು ಸಿದ್ಧಾಂತಗಳು, ಸಂಕೇತಗಳು ಅಥವಾ ವ್ಯಕ್ತಿಗಳ ಹೆಸರುಗಳ ಮೂಲಕವಾಗಿಯೇ ಗುರುತಿಸಲ್ಪಡುವುದರಿಂದ ಇನ್ನೊಂದು ಭಾಷೆಯಲ್ಲಿ ಅಥವಾ ಅನುವಾದಿಸಬೇಕಾದ ಭಾಷೆಯಲ್ಲಿ ಇವುಗಳಿಗೆ ಸಂವಾದಿಪದಗಳು ಸಿಗದೇ ಹೋಗುವುದರಿಂದ ಅನುವಾದ ಕಷ್ಟವಾಗುತ್ತದೆ.

**೪. ವ್ಯಾಕರಣ ಭೇದಗಳು:**

ಭಾಷೆಯ ರಚನೆಯು ಭಾಷೆಯಿಂದ ಭಾಷೆಗೆ ಭಿನ್ನತೆಯನ್ನು ಹೊಂದಿರುವುದರಿಂದ ವಾಕ್ಯರಚನೆಯಲ್ಲಿಯ ಲಿಂಗ, ವಚನ, ವಿಭಕ್ತಿ ಮುಂತಾದವುಗಳ ಬಳಕೆಯಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸಾಮ್ಯತೆಯೇ ಇಲ್ಲದಿರಬಹುದು. ಇಂತಹ ವ್ಯಾಕರಣ ಸಂದರ್ಭದ ಭೇದಗಳು ಇದ್ದಾಗ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರಿಸುವುದು ಸಾಧ್ಯವಾಗಲಾರದು. ಉದಾಹರಣೆಗೆ ಹಿಂದಿ ಭಾಷೆಯಲ್ಲಿ ಎರಡೇ ಲಿಂಗಗಳು. ಆದರೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಮೂರು ಲಿಂಗಗಳನ್ನು ಕಾಣುತ್ತೇವೆ. ಎರಡೇ ಲಿಂಗಗಳಿರುವ ಭಾಷೆಯಿಂದ ಮೂರು ಲಿಂಗಗಳಿರುವ ಭಾಷೆಗೆ ಅನುವಾದ ಮಾಡುವುದು ಕಷ್ಟ. ಹಾಗೆಯೇ ವಚನ ಮತ್ತು ವಿಭಕ್ತಿಗಳ ಪ್ರಯೋಗದಲ್ಲಿಯೂ ಕೂಡ ಈ ತೆರನಾದ ಸಮಸ್ಯೆಗಳನ್ನು ಅನುವಾದಕ ಎದುರಿಸಬೇಕಾಗುತ್ತದೆ. ಮೂರು ಲಿಂಗಗಳಿರುವ ಭಾಷೆಯಿಂದ ಎರಡೇ ಲಿಂಗಗಳಿರುವ ಭಾಷೆಗೆ ಅನುವಾದಿಸುವುದು ಇನ್ನೂ ಕಷ್ಟಕರವಾದ ವಿಷಯವಾಗಿದೆ.

**೫. ಮೂಲಭಾಷೆಯ ಶ್ಲೇಷೆ:**

ಒಂದು ಭಾಷೆಯಲ್ಲಿರುವ ಶ್ಲೇಷೆಯನ್ನು ಇನ್ನೊಂದು ಭಾಷೆಗೆ ಅನುವಾದಿಸುವುದು ಸಾಧ್ಯವಾಗುವುದಿಲ್ಲ. ಒಂದೇ ಪದ್ಯದಲ್ಲಿ ಅನೇಕ ಶ್ಲೇಷೆಗಳಿದ್ದರೆ ಅದನ್ನು ಅನುವಾದಿಸುವುದು ತುಂಬಾ ಕಠಿಣ. ಹೀಗೆ ಶ್ಲೇಷೆಯನ್ನು ಅನುವಾದಿಸುವುದು ತುಂಬಾ ಕಠಿಣವಾದ ಕೆಲಸ.

ಇದು ಅನುವಾದದಲ್ಲಿ ಎದುರಿಸುವ ದೊಡ್ಡ ಸಮಸ್ಯೆಗಳಲ್ಲಿ ಒಂದು.

**೬. ಛಂದಸ್ಸು, ಅಲಂಕಾರ ಇತ್ಯಾದಿ:**

ಮೂಲಭಾಷೆಯಲ್ಲಿರುವ ಛಂದಸ್ಸು, ಅಲಂಕಾರಗಳು ಉದ್ದಿಷ್ಟ ಭಾಷೆಯಲ್ಲಿ ಸಾಮಾನ್ಯವಾಗಿ ಇರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮೂಲಭಾಷೆಯಿಂದ ಉದ್ದಿಷ್ಟ ಭಾಷೆಗೆ ಅನುವಾದಿಸುವುದು ಸಾಧ್ಯವಾಗಲಾರದು.

**೭. ಸಂಸ್ಕೃತಿ ಭಿನ್ನತೆ:**

ಸಂಸ್ಕೃತಿಯ ಅಂಶವು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಿನ್ನತೆಯನ್ನು ಹೊಂದಿರುತ್ತದೆ. ಒಂದು ಸಂಸ್ಕೃತಿಯಲ್ಲಿರುವ ಅಂಶ ಇನ್ನೊಂದು ಸಂಸ್ಕೃತಿಯಲ್ಲಿ ಲಭ್ಯವಿಲ್ಲದೇ ಹೋಗಬಹುದು. ಇಂತಹ ಸಂದರ್ಭದಲ್ಲಿ ಮೂಲಭಾಷೆಯಿಂದ ಉದ್ದಿಷ್ಟಭಾಷೆಗೆ ಅನುವಾದಿಸುವುದು ಸಾಧ್ಯವಿಲ್ಲ. ನಮ್ಮಲ್ಲಿರುವ ಹಬ್ಬಹರಿದಿನಗಳು, ಉಡುಗೆತೊಡುಗೆಗಳು, ವಿವಿಧ ಸಮಾರಂಭಗಳು ಇನ್ನೊಂದು ಸಂಸ್ಕೃತಿಯಲ್ಲಿ ಇಲ್ಲದಿರುವಾಗ ಅನುವಾದ ಮಾಡುವುದು ಸಾಧ್ಯವಾಗದು.

ಅನುವಾದದಲ್ಲಿ ಎದುರಾಗುವ ತೊಂದರೆಗಳನ್ನು ಕುರಿತು ರಾಧಾಕೃಷ್ಣನ್ ಅವರು ವ್ಯಕ್ತಪಡಿಸಿದ ಅಭಿಪ್ರಾಯ ಇದಾಗಿದೆ:

"But no translation of the Gita can bring out the dignity and grace of the original. It's malady and music of phrase are difficult to recapture in another medium. The translator's anxiety is to render the thought but he cannot convey fully the spirit. He cannot evoke in the readers the mood in which the thought was born and induce in him, the ecstasy of the seer and the vision he beholds"[೧]

ರಾಧಾಕೃಷ್ಣನ್ ಅವರ ಈ ಮಾತುಗಳು ಭಾಷಾಂತರದಲ್ಲಿ ಮೂಲದ ಸೊಬಗನ್ನು ಲಯವನ್ನು ಮೂಲದಲ್ಲಿರುವ ಚೈತನ್ಯವನ್ನು ತರಲು ಸಾಧ್ಯವಾಗಲಾರದ ಭಾಷಾಂತರದ ಮಿತಿಯನ್ನು ಸ್ಪಷ್ಟಪಡಿಸುತ್ತವೆ. ಈ ತಾತ್ವಿಕ ಚರ್ಚೆಯ ಹಿನ್ನೆಲೆಯೊಂದಿಗೆ ಇಂಗ್ಲಿಷ್

---

೧. ಡಾ. ರಾಧಾಕೃಷ್ಣನ್‌ರವರು ಭಗವದ್ಗೀತೆಯ ಅನುವಾದವನ್ನು ಮಾಡುವ ಸಂದರ್ಭದಲ್ಲಿ ಈ ರೀತಿಯಾಗಿ ಅಭಿಪ್ರಾಯ ಪಟ್ಟಿರುವುದನ್ನು ಜೆ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿ ಅವರು 'ಅನುವಾದ ಕಲೆ' ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಭಾಷೆಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಯನ್ನು ವಿವೇಚಿಸಬೇಕಾದ ಅಗತ್ಯವಿದೆ.

# ೨. ಕನ್ನಡ ಮತ್ತು ಇಂಗ್ಲಿಷಗಳೊಳಗಿನ ಭಾಷಾಂತರ ಪ್ರಕ್ರಿಯೆ

ಕನ್ನಡ ಮತ್ತು ಇಂಗ್ಲಿಷ ಭಾಷೆಗಳ ನಡುವಿನ ಅನುವಾದಕಾರ್ಯ ನಿಜಕ್ಕೂ ಕಷ್ಟಕರವಾದದ್ದು. ಕನ್ನಡಭಾಷೆ ದ್ರಾವಿಡ ಭಾಷೆಗಳಲ್ಲಿ ಒಂದಾಗಿದ್ದು ಇಂಗ್ಲಿಷಗಿಂತ ಭಿನ್ನವಾದ ಕುಟುಂಬಕ್ಕೆ ಸೇರಿದ ಭಾಷೆ ಇದಾಗಿದೆ. ಈ ಎರಡು ಭಾಷೆಗಳಲ್ಲಿ ವಾಕ್ಯರಚನೆ, ವ್ಯಾಕರಣದ ವಿಚಾರಗಳನ್ನು ತುಲನೆ ಮಾಡಿದ್ದಲ್ಲಿ ಈ ಪರಸ್ಪರ ಭಿನ್ನತೆಯನ್ನೇ ಕಾಣುತ್ತೇವೆ. ಹೀಗೆ ಅನೇಕ ಭಿನ್ನತೆಗಳನ್ನು ಹೊಂದಿದ್ದೂ ಕೂಡ ಇಂಗ್ಲಿಷ ಭಾಷೆಯಿಂದ ಕನ್ನಡಕ್ಕೆ ಅನೇಕ ಕೃತಿಗಳು ಭಾಷಾಂತರಗೊಂಡಿರುವುದು ಸ್ವಾಗತಾರ್ಹವಾದ ವಿಚಾರವೇ ಆಗಿದೆ. ಪಾಶ್ಚಾತ್ಯ ಸಂಸ್ಕೃತಿಗೂ ನಮ್ಮ ಭಾರತೀಯ ಸಂಸ್ಕೃತಿಗೂ ಸಾಕಷ್ಟು ವ್ಯತ್ಯಾಸಗಳನ್ನು ಹೊಂದಿರುವುದನ್ನು ಕಾಣುತ್ತೇವೆ. ಭಾರತೀಯ ಸಂಸ್ಕೃತಿಯಲ್ಲಿಯ ರೀತಿನೀತಿಗಳು, ಶಿಷ್ಟಾಚಾರಗಳು ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಇಲ್ಲ. ಪಾಶ್ಯಾತ್ಯ ಸಂಸ್ಕೃತಿಯಲ್ಲಿ ಇರುವ ರೀತಿನೀತಿಗಳು, ಶಿಷ್ಟಾಚಾರಗಳು, ಪದ್ಧತಿಗಳು ಭಾರತೀಯ ಸಂಸ್ಕೃತಿಯಲ್ಲಿ ಇಲ್ಲ. ಹೀಗಾಗಿ ಭಾಷೆಗಳು ಭಿನ್ನ ಭಿನ್ನವಾಗಿರುವುದರಿಂದ ಸಂಸ್ಕೃತಿಯೂ ಭಿನ್ನವಾಗಿದ್ದು ಈ ಭಿನ್ನತೆಯನ್ನು ನೀಗಿಸಿಕೊಂಡು ಭಾಷಾಂತರವನ್ನು ಮಾಡುವುದು ಸುಲಭದ ಕೆಲಸವಲ್ಲ. ಕನ್ನಡ ಮತ್ತು ಇಂಗ್ಲಿಷ್ ಸಂಸ್ಕೃತಿಯ ಭಿನ್ನತೆಯ ಬಗೆಗಿನ ಕೆಲವೊಂದು ಉದಾಹರಣೆಗಳನ್ನು ನಾವಿಲ್ಲಿ ಗಮನಿಸಬಹುದಾಗಿದೆ. ಜೆ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿಯವರು ಈ ಕುರಿತು ದೀರ್ಘವಾದ ನಿಶ್ಲೇಷಣೆಯನ್ನು ಮಾಡಿದ್ದು ಕೆಲವೊಂದು ಉದಾಹರಣೆಗಳನ್ನು ಇಲ್ಲಿ ಚರ್ಚಿಸಬಹುದು.

ಇಂಗ್ಲಿಷ್‌ನಲ್ಲಿ ಅತಿ ಸಂಭ್ರಮದ ಸ್ವಾಗತ ನೀಡಬೇಕಾದರೆ `Warm reception', `Warm welcome' ಎನ್ನುತ್ತಾರೆ. ಇದರ ಶಬ್ದಾರ್ಥ 'ಬಿಸಿ ಸ್ವಾಗತ' ಎಂದಾಗುತ್ತದೆ. ಆದರೆ ಕನ್ನಡದಲ್ಲಿ 'ಭವ್ಯ ಸ್ವಾಗತ', 'ಹಾರ್ದಿಕ ಸ್ವಾಗತ' ಮುಂತಾದ ಪದಗಳನ್ನು ಸಂವಾದಿಯಾಗಿ ಬಳಸುತ್ತೇವೆ. ಪಾಶ್ಚಾತ್ಯ ದೇಶಗಳಲ್ಲಿ ಶೀತಪ್ರದೇಶವಾಗಿರುವುದರಿಂದ ಅಲ್ಲಿ ಬೆಚ್ಚಗಾದರೆ ದೇಹಕ್ಕೆ ಮನಸ್ಸಿಗೆ ಆಹ್ಲಾದವಾಗುತ್ತದೆ. ಅದಕ್ಕಾಗಿ ಅಲ್ಲಿ `Warm reception',ಅಥವಾ `Warm welcome' ಅನ್ನುತ್ತಾರೆ. ನಮ್ಮಲ್ಲಿ ಉಷ್ಣಪ್ರದೇಶವಾಗಿರುವುದರಿಂದ ತಂಪು ಆಪ್ಯಾಯಮಾನವಾಗಿರುವುದರಿಂದ Warm ಇಲ್ಲಿ

ಹಾರ್ದಿಕ ಸ್ವಾಗತವಾಗಿ ಭಾಷಾಂತರಿಸಲ್ಪಡುತ್ತದೆ. ಪಾಶ್ಚಾತ್ಯರಲ್ಲಿ ಅತಿಥಿ ಮನೆಗೆ ಬಂದರೆ `Take your seat' ಎನ್ನುತ್ತೇವೆ. ನಮ್ಮಲ್ಲಿ 'ಕುಳಿತುಕೊಳ್ಳಿರಿ' ಎಂದು ಹೇಳುತ್ತೇವೆ. ಆ ನಂತರದಲ್ಲಿ ಆತಿಥ್ಯದ ಮುಂದುವರಿದ ಭಾಗದಲ್ಲಿ `Do you like to have coffee?' ಇದನ್ನು ಕನ್ನಡಕ್ಕೆ ಶಬ್ದಶಃ ಅನುವಾದಿಸಿದರೆ 'ನೀವು ಕಾಫಿ ತೆಗೆದುಕೊಳ್ಳಬಯಸುತ್ತೀರಾ?' ಎಂಬ ಅರ್ಥ ಬರುತ್ತದೆ. ಆದರೆ ಕನ್ನಡಕ್ಕೆ ಇದರ ನಿಜವಾದ ಅನುವಾದ 'ನೀವು ಕಾಫಿ ತೆಗೆದುಕೊಳ್ಳಿರಿ' ಎಂಬುದು. ಒಂದು ವ್ಯಕ್ತಿ ಹೊರಟುನಿಂತಾಗ ಪಾಶ್ಚಾತ್ಯರಲ್ಲಿ `See you' ಎಂಬ ವಾಡಿಕೆ ಇದೆ. ನಮ್ಮಲ್ಲಿ 'ಬರ್ರಿ ಅಥವಾ ಹೋಗಿಬರ್ರಿ' ಅನ್ನುತ್ತೇವೆ. ಹೀಗೆ ಎರಡು ವಿಭಿನ್ನ ಸಂಸ್ಕೃತಿಗಳ ನಡುವಿನ ಭಾಷಾಂತರದ ಪ್ರಶ್ನೆ ಬಂದಾಗ ಶಬ್ದಶಃ ಅನುವಾದ ಮಾಡಿದಲ್ಲಿ ಅದು ಅರ್ಥವನ್ನು ಕಳೆದುಕೊಳ್ಳುತ್ತದೆ ಮತ್ತು ಉದ್ದೇಶಿತ ಭಾವನೆಯನ್ನು ವ್ಯಕ್ತಪಡಿಸಲು ಅಸಾಧ್ಯವಾಗುತ್ತದೆ.

ಇನ್ನು ಭಾಷೆಯ ವಿಚಾರದಲ್ಲಿಯೂ ಕೂಡ ಒಂದೊಂದು ಭಾಷೆಗೂ ಒಂದೊಂದು ರಚನೆ ಇರುವಂತದ್ದು ಸಾಮಾನ್ಯ. ಈ ಭಾಷೆಗಳ ರಚನಾಂಶಗಳಲ್ಲಿ ಸಮಾನಾಂಶಗಳು ಹೆಚ್ಚು ಇದ್ದಷ್ಟು ಅನುವಾದದಲ್ಲಿ ತೊಂದರೆಗಳು ಕಡಿಮೆ. ಸಂಸ್ಕೃತಿ–ಸಂಸ್ಕೃತಿಗಳಲ್ಲಿ ಭಿನ್ನತೆ ಇರುವುದರಿಂದ ನಮ್ಮಲ್ಲಿ ಲಭ್ಯವಿಲ್ಲದ ಶಬ್ದಗಳಿಗಾಗಿ ಮೂಲಭಾಷೆಯ ಶಬ್ದಗಳನ್ನು ಇದ್ದಕ್ಕಿದ್ದ ಹಾಗೆ ಸ್ವೀಕರಿಸಬೇಕಾಗುತ್ತದೆ. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ನಡುವೆ ಸಂಸ್ಕೃತಿಯ ಭಿನ್ನತೆ ಇರುವುದರಿಂದ ಈ ಎರಡೂ ಭಾಷೆಗಳ ಮಧ್ಯದಲ್ಲಿ ನಡೆಯುವ ಭಾಷಾಂತರದ ಸಂದರ್ಭಗಳನ್ನು ಕೆಲವೊಂದು ಉದಾಹರಣೆಗಳ ಮೂಲಕ ಪರಿಶೀಲಿಸಬಹುದಾಗಿದೆ.

ಇಂಗ್ಲಿಷ್‌ನಲ್ಲಿ : He is ready to bowl.

ಕನ್ನಡದಲ್ಲಿ : 'ಅವನು ಬೌಲ ಮಾಡಲು ಸಿದ್ಧನಾಗಿದ್ದಾನೆ.

ಇಂಗ್ಲಿಷ್‌ನಲ್ಲಿ : He was cought out

ಕನ್ನಡದಲ್ಲಿ : 'ಅವನು ಕ್ಯಾಚ್ ಮೂಲಕ ಔಟ್ ಆದನು'

ಇಂಗ್ಲಿಷ್‌ನಲ್ಲಿ : Stumps were removed.

ಕನ್ನಡದಲ್ಲಿ : 'ಸ್ಟಂಪುಗಳು ಬುಡಮೇಲಾದವು'

ಈ ಮೇಲಿನವುಗಳಲ್ಲಿ ಇಂಗ್ಲಿಷಿನ `bowl' ಶಬ್ದಕ್ಕೆ ಕನ್ನಡದಲ್ಲಿ 'ಬೌಲ್' ಎಂದೂ, ಇಂಗ್ಲಿಷಿನ `out' ಎಂಬ ಶಬ್ದಕ್ಕೆ ಕನ್ನಡದಲ್ಲಿ 'ಔಟ್' ಎಂದು ಹಾಗೂ `stumps' ಎಂಬ

ಶಬ್ದಕ್ಕೆ 'ಸ್ತಂಪುಗಳು' ಎಂದು ಅನುವಾದಿಸಿಕೊಳ್ಳಬೇಕಾಗುತ್ತದೆ. ಈ ಶಬ್ದಗಳಿಗೆ ಕನ್ನಡದಲ್ಲಿ ಸಂವಾದಿ ಶಬ್ದಗಳೇ ಸಿಗಲಾರವು.

ವ್ಯಾಕರಣದ ರಚನೆಯಲ್ಲಿಯೂ ಕೂಡ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳನ್ನು ಕಾಣುತ್ತೇವೆ. ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಹಾಗೂ ನಪುಂಸಕಲಿಂಗ –ಹೀಗೆ ಮೂರು ಲಿಂಗಗಳು ಇವೆ. ಇಂಗ್ಲಿಷ್‌ನಲ್ಲಿಯೂ ಕೂಡ ಮೂರು ಲಿಂಗಗಳನ್ನು ಕಾಣುತ್ತೇವೆ. `Masculine, feminine ಹಾಗೂ neuter –ಈ ಮೂರು ಲಿಂಗಗಳನ್ನು ಕಾಣುತ್ತೇವಾದರೂ ಕನ್ನಡದ ಲಿಂಗಗಳಿಗೂ ಇಂಗ್ಲಿಷ್‌ನ ಲಿಂಗಗಳಿಗೂ ಅನ್ವಯಿಸುವ ಶಬ್ದಗಳು ಮಾತ್ರ ಭಿನ್ನ ಭಿನ್ನ ವಾಗಿರುವುದನ್ನು ಕಾಣುತ್ತೇವೆ. ಇಂಗ್ಲಿಷ್‌ನಲ್ಲಿ Moon ಅಥವಾ Country ಎಂದರೆ ಸ್ತ್ರೀಲಿಂಗ ಪದಗಳು ಇವೆರಡೂ ಕನ್ನಡದಲ್ಲಿ ನಪುಂಸಕಲಿಂಗ ಪದಗಳು. ಇವುಗಳನ್ನು ಕನ್ನಡದಲ್ಲಿ ಅನುವಾದಿಸುವಾಗ ಸ್ತ್ರೀಲಿಂಗಪದ ಶಬ್ದಗಳಿಗೆ ಅನುವಾದಿಸುವುದು ಸಾಧ್ಯವಾಗುವುದಿಲ್ಲ.

ಇಂಗ್ಲಿಷ್‌ನಲ್ಲಿ past, present ಮತ್ತು future ಎಂಬ ಮೂರು ಕಾಲಗಳನ್ನು (Tense) ಕಾಣುತ್ತೇವೆ. ಕನ್ನಡದಲ್ಲಿಯೂ ಕೂಡ ಭೂತಕಾಲ, ವರ್ತಮಾನಕಾಲ ಹಾಗೂ ಭವಿಷ್ಯತ್‌ಕಾಲ –ಈ ಮೂರು ಕಾಲಗಳನ್ನು ಕಾಣುತ್ತೇವೆ. ಆದರೆ ಸಹಜವಾದ ಮಾತಿನಲ್ಲಿ ಕನ್ನಡದಲ್ಲಿ ಭೂತ, ಅಭೂತಕಾಲ ಎರಡೇ ಕಾಲಗಳು. ಅದಕ್ಕಾಗಿ ಇಂಗ್ಲಿಷಿನ ವರ್ತಮಾನ, ಭವಿಷ್ಯತ್‌ಕಾಲ ಎರಡೂ ನಮ್ಮಲ್ಲಿ ವರ್ತಮಾನವಾಗಿಯೇ ಅನುವಾದವಾಗುತ್ತದೆ. ಉದಾಹರಣೆಗೆ ಇಂಗ್ಲಿಷ್‌ನಲ್ಲಿ `He will complete this work after two years' ಕನ್ನಡದಲ್ಲಿ 'ಅವನು ಈ ಕೆಲಸವನ್ನು ಎರಡು ವರ್ಷಗಳನಂತರ ಮುಗಿಸುತ್ತಾನೆ' ಎಂದಾಗುತ್ತದೆ. ಇಂಗ್ಲಿಷಿನ `They will complete that project after 100 years' . ಕನ್ನಡದಲ್ಲಿ 'ಅವರು ಆ ಕೆಲಸವನ್ನು ೧೦೦ ವರ್ಷಗಳನಂತರ ಮುಗಿಸುತ್ತಾರೆ' ಎಂದು ಅರ್ಥೈಸಬೇಕಾಗುತ್ತದೆ. ಕೆಲವು ಪದಗಳು ಅರ್ಥ ಸಂದರ್ಭಜನ್ಯವಾಗಿರುವುದರಿಂದ ಸಂದರ್ಭಕ್ಕನುಸರಿಸಿ ಭಿನ್ನ ಅರ್ಥದಲ್ಲಿ ಅನುವಾದಗೊಳ್ಳುವುದನ್ನು ಕಾಣುತ್ತೇವೆ.

ಇಂಗ್ಲಿಷ್‌ನ `Yes' ಎಂಬ ಶಬ್ದಕ್ಕೆ ಶಬ್ದಕೋಶದಲ್ಲಿ ಸಿಗುವ ಅರ್ಥ 'ಹೌದು' ಎಂದು. ಆದರೆ ಈ `Yes' ಎಂಬ ಶಬ್ದ 'ಹೌದು' ಎನ್ನುವ ಅರ್ಥವನ್ನು ಕೊಡುವುದರ ಜೊತೆಗೆ ಇನ್ನೂ ಅನೇಕ ಸಂದರ್ಭಗಳು, ಭಿನ್ನವಾದ ಅರ್ಥವನ್ನು ಕೊಡುವಂತೆಯೂ ಬಳಸಲಾಗುತ್ತದೆ.

You have to dance

`Yes' ಎಂಬ ಉತ್ತರದಲ್ಲಿ 'ಆಗಲಿ' ಎಂದು,

Is it yours?

`Yes' ಇಲ್ಲಿ `yes' ಎಂದರೆ ಹೌದು.

Is it alright for you?

ಇಲ್ಲಿ `Yes' ಎಂಬ 'ಪರವಾಗಿಲ್ಲ' ಎಂದು.

'Can you do it?'

`Yes' ಎಂದರೆ ಇಲ್ಲಿ 'ಮಾಡಬಹುದು' ಎಂಬ ಅರ್ಥ ಬರುವ ರೀತಿಯಲ್ಲಿ ಬಳಸಲಾಗಿದೆ. ಹೀಗೆ ವಿವಿಧ ಸಂದರ್ಭಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಅರ್ಥದಲ್ಲಿ `Yes' ಎಂಬ ಶಬ್ದದ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ. ಇದೇ ರೀತಿ ಇಂಗ್ಲಿಷನಲ್ಲಿ `No' ಎಂಬ ಶಬ್ದದ ಬಳಕೆಯು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಇರುವುದನ್ನು ಕಾಣಬಹುದು. ಇನ್ನು ಕೆಲವು ವಿಶಿಷ್ಟ ಪದಗಳನ್ನು ಉದ್ದಿಷ್ಟ ಭಾಷೆಗೆ ಅನುವಾದಿಸುವುದು ಕಷ್ಟಸಾಧ್ಯವಾಗುತ್ತದೆ. ಉದಾ: Baby sit, typewrite ಈ ಮುಂತಾದ ಶಬ್ದಗಳನ್ನು ಅನುವಾದಿಸುವುದು ಹೇಗೆ ಎನ್ನುವ ಸಮಸ್ಯೆ ಕಾಡುತ್ತದೆ.

ಸಂಬಂಧವಾಚಕ ಶಬ್ದಗಳಲ್ಲಿಯೂ ಕನ್ನಡ ಮತ್ತು ಇಂಗ್ಲಿಷ ಭಾಷೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳನ್ನು ಕಾಣುತ್ತೇವೆ. ಇಂಗ್ಲಿಷನಲ್ಲಿ 'Mothers' 'sister' ಹಾಗೂ 'Father's sister'. ಇವರಿಬ್ಬರೂ 'Aunt'ಗಳಾಗುತ್ತಾರೆ. ಆದರೆ ಕನ್ನಡದಲ್ಲಿ 'Mother's sister'ನ್ನು ಚಿಕ್ಕಮ್ಮ ಎಂದೂ, Father's sister'ನ್ನು 'ಅತ್ತೆ' ಎಂದೂ ಕರೆಯುತ್ತೇವೆ. ಇಂಗ್ಲಿಷಲ್ಲಿ 'ಸಹೋದರ' ಎಂಬ ಶಬ್ದಕ್ಕೆ 'Brother ' ಎಂದೂ, 'ಸಹೋದರಿ' ಎಂಬ ಶಬ್ದಕ್ಕೆ 'Sister' ಎಂಬ ಶಬ್ದಗಳು ಮಾತ್ರ ಲಭ್ಯವಿದ್ದು ಅಣ್ಣ ಅಥವಾ ಅಮ್ಮ, ಅಕ್ಕ ಅಥವಾ ತಂಗಿ ಎಂದು ಹೇಳುವಾಗ 'Elder brother' ಅಥವಾ 'Younger sister' ಎಂದೂ, ಅಕ್ಕ ಎಂದು ಹೇಳುವಾಗ 'Elder sister' ಎಂದೂ, ತಂಗಿ ಎಂದು ಹೇಳುವಾಗ 'Younger sister' ಎಂದೂ ಹೇಳಬೇಕಾಗುತ್ತದೆ. ವಾಕ್ಯರಚನೆಯಲ್ಲಿಯೂ ಕೂಡ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಕಾಣುತ್ತೇವೆ. ವಾಕ್ಯದಲ್ಲಿನ ಶಬ್ದ ಜೋಡಣೆಯ ಕ್ರಮ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ವ್ಯತ್ಯಾಸವನ್ನು ಹೊಂದಿರುತ್ತದೆ.

ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿಯೂ ಕೂಡ ಈ ವ್ಯತ್ಯಾಸಗಳನ್ನು ಕಾಣುತ್ತೇವೆ. ಉದಾಹರಣೆಗಾಗಿ ಇಂಗ್ಲಿಷ್‌ನಲ್ಲಿ - 'Ox fell in the well', ಕನ್ನಡದಲ್ಲಿ – 'ಎತ್ತು ಬಿತ್ತು ಒಳಗೆ ಬಾವಿ' ಎಂದು ಅನುವಾದವಾಗುತ್ತದೆ. ಇದು ಶಬ್ದಶಃ ಸರಿಯಾದರೂ ಕನ್ನಡದ ಒಂದು ಸಮರ್ಪಕವಾದ ಅರ್ಥವನ್ನು ಕೊಡುವ ವಾಕ್ಯವೆನಿಸಿಕೊಳ್ಳುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಇಂಗ್ಲಿಷಿನ ವಾಕ್ಯರಚನಾ ಕ್ರಮ. ಇಂಗ್ಲಿಷ್‌ನಲ್ಲಿ ವಾಕ್ಯದಲ್ಲಿ ಮೊದಲು ಕರ್ತೃ ಅನಂತರ ಕರ್ಮ ಹಾಗೂ ಕೊನೆಯಲ್ಲಿ ಕ್ರಿಯಾಪದಗಳನ್ನು ಬಳಸಿ ವಾಕ್ಯರಚನೆ ಮಾಡುವ ಕ್ರಮವನ್ನು ಕಾಣುತ್ತೇವೆ. ಉದಾ: ಇಂಗ್ಲಿಷ್‌ನಲ್ಲಿ Rama Killed Ravana ಅಂದರೆ ಕನ್ನಡದಲ್ಲಿ 'ರಾಮನು ಕೊಂದನು ರಾವಣನನ್ನು' ಎಂದು ಶಬ್ದಶಃ ಅನುವಾದವಾಗುತ್ತದೆ. ಇದನ್ನು ಕನ್ನಡದ ವಾಕ್ಯರಚನೆಗೆ ಹೊಂದಿಸಿ ಹೇಳುವುದಾದರೆ 'ರಾಮನು ರಾವಣನನ್ನು ಕೊಂದನು' ಎಂದು ಅನುವಾದಿಸಬೇಕಾಗುತ್ತದೆ.

ನಾಣ್ನುಡಿಗಳ ಅನುವಾದವಂತೂ ತೀರ ಕಷ್ಟಕರವಾದದ್ದು. ಆದರೆ ಒಂದು ಭಾಷೆಯಲ್ಲಿ ಪ್ರಚಲಿತವಿರುವ ಗಾದೆಮಾತುಗಳಿಗೆ/ನಾಣ್ನುಡಿಗಳಿಗೆ ಸಂವಾದಿಯಾಗಿ ಉದ್ದಿಷ್ಟ ಭಾಷೆಯಲ್ಲಿ ಅದೇ ಅರ್ಥವನ್ನು ಕೊಡುವ ನಾಣ್ನುಡಿಗಳು/ಗಾದೆಮಾತುಗಳು ಪ್ರಚಲಿತವಿದ್ದಲ್ಲಿ ಮಾತ್ರ ಅನುವಾದ ಸಾಧ್ಯವಾಗುತ್ತದೆ. ಇಂತಹ ಸಮಾನವಾದ ಅರ್ಥವನ್ನು ಕೊಡುವ ಗಾದೆಮಾತುಗಳನ್ನು ಕೆಲವೊಂದನ್ನು ಉದಾಹರಣಾರ್ಥವಾಗಿ ಇಲ್ಲಿ ನೀಡಲಾಗಿದೆ. ಜೋರಾಗಿ ಮಳೆ ಬೀಳುವುದಕ್ಕೆ ಇಂಗ್ಲಿಷನಲ್ಲಿ `It rains cats and dogs' ಅನ್ನುವುದು ವಾಡಿಕೆ. ಇದನ್ನು ಕನ್ನಡದಲ್ಲಿ ನೇರವಾಗಿ ಅನುವಾದಿಸಿದಾಗ 'ನಾಯಿ ಬೆಕ್ಕುಗಳ ಮಳೆಯಾಗುತ್ತದೆ' ಎಂದು ಅಪಾರ್ಥವಾಗಿಬಿಡುತ್ತದೆ. ಕನ್ನಡದಲ್ಲಿ ಇದಕ್ಕೆ ಸಂವಾದಿಯಾಗಿ 'ಧಾರಾಕಾರ ಮಳೆ ಸುರಿಯುತ್ತದೆ ಅಥವಾ 'ಮುಸಲಧಾರೆಯಾಗಿ ಮಳೆ ಸುರಿಯುತ್ತದೆ' ಎಂದು ಅನುವಾದಿಸಬೇಕಾಗುತ್ತದೆ. ಇದೇ ರೀತಿಯಲ್ಲಿ `Cry in Wilderness' ಎಂದರೆ 'ಅರಣ್ಯರೋದನ' Herculean Task ಎಂದರೆ 'ಭಗೀರಥಪ್ರಯತ್ನ' ಎಂದು, 'Lions share' ಎಂದರೆ ಅಗ್ರಪಾಲು ಅಥವಾ ಸಿಂಹಪಾಲು ಎಂದು, 'To make both ends meet' -'ಹಾಸಿಗೆ ಇದ್ದಷ್ಟು ಕಾಲುಚಾಚು', `To more heaven and earth' -'ಅಟ್ಟ ಹಾರಿ ಬೆಟ್ಟ ಏರುವ ಪ್ರಯತ್ನ', `Wolf in sheep's clothing' -'ಗೋಮುಖ ವ್ಯಾಘ್ರ' – ಈ ರೀತಿಯಲ್ಲಿ ಸಂವಾದಿಯಾದ ನಾಣ್ನುಡಿಗಳು ಉದ್ದಿಷ್ಟ ಭಾಷೆಯಲ್ಲಿ ದೊರಕಿದಾಗ ಮೂಲದ ಅರ್ಥವನ್ನೇ ಅವು ಧ್ವನಿಸುವುದರಿಂದ ಅನುವಾದ ಮಾಡುವುದು ಸುಲಭವಾಗುತ್ತದೆ. ಆದರೆ ಸಮಾನಾರ್ಥಕವಾದ ಸಂವಾದಿ ನಾಣ್ನುಡಿಗಳು ಸಿಗದಿದ್ದಾಗ ಶಬ್ದಶಃ ಅನುವಾದ

ಮಾಡುವುದು ಅನಿವಾರ್ಯವಾಗುತ್ತದೆ. ಈ ಕೆಳಗಿನ ಉದಾಹರಣೆಗಳನ್ನು ಗಮನಿಸಬಹುದು.

| ಇಂಗ್ಲಿಷಿನಲ್ಲಿ | ಕನ್ನಡಕ್ಕೆ ಅನುವಾದಿಸಿರುವುದು |
|---|---|
| To add fuel to fire | -'ಬೆಂಕಿಗೆ ತುಪ್ಪಸುರಿ' |
| To blow one's own trumpet | -'ಸ್ವಂತ ಬಡಾಯಿಕೊಚ್ಚಿಕೊಳ್ಳು' |
| To bring to light | -'ಬೆಳಕಿಗೆ ತರು' |
| Crocodile tears | -'ಮೊಸಳೆ ಕಣ್ಣೀರು' |
| Bird's eye view | -'ವಿಹಂಗಮನೋಟ' |
| Greek and latin | -'ಏನೂ ತಿಳಿಯದ್ದು' |

ಈ ರೀತಿಯಾಗಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳು ಒಂದಕ್ಕೊಂದು ಭಿನ್ನತೆಯನ್ನು ಹೊಂದಿರುವಾಗ ಅನುವಾದದ ಸಾಧ್ಯತೆಗಳನ್ನು ಭಾಷಾರಚನೆಯ ಸಂದರ್ಭದಲ್ಲಿ, ಆಯಾ ಭಾಷೆಗಳ ವ್ಯಾಕರಣರಚನೆ, ಪ್ರಚಲಿತವಿದ್ದ ನಾಣ್ನುಡಿಗಳ ಬಳಕೆಯಲ್ಲಿನ ವಿಚಾರವನ್ನು ಗಮನದಲ್ಲಿಟ್ಟುಕೊಂಡು ಅತ್ಯಂತ ಪರಿಶ್ರಮದಿಂದ ಅನುವಾದಕ್ಕೆ ತೊಡಗಿಕೊಳ್ಳಬೇಕಾಗುತ್ತದೆ ಎಂಬುದನ್ನು ಗಮನಿಸಬಹುದಾಗಿದೆ.

ಇನ್ನು ಅನುವಾದದ ಇತಿಹಾಸದ ಬಗೆಗೆ ವಿವೇಚನೆ ಮಾಡಿದಾಗ ಮೂಲಗ್ರಂಥಗಳು ಹುಟ್ಟಿದಾಗಿನಿಂದಲೇ ಅನುವಾದವೂ ಆರಂಭವಾಯಿತು ಎಂಬ ಅಭಿಪ್ರಾಯವಿದೆ. ಅನುವಾದ ಪರಂಪರೆಯ ಕುರಿತಾದ ಆಲೋಚನೆ ಮಾಡಿದಾಗ ಮಾನವ ಸಂಸ್ಕೃತಿಯ ವಿಭಿನ್ನ ಅಭಿವ್ಯಕ್ತಿಗಳನ್ನು ಶಾಸ್ತ್ರೀಯವಾಗಿ, ತುಲನಾತ್ಮಕವಾಗಿ ಅಭ್ಯಾಸಮಾಡಲು ಹೊರಟವರಲ್ಲಿ ಜರ್ಮನ್ ವಿದ್ವಾಂಸರೇ ಮೊದಲಿಗರು ಎಂಬುದು ತಿಳಿದುಬರುತ್ತದೆ. ಜರ್ಮನ್ ವಿದ್ವಾಂಸರು ಇಂದಿಗೆ ಸುಮಾರು ಒಂದು ಶತಮಾನಕ್ಕೂ ಮೊದಲು ಭಾರತೀಯ ಪುರಾತನ ಗ್ರಂಥಗಳ ಪರಿಶೀಲನೆಗೆ ಪ್ರಾರಂಭಿಸಿದರು ಎಂದು ಕಂಡುಬರುತ್ತದೆ. ಅವರು ತಮ್ಮ ಪೂರ್ವಸಂಸ್ಕೃತಿಯ ನಿಧಿಗಳಾದ ಗ್ರೀಕ ಮತ್ತು ರೋಮನ್ ಸಾಹಿತ್ಯ, ತತ್ವಜ್ಞಾನ, ಇತಿಹಾಸಾದಿಗಳನ್ನು ಪರಿಶೀಲಿಸಿದ ಅನಂತರದಲ್ಲಿ ಭಾರತೀಯ ಪುರಾತನ ಗ್ರಂಥಗಳ ಪರಿಶೀಲನೆಗೆ ಪ್ರಾರಂಭಿಸಿ ಅನುವಾದದತ್ತ ಕಾರ್ಯಪ್ರವೃತ್ತರಾದರು. ಸನ್. ೧೮೨೩ರಷ್ಟು ಪೂರ್ವದಲ್ಲಿಯೇ ಜರ್ಮನ್ ವಿದ್ವಾಂಸನಾದ ಶ್ಲೆಗಲ್ (Schlegel) ಮಹಾಭಾರತವನ್ನು ಲ್ಯಾಟಿನ್ ಭಾಷೆಯಲ್ಲಿ ಅನುವಾದ ಮಾಡಿದನು. ಮಹಾಭಾರತದ ವಿಷಯವಾಗಿ

ಪ್ರಾರಂಭವಾದ ಜರ್ಮನರ ಕುತೂಹಲವು ಮುಂದೆ ಅದು ಇಂಗ್ಲಿಷ್, ಫ್ರೆಂಚ್, ರಶಿಯನ್ ಭಾಷೆಗಳಲ್ಲಿಯೂ ಭಾಷಾಂತರಗೊಳ್ಳಲು ಕಾರಣವಾಯಿತು. ಹೀಗೆ ಭಾರತದಲ್ಲಿ ಅನುವಾದದ ಪರಂಪರೆ ಆರಂಭವಾಯಿತು. ಕರ್ನಾಟಕದಲ್ಲಿ ಅನುವಾದ ಪರಂಪರೆ ಆರಂಭವಾದದ್ದು ಕನ್ನಡ ಸಾಹಿತ್ಯ ಕಾರ್ಯ ಆರಂಭವಾದ ಅಂದಿನಿಂದಲೇ ಎಂಬುದು ಅತ್ಯಂತ ಕುತೂಹಲಕಾರಿಯಾದ ಸಂಗತಿಯಾಗಿದೆ. ನಮ್ಮ ಹಿರಿಯರು ಅನುವಾದದ ಮಹತ್ವವನ್ನು ಅರಿತುಕೊಂಡದ್ದರಿಂದಲೇ ಇದು ಸಾಧ್ಯವಾಯಿತು ಎನ್ನಬಹುದು. ಹಳಗನ್ನಡ ಕಾಲದ ಕವಿಗಳೂ ಸಹ ವ್ಯಾಸ, ವಾಲ್ಮೀಕಿಯರನ್ನು ಅಲ್ಲಲ್ಲಿ ಅನುವಾದಿಸಿ ತಮ್ಮ ಸೃಜನ ಸಾಹಿತ್ಯದಲ್ಲಿ ಮತ್ತು ಸ್ವತಂತ್ರ ಕೃತಿಗಳಲ್ಲಿ ಅನುವಾದಕಲೆಯನ್ನು ಅಳವಡಿಸಿದರು. ಶಿವಕೋಟಾಚಾರ್ಯರು, ಪಂಪ, ಪೊನ್ನ, ರನ್ನ, ಚಾಮುಂಡರಾಯ, ನಾಗವರ್ಮ ಮುಂತಾದವರನ್ನು ಈ ಸಂದರ್ಭದಲ್ಲಿ ಹೆಸರಿಸಬಹುದು. ಇವರು ನೇರವಾದ/ಸಂಪೂರ್ಣವಾದ ಅನುವಾದವನ್ನು ಮಾಡದಿದ್ದರೂ ಮೂಲಕೃತಿಯ ಕೆಲವು ಭಾಗಗಳನ್ನು ಆಯ್ದು ಅನುವಾದಿಸಿಯೋ ಅಥವಾ ಮೂಲಕೃತಿಯನ್ನು ಆಧರಿಸಿ ಕೃತಿರಚನೆ ಮಾಡಿದವರು ಅಥವಾ ಮೂಲಕೃತಿಯಿಂದ ಪ್ರೇರಣೆಯನ್ನು ಪಡೆದು ಕೃತಿರಚನೆ ಮಾಡಿದ್ದನ್ನು ಕಾಣಬಹುದು.

ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೊಳಗಿನ ಪರಸ್ಪರ ಭಾಷಾಂತರ ಚಟುವಟಿಕೆಗಳಿಗೆ ಕೇಂದ್ರೀಕರಿಸಿ ಹೇಳುವುದಾದರೆ ಕನ್ನಡ ಸಾಹಿತ್ಯದಿಂದ ಇಂಗ್ಲಿಷ್ ಸಾಹಿತ್ಯಕ್ಕೆ ಅನುವಾದಗೊಂಡ ಕೃತಿಗಳಿಗೆ, ಇಂಗ್ಲಿಷ್ ಸಾಹಿತ್ಯದಿಂದ ಕನ್ನಡ ಸಾಹಿತ್ಯಕ್ಕೆ ಅನುವಾದಗೊಂಡ ಕೃತಿಗಳನ್ನು ಹೋಲಿಸಿ ನೋಡಿದಾಗ ಇಂಗ್ಲಿಷ್ ಸಾಹಿತ್ಯದಿಂದ ಕನ್ನಡಕ್ಕೆ ಸಾಕಷ್ಟು ಪ್ರಮಾಣದಲ್ಲಿ ಅನುವಾದಗಳು ಆಗಿರುವುದನ್ನು ಗಮನಿಸಬಹುದಾಗಿದೆ.

ಜೆ.ಎಸ್. ಕುಳ್ಳಿ ಹಾಗೂ ಜಿ.ಪಿ. ಮುರುಡಿ –ಇವರ ಅನುವಾದಕಲೆ ಪುಸ್ತಕವನ್ನು ಆಧರಿಸಿ ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಗೊಂಡಿರುವ ಹಾಗೂ ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಗೊಂಡಿರುವ ಅನುವಾದಗಳ ಪಟ್ಟಿಯನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಈ ಪಟ್ಟಿಯಲ್ಲಿ ಲಭ್ಯವಿರುವ ಮಾಹಿತಿಯನ್ನು ಆಧರಿಸಿ ಅನುವಾದ ಕೃತಿಗಳ ಪ್ರಕಟಣಾ ವರ್ಷಗಳನ್ನು ನೀಡಲಾಗಿದೆ.

# ಇಂಗ್ಲಿಷನಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳ ಅವಲೋಕನ/ವಿವರ

| ಕ್ರಸಂ. | ಮೂಲ ಲೇಖಕರು | ಮೂಲಕೃತಿ | ಅನುವಾದಕರು | ಅನುವಾದದ ಶೀರ್ಷಿಕೆ | ವರ್ಷ |
|---|---|---|---|---|---|
| ೧. | ಪಾಲಗ್ರೇವ (ಸಂಪಾದಿತ ಕೃತಿ) | ದಿ. ಗೋಲ್ಡನ್ ಟ್ರೆಜರಿ | ಬಿ.ಎಂ. ಶ್ರೀಕಂಠಯ್ಯ | ಇಂಗ್ಲಿಷ್ ಗೀತಗಳು | |
| ೨. | ಜೇನ್ ಆಸ್ಟಿನ್ | ಪ್ರೈಡ್ ಅಂಡ್ ಪ್ರಿಜುಡೀಸ್ | ಪ್ರೊ ಜವರೇ ಗೌಡ | ಹಮ್ಮು-ಬಿಮ್ಮು | |
| ೩. | ಮೇರಿ ಶರ್ವುಡ್ | ದಿ ಆಯಾ ಅಂಡ್ ಲೇಡಿ | ಸಿ. ಕ್ಯಾಂಪಬೆಲ್? | ದೊರೆಸಾನಿಯನ್ನೂ ದಾದಿಯನ್ನೂ ಕುರಿತಂಥ ಕಥೆ | ೧೮೪೪ |
| ೪. | ಜಾನ್ ಬನಿಯನ್ | ಪಿಲ್ಗ್ರಿಮ್ಸ್ ಪ್ರೋಗ್ರೆಸ್ | ಜಿ. ವೀಗಲ್? | ಯಾತ್ರಸ್ಥನ ಸಂಚಾರವು | – |
| ೫. | ಎಚ್. ಮೋಗ್ಲಿಂಗ (೧೮೬೭) | ಲಿಟ್ಲಹೆನ್ರಿ ಅಂಡ್ ಹಿಸ್ ಬಾಯಿ | – | ಚಿಕ್ಕವನಾದ ಹೆನ್ರಿಯೂ ಅವನ ಬೋಯಿಯು | |
| ೬. | – | ಅಡ್ವೆಂಚರ್ಸ್ ಆಫ್ ಫಕೀರ್ಸ್ | ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು | ಮನೋಹರವಾದ ನಾಲ್ಕು ಮಂದಿ ಫಕೀರರ ಕಥೆಗಳು | ೧೮೮೩ |
| ೭. | – | – | ಯು. ದಕ್ಷಿಣಾಮೂರ್ತಿ | ಅಲಾರಿಯ ಅದ್ಭುತ ದೀಪಸ್ತಂಭದ ಕಥೆ | ೧೮೯೦ |
| ೮. | – | ಸ್ಯಾಂಡಫೋರ್ಡ ಅಂಡ್ ಮಾರ್ಟನ್ | ಎಂ.ಎಸ್. ಪುಟ್ಟಣ್ಣ | 'ಸುಮತಿ-ಮದನಕುಮಾರ ಚರಿತ್ರೆ' | ೧೮೯೩ |
| ೯. | ಹೆನ್ರಿ ಟೈಲರ್ | – | ಎಂ.ಎಲ್. ಶ್ರೀಕಂಠೇ ಗೌಡ | ಕನ್ಯಾವಿತಂತು | ೧೮೯೫ |
| ೧೦. | – | ದಿ ಲಿಟ್ಲ್ ಮರ್ಚಂಟ್ಸ್ | ಎಂ.ಎಲ್. ಶ್ರೀಕಂಠೇ ಗೌಡ | ಚಿಕ್ಕ ಬಣಜಿಗರು | ೧೮೯೫ |
| ೧೧. | – | ಲಿಟ್ಲರ್ ಹ್ಯಾರೋಲ್ಡ್ | ಅಣಜಿರಾವ್ ಮಲ್ಲೇಶ್ವರ | 'ಉಲ್ಲಾಸಿನಿ' | ೧೯೦೨ |
| ೧೨. | ಡಾ। ಜಾನ್ಸನ್ | – | ಜೀವಾಜಿ ವಿಷ್ಣು ಗೋರೆ | ರಾಸೆಲಾಸೆ | ೧೯೦೨ |

| | | | | |
|---|---|---|---|---|
| ೧೩. ಹೆನ್ರಿ ಫೀಲ್ಡಿಂಗ್ಸ್ | ಟೋಮ್ ಜೋನ್ಸ್ | ಎಂ.ಆರ. ಅಣ್ಣಾಜಿ ರಾವ್ | ಶರಣಾಗತ | ೧೯೦೫ |
| ೧೪. ಗೋಲ್ಡ್ ಸ್ಮಿತ್ | ಶಿ ಸ್ಟೂಪ್ಸ್ ಟು ಕಾಂಕರ್ | ಕೆ. ವಾಸುದೇವಾಚಾರ್ಯ | ಪತಿವಶೀಕರಣ | – |
| ೧೫. ಷೆರಿಡನ್ಸ್ | ದಿ. ಸ್ಕೂಲ್ ಫಾರ್ ಸ್ಕ್ಯಾಂಡಲ್ | ಗ. ಹು. ಹೊನ್ನಾಪುರಮಠ | ಪ್ರಿಮೋಜ ವಿಜಯಂ | ೧೯೧೫ |
| ೧೬. ಶೇಕ್ಸಪೀಯರನ ಕೃತಿಗಳು ವಿಪುಲವಾಗಿ ಕನ್ನಡಕ್ಕೆ ಬಂದವು. ಅವುಗಳ ವಿವರ ನೀಡಲಾಗಿದೆ. | – | – | – | – |
| ೦೧. ಶೇಕ್ಸಪೀಯರ | ಅಥೆಲ್ಲೊ | ಗುಂಡೋ ಕೃಷ್ಣ ಚುರಮರಿ | ರಾಘವೇಂದ್ರ ರಾವ್ ನಾಟಕ | ೧೮೮೫ |
| ೦೨. " | ಅಥೆಲ್ಲೊ | ಬಸವಪ್ಪ ಶಾಸ್ತ್ರಿ (ಮಹಾದೇವಶಾಸ್ತ್ರಿ) ಮತ್ತು ಸುಬ್ಬರಾವ್ | ಶೂರಸೇನ ಚರಿತ್ರೆ | ೧೮೯೫ |
| ೦೩. " | ಆಜ್ ಯು ಲೈಕ್ ಇಟ್ | ಶಾಮರಾವ್ ವೆಂಕಟಾದ್ರಿ | ಕಮಲಾವತಿ ಪರಿಣಯ | – |
| ೦೪. " | ಆಲ್ ಈಜ್ ವೆಲ್ ದ್ಯಾಟ್ ಎಂಡ್ಸ್ ವೆಲ್ | ಬೆಳ್ಳಾವೆ ಸೋಮನಾಥಯ್ಯ (ವೀರೇಶಲಿಂಗ ಪಂತಲು ಅವರ ತೆಲುಗುಕೃತಿಯಿಂದ ಭಾಷಾಂತರಿತ) | ಸತೀಮಣಿ ವಿಜಯ | ೧೮೯೭ |
| ೦೫. " | ಆಂಟನಿ ಆಂಡ್ ಕ್ಲಿಯೋಪಾತ್ರ | ಕೆ. ಮಲ್ಲರಾಜೆ ಅರಸ (ಅಪ್ರಕಟಿತ) | ಆಂಟೋನಿ ಮತ್ತು ಕ್ಲಿಯೋಪಾತ್ರ | – |
| ೦೬. " | ದಿ ಕಾಮಿ ಡಿ ಆಫ್ ಎರರ್ಸ್ | ಡೆಪ್ಯುಟಿ ಚೆನ್ನಬಸಪ್ಪ | ನಗದವರನ್ನು ನಗಿಸುವ ಕಥೆ | ೧೮೯೯ |
| ೦೭. " | ಕಿಂಗಲೀಯರ್ | ಎಂ.ಎಸ್.ಪುಟ್ಟಣ್ಣ | ಹೇಮಚಂದ್ರ ವಿಲಾಸ | ೧೮೯೯ |
| ೦೮. " | ದಿ ಟು ಜಂಟ್ಲಮೆನ್ ಆಫ್ ವೆರೋನಾ | ಆರ್. ಅಣ್ಣಾಜಿ ರಾವ್ (ಗದ್ಯರೂಪಾಂತರ) | ಕುಸುಮಾಕರರು | ೧೮೯೭ |
| ೦೯. " | ದಿ ಟೆಂಪೆಸ್ಟ್ | ಕರ್ನಾಟಕ ಗ್ರಂಥಮಾಲಾ, ಮೈಸೂರು | ಚಂಡಮಾರುತ | ೧೮೯೩ |
| ೧೦. " | ದಿ ಟೇಮಿಂಗ್ ಆಫ್ ದಿ ಶ್ರ್ಯೂ | ಕೆ. ಲಕ್ಷ್ಮಣರಾಯ | ಚಂಡಿಮದಮರ್ದನ | ೧೯೧೦ |

| | | | | | |
|---|---|---|---|---|---|
| ೧೧. | ,, | ದಿ ಟೇಮಿಂಗ್ ಆಫ್ ದಿ ಶ್ರ್ಯೂ | ಎಸ್.ಜಿ. ನರಸಿಂಹಾಚಾರ್ಯ | ಗಯ್ಯಾಳಿಯನ್ನು ಸಾಧು ಮಾಡುವಿಕೆ | – |
| ೧೨. | ,, | ,, | ಬೆಳ್ಳಾವೆ ಸೋಮನಾಥಯ್ಯ (ವಿರೇಶಲಿಂಗ ಪಂತಲು ಅವರ ತೆಲಗು ಕೃತಿಯ ಭಾಷಾಂತರ) | ,, | |
| ೧೩. | ,, | ,, | ಗ.ಹು. ಹೊನ್ನಾಪುರ ಮಠ | ತ್ರಾಟಿಕಾ ಅಥವಾ ಮೊಂಡಗಂಡ ತುಂಟ ಹೆಂಡತಿ | ೧೯೨೦ |
| ೧೪. | ,, | ದಿ ಮರ್ಚಂಟ್ ಆಫ್ ವೇನಿಸ್ | ಎ. ಆನಂದ ರಾವ್ | ಪಾಂಚಾಲೀ ಪರಿಣಯ | ೧೮೫೦ |
| ೧೫. | ,, | ,, | ಜಯರಾಮಾಚಾರ್ಯ | ,, | – |
| ೧೬. | ,, | ,, | ಬಿ.ವೆಂಕಟಾಚಾರ್ಯ | ವೆನಿಸು ನಗರದ ವಣಿಕ | ೧೯೦೬ |
| ೧೭. | ,, | ,, | ಹನುಮಂತ ಗೌಡ | ವೇಣುಪುರಿಯ ವರ್ತಕ | ೧೯೨೮ |
| ೧೮. | ,, | ,, | ಕೆ. ವಾಸುದೇವಾಚಾರ್ಯ | ಸುರತ ನಗರದ ಶ್ರೇಷ್ಠಿ | ೧೯೨೯ |
| ೧೯. | ,, | ಎ ಮಿಡ್ ಸಮರ್ ನೈಟ್ಸ್ ಡ್ರೀಮ್ | ಎಂ.ಎಲ್. ಶ್ರೀಕಂಠೇಗೌಡ | ಪ್ರಮೀಳಾರ್ಜುನೀಯ | – |
| ೨೦. | ,, | ,, | ಪಿ. ವೇದಮಿತ್ರ | ಯವನಯಾಮಿನಿ ಕಥೆಗಳು | ೧೯೦೫ |
| ೨೧. | ,, | ,, | ಬಾಪು ಸುಬ್ಬ ರಾವ್ | ಯವನ ಯಾಮಿನಿ ವಿನೋದ | ೧೯೧೦ |
| ೨೨. ೮೦ | ,, | ಮ್ಯಾಕಬೆತ್ | ಧಾರವಾಡ ಚೆನ್ನಬಸಪ್ಪ | ಮ್ಯಾಕಬೆತ್ | ೧೮೭೦- |
| ೨೩. | ,, | ,, | ಎಂ.ಎಲ್. ಶ್ರೀಕಂಠೇ ಗೌಡ | ಪ್ರತಾಪರುದ್ರದೇವ | ೧೮೯೫ |
| ೨೪. | ,, | ರೋಮಿಯೋ ಆಂಡ್ ಜ್ಯುಲಿಯೆಟ್ | ವೆಂಕಟೇಶ ಭೀಮ ರಾವ್ ಭಂಡಿವಾಡ | ಕಮಲಕರ ಪದ್ಮಗಂಧಿಯರ ಕಥೆ | ೧೮೮೧ |
| ೨೫. | ,, | ,, | ಎ.ವ್ಹಿ. ವರದಾಚಾರ್ಯ | ರಾಮ ವರ್ಮ-ಲೀಲಾವತಿ | – |
| ೨೬. | ,, | ,, | ಎ. ಆನಂದ ರಾವ್ | ರಾಮವರ್ಮ-ಲೀಲಾವತಿ | ೧೮೮೮ |

| | | | | | |
|---|---|---|---|---|---|
| ೨೭. | ,, | ,, | ಜಯರಾಮಾಚಾರ್ಯ ನರಹರಿ | ರಾಮವರ್ಮ-ಲೀಲಾವತಿಚರಿತ್ರೆ | – |
| ೨೮. | ,, | ,, | ಬಸವಪ್ಪ ಶಾಸ್ತ್ರಿ | ರೋಮಿಯೋ ಆಂಡ್ ಜ್ಯುಲಿಯೇಟ್ | – |
| ೨೯. | ,, | ,, | ಎಂ.ಎಲ್. ಶ್ರೀಕಂಠೇ ಗೌಡ | ರೋಮಿಯೋ ಆಂಡ್ ಜ್ಯುಲಿಯೇಟ್ | – |
| ೩೦. | ,, | ದಿ ವಿಂಟರ್ಸ್ ಟೇಲ್ | ರಂಗಾಚಾರ್ಯ ಮುದ್ಗಲ್ | ಮಂಜುಘೋಷ | – |
| ೩೧. | ,, | ,, | ಶ್ರೀಕಂಠೇ ಗೌಡ (ವೀರೇಶಲಿಂಗ ಪಂತುಲು ಅವರ ತೆಲುಗು ಕೃತಿ ಭಾಷಾಂತರ) | 'ಮಂಜುವಾಣಿ | – |
| ೩೨. | ,, | ಸಿಂಬೆಲಿನ್ | ಎಂ.ಎಸ್. ಪುಟ್ಟಣ್ಣ ಮತ್ತು ಶ್ರೀನಿವಾಸ ಅಯ್ಯಂಗಾರ್ | ಜಯಸಿಂಹರಾಜ ಚರಿತ್ರೆ | ೧೯೧೪ |
| ೩೩. | ,, | ,, | ಸಿ.ಎನ್. ಮಲ್ಲಪ್ಪ | ,, | ೧೮೧೮ |
| ೩೪. | ,, | ಹ್ಯಾಮ್ಲೆಟ್ | ಎ. ಆನಂದ ರಾವ್ | ಹ್ಯಾಮ್ಲೆಟ್ | ೧೯೦೭ |
| ೩೫. | ,, | ,, | ಜಯರಾಮಾಚಾರ್ಯ ನರಹರಿ | ,, | – |
| ೩೬. | ,, | ,, | ಶಿವಾಜಿ ವಿಷ್ಣು ಗೋಠೆ | ,, | – |
| ೩೭. | ,, | ,, | ಶಿವಲಿಂಗಸ್ವಾಮಿ ಸಾವಳಿಗೆ ಮಠ | ,, | – |

ಮೇಲಿನ ವಿವರಗಳನ್ನು ಆಧರಿಸಿ ಹೇಳುವುದಾದರೆ ಕ್ರಿ.ಶ. ೧೮೭೭ರಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಶೇಕ್ಸ್‌ಪಿಯರನ ಕೃತಿಗಳ ಅನುವಾದ ಆರಂಭವಾಗಿತ್ತು. ಇಂಗ್ಲಿಷ ಸಾಹಿತ್ಯದಲ್ಲಿ ಸಾಕಷ್ಟು ಹೆಸರುಗಳಿಸಿದ್ದ ಶೇಕ್ಸ್‌ಪಿಯರನ ದುರಂತ ನಾಟಕಗಳಾದ ಹ್ಯಾಮ್ಲೆಟ್. ಮ್ಯಾಕ್‌ಬೆತ್, ಜ್ಯುಲಿಯಸ್ ಸೀಝುರ್‌ಗಳಿಗಿಂತ ಆತನ ಸುಖಾಂತ ನಾಟಕಗಳಾದ 'ರೋಮಿಯೋ ಆಂಡ್ ಜ್ಯೂಲಿಯೇಟ್', 'ಮಿಡ್ ಸಮರ್ ನೈಟ್ಸ್ ಡ್ರೀಮ್'ದಂತಹ ಕೃತಿಗಳು ಕನ್ನಡಕ್ಕೆ ಹೆಚ್ಚು ಅನುವಾದಗೊಂಡವು ಎಂಬುದು ಕಂಡುಬರುತ್ತದೆ. ತೀರ ಅಪರಿಚಿತವೆನ್ನಬಹುದಾದ 'ಸಿಂಬೆಲಿನ್', ಟು ಜಂಟ್ಲ್‌ಮೆನ್ ಆಫ್ ವೆರೂನುದಂಥ ಕೃತಿಗಳೂ ಅನುವಾದವಾಗಿರುವುದನ್ನು ಕಂಡಾಗ ಶೇಕ್ಸ್‌ಪಿಯರನ ಪ್ರಭಾವ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದಟ್ಟವಾಗಿ ಹರಡಿರುವುದನ್ನು ಕಾಣಬಹುದಾಗಿದೆ.

ಇದೇ ರೀತಿ ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಗೊಂಡ ಕೃತಿಗಳ ಅವಲೋಕನವನ್ನು ಮಾಡಬಹುದಾಗಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರಕ್ಕೆ ಶಿವರಾಮ ಕಾರಂತರ ಇಂಗ್ಲೀಷ್ ಭಾಷೆಗೆ ಅನುವಾದಗೊಂಡ ಕಾದಂಬರಿಗಳನ್ನು ಮಾತ್ರ ಆಯ್ದು ಕೊಂಡಿರುವುದರಿಂದ ಇಲ್ಲಿ ಕನ್ನಡದಿಂದ ಇಂಗ್ಲಿಷ್ ಭಾಷೆಗೆ ಅನುವಾದಗೊಂಡ ಕಾದಂಬರಿಗಳ ಅವಲೋಕವನ್ನು ಮಾಡಲಾಗಿದೆ. ಇಲ್ಲಿ ಹೆಸರಿಸಿರುವ ಕಾದಂಬರಿಗಳನ್ನು ಹೊರತುಪಡಿಸಿ ಇನ್ನೂ ಅನೇಕ ಕೃತಿಗಳು ಇತ್ತೀಚಿನ ದಿನಗಳಲ್ಲಿ ಭಾಷಾಂತರಗೊಂಡಿರುವ ಸಾಧ್ಯತೆಗಳೂ ಇವೆ.

# ಕನ್ನಡದಿಂದ ಇಂಗ್ಲಿಷಗೆ ಅನುವಾದಗೊಂಡ ಕಾದಂಬರಿಗಳ ಅವಲೋಕನ/ವಿವರ

| ಕ್ರ.ಸಂ. | ಮೂಲಲೇಖಕರು | ಕಾದಂಬರಿಯ ಹೆಸರು | ಇಂಗ್ಲಿಷಗೆ ಅನುವಾದಿಸಿದವರು | ಶೀರ್ಷಿಕೆ | ಪ್ರಕಾಶಕರು | ವರ್ಷ |
|---|---|---|---|---|---|---|
| ೦೧. | ಗುಲ್ವಾಡಿ ವೆಂಕಟ ರಾವ್ | ಇಂದಿರಾಬಾಯಿ | M.E. Couch man | Indira Bai or The Triumph of Virtue | Basel Mission Press, Mangalore | 1903 |
| ೦೨. | ಶಿವರಾಮ ಕಾರಂತ | ಮರಳಿಮಣ್ಣಿಗೆ | A.N. Murthy Rao | The Whispering earth (ಅನುವಾದ ಅವತರಣಿಕೆ –1) | Bell Books (Vikas Delhi) | 1974 |
| ೦೩. | ತ್ರಿವೇಣಿ | ಶರಪಂಜರ | Mrs. Meera Narvekar | The `Mad woman' (ಅನುವಾದ ಅವತರಣಿಕೆ –7) | Jaico Publishing Home, Bombay | 1975 |
| ೦೪. | ಶಿವರಾಮ ಕಾರಂತ | ಚೋಮನದುಡಿ | U.R. Kalkur | Choma's Drum | Clarion Books, New Delhi | 1978 |
| ೦೫. | ಶಿವರಾಮ ಕಾರಂತ | ಮೂಕಜ್ಜಿಯ ಕನಸುಗಳು | T.S. Sanjeeva Rao | Mookajji's Visions | IBH Publications Bangalore | 1979 |
| ೦೬. | ಶಿವರಾಮ ಕಾರಂತ | ಕುಡಿಯರ ಕೂಸು | H.Y. Sharada Prasad | The Headman of the Little Hill | IBH publications Bangalore | 1979 |
| ೦೭. | ಶ್ರೀಕೃಷ್ಣ ಆಲನಹಳ್ಳಿ | ಕಾಡು | Dr. Rajeeva Taranath | The woods | Vikas Books New Delhi | 1980 |
| ೦೮. | ನಿರಂಜನ | ಮೃತ್ಯುಂಜಯ | Tejaswini Niranjana | Coming Forth by Day | Disha Books/ Orient Longman Hyderabad | 1994 |
| ೦೯. | ತ್ರಿವೇಣಿ | ಶರಪಂಜರ | C. Vimala Rao | Sharapanjara (Cage of Arrows) (ಅನುವಾದ ಅವತರಣಿಕೆ –3) | B.R. Publications New Delhi | 1997 |
| ೧೦. | ಶ್ರೀಕೃಷ್ಣ ಆಲನಹಳ್ಳಿ | ಪರಸಂಗದ ಗೆಂಡತಿಮ್ಮ | P.P. Giridhar | Gendethimma | Macmillan, India | 1998 |

| | | | | | | |
|---|---|---|---|---|---|---|
| 11 | ಕುವೆಂಪು | ಕಾನೂರು ಹೆಗ್ಗಡತಿ | Padma Ramachandra Sharma and Ramachandra Sharma | The House of Kannor | Penguin India, New Delhi | 1999 |
| 12. | ಚಂದ್ರಶೇಖರ ಕಂಬಾರ | ಚಕೋರಿ | Pranava Manjari & O.L. Nagabhushana Swamy | Chakori (Prose narrative version) | Penguin India | 1999 |
| 13. | ಸಾರಾ ಅಬೂಬಕರ್ | ಚಂದ್ರಗಿರಿಯ ತೀರದಲ್ಲಿ | Vanamala Vishwanath | Breaking Ties | Macmillan India, Chenni | 2001 |
| 14. | ಚಂದ್ರಶೇಖರ ಕಂಬಾರ | ಸಿಂಗಾರೆವ್ವ ಮತ್ತು ಅರಮನೆ | Lakshmi Chandrashekhar | Singarevva and The palace | Katha New Delhi | 2002 |
| 15. | ಶಿವರಾಮ ಕಾರಂತ | ಮರಳಿಮಣ್ಣಿಗೆ | Padma Ramachandra Sharma | Return to Earth (ಅನುವಾದ ಅವತರಣಿಕೆ-2) | Sahitya Academy, Bangalore | 2002 |
| 16. | ಕಡಿದಾಳ ಮಂಜಪ್ಪ | ಪಂಜರವಳ್ಳಿಯ ಪಂಜು | ? | The Torch of Panjaravalli | ? | ? |
| 17. | ದೇವನೂರು ಮಹಾದೇವ | | ಒಡಲಾಳ | Polanki Ramamurhi | The Rooster and The Peacock | |
| 18. | ದೇವನೂರು ಮಹಾದೇವ | | ಕುಸುಮಬಾಲೆ | Polanki Ramamurthi and Rowena Hill | Kusumabala | |

ಇಂಗ್ಲೀಷನಿಂದ ಕನ್ನಡಕ್ಕೆ ಹಾಗೂ ಕನ್ನಡದಿಂದ ಇಂಗ್ಲೀಷಗೆ ನಡೆದ ಭಾಷಾಂತರ ಪ್ರಕ್ರಿಯೆಯ ಮೇಲಿನ ಅವಲೋಕನದಲ್ಲಿ ಈ ಕೆಳಗಿನ ವಿಚಾರಗಳು ಸ್ಪಷ್ಟವಾಗುತ್ತವೆ. ಇಂಗ್ಲಿಷ ಭಾಷೆಯಿಂದ ಕನ್ನಡಕ್ಕೆ ಸಾಕಷ್ಟು ಹಿಂದಿನಿಂದಲೇ ಅನುವಾದ ಆರಂಭಗೊಂಡಿದೆ. ಆದರೆ ಕನ್ನಡದಿಂದ ಇಂಗ್ಲಿಷಗೆ ಅನುವಾದ ಆರಂಭಗೊಂಡಿದೆ. ಆದರೆ ಕನ್ನಡದಿಂದ ಇಂಗ್ಲಿಷಗೆ ಅನುವಾದ ಗೊಂಡಿರುವುದು ಸಾಮಾನ್ಯವಾಗಿ ೧೯ನೇ ಶತಮಾನದ ಆರಂಭದ ಹಂತದಲ್ಲಿ ಎಂಬುವುದನ್ನು ಗಮನಿಸಬಹುದು. ಇಂಗ್ಲಿಷ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಲಾಗಿರುವ ಕೃತಿಗಳು ಹೆಚ್ಚಾಗಿ ಆಧುನಿಕ ಜ್ಞಾನ ಕ್ಷೇತ್ರಕ್ಕೆ ಸಂಬಂಧಿಸಿದಂತವುಗಳು. ಭಾರತದಲ್ಲಿ ಸಂಸ್ಕೃತದಲ್ಲಿರುವ ಪಾರಂಪರಿಕ ಜ್ಞಾನ, ವೇದ ಶಾಸ್ತ್ರ ಪುರಾಣ ಮುಂತಾದ ವಿಚಾರಗಳು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಲ್ಪಟ್ಟಂತವುಗಳು. ಆಧುನಿಕ ಜ್ಞಾನ ಕ್ಷೇತ್ರದಲ್ಲಿ ವಿಜ್ಞಾನ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಅನೇಕ ವಿಚಾರಗಳು ಇಂಗ್ಲಿಷನಲ್ಲಿ ಹೇರಳವಾಗಿರುವುದರಿಂದ ಕನ್ನಡಕ್ಕೆ ಇಂತಹ ವಿಚಾರಗಳೇ ಹೆಚ್ಚಾಗಿ ಭಾಷಾಂತರಗೊಂಡವು. ಇಂಗ್ಲಿಷನಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳಲ್ಲಿ ಸೃಜನ ಸಾಹಿತ್ಯಕೃತಿಗಳ ಜೊತೆಗೆ ಸೃಜನೇತರ ಕೃತಿಗಳ ಸಂಖ್ಯೆಯೇ ಹೆಚ್ಚಾಗಿವೆ. ಕನ್ನಡದಿಂದ ಇಂಗ್ಲಿಷಗೆ ಭಾಷಾಂತರಗೊಂಡ ಕೃತಿಗಳ ಸ್ವರೂಪವನ್ನು ಗಮನಿಸಿದಾಗ ಭಾಷಾಂತರದ ಸ್ವರೂಪ ತೀರ ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ಕಥೆ, ಕಾದಂಬರಿ, ನಾಟಕಗಳಂತಹ ಸೃಜನಶೀಲ ಕೃತಿಗಳೇ ಹೆಚ್ಚಿನ ಪ್ರಮಾಣದಲ್ಲಿ ಅನುವಾದಗೊಂಡಿರುವುದು ಕಂಡು ಬರುತ್ತದೆ.

# ಅಧ್ಯಾಯ -೩

## ಅನ್ಯಭಾಷೆಗಳಲ್ಲಿ ಕಾರಂತರ ಕಾದಂಬರಿಗಳು

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸುಮಾರು ೪೭೦ಕ್ಕೂ ಮಿಕ್ಕಿ ಕೃತಿರಚನೆ ಮಾಡಿದವರು ಕಾರಂತರು. ಕಾರಂತರ ಒಟ್ಟು ಕೃತಿಗಳನ್ನು ಲೆಕ್ಕಹಾಕಿದಾಗ ಅವರು ಸಾಹಿತ್ಯಕ್ಷೇತ್ರಕ್ಕೆ ನೀಡಿದ ಕೊಡುಗೆಗಳು ಈ ರೀತಿ ಇವೆ. ಕವನ ಸಂಕಲನ -೨, ಕಾದಂಬರಿಗಳು -೪೫, ನಾಟಕಗಳು -೩೧, ಸಣ್ಣಕತೆಗಳು -೪, ಹರಟೆ ವಿಡಂಬನೆಗಳು -೬, ಬಾಲಸಾಹಿತ್ಯ -೨೩೧, ವೈಚಾರಿಕತೆಗೆ ಸಂಬಂಧಪಟ್ಟ ಕೃತಿಗಳು -೦೯, ವಯಸ್ಕರ ಶಿಕ್ಷಣಕ್ಕೆ ಸಂಬಂಧಿಸಿದವುಗಳು -೮, ವಿಜ್ಞಾನ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದವುಗಳು -೮, ಕಲಾಪ್ರಪಂಚಕ್ಕೆ ಸಂಬಂಧಪಟ್ಟ ಕೃತಿಗಳು -೧೩, ಪ್ರವಾಸಕಥನಗಳು -೬, ಜೀವನಚರಿತ್ರೆ ಮತ್ತು ಆತ್ಮಕಥನಗಳು -೯, ನಿಘಂಟು -೧, ವಿಶ್ವಕೋಶಗಳು -೯, ಬಿಡಿಬರಹಗಳು -೮, ಸಂಪಾದಿತ ಕೃತಿಗಳು -೫, ಅನುವಾದಿತ ಕೃತಿಗಳು -೧೬, ಆಂಗ್ಲಭಾಷೆಯಲ್ಲಿ ರಚಿಸಿದ ಕೃತಿಗಳು -೬. ಈ ಎಲ್ಲ ಕೃತಿಗಳು ಕಾರಂತರ ಅಗಾಧವಾದ ಪಾಂಡಿತ್ಯವನ್ನು ವಿವಿಧ ಕ್ಷೇತ್ರಗಳಲ್ಲಿನ ಅವರ ಆಸಕ್ತಿಯನ್ನು ಸಾಬೀತುಪಡಿಸುತ್ತವೆ. ಬಹುಶಃ ಹೀಗೆ ಇಷ್ಟೊಂದು ವೈವಿಧ್ಯವಾದ ಕ್ಷೇತ್ರಗಳಲ್ಲಿ, ತಮ್ಮನ್ನು ತೊಡಗಿಸಿಕೊಂಡ ಸಾಹಿತಿ ಕನ್ನಡದಲ್ಲಿ ಮತ್ತೊಬ್ಬರಿಲ್ಲ ಎನ್ನಬಹುದಾಗಿದೆ. ಕಾರಂತರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೊಡುಗೆಗಳನ್ನು ನೀಡಿದ್ದರೂ, ಬಾಲಸಾಹಿತ್ಯಕ್ಕೆ ಅತ್ಯಂತ ಹೆಚ್ಚಿನ ಕೃತಿಗಳನ್ನು ನೀಡಿರುತ್ತಾರೆ. ಒಟ್ಟು ೨೩೧ ಕೃತಿಗಳನ್ನು ರಚಿಸಿದ ಕಾರಂತರಿಗೆ ಮುಂದಿನ ಪೀಳಿಗೆಯ ಬಗೆಗೆ ಅಪಾರವಾದ ಕಾಳಜಿಯಿತ್ತು ಎನ್ನುವುದು ಇದರಿಂದ ಗೊತ್ತಾಗುತ್ತದೆ.

ಪ್ರಸ್ತುತ ಕಾರಂತರ ಕಾದಂಬರಿ ಪ್ರಕಾರವನ್ನು ನೋಡುವುದಾದರೆ ಒಟ್ಟು ೪೫ ಕಾದಂಬರಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾರಂತರ ಸಾಧನೆ ವಿಶಿಷ್ಟವಾದುದು. ಕರಾವಳಿ ಕರ್ನಾಟಕದ ಪ್ರಾದೇಶಿಕತೆಯನ್ನು, ಅಲ್ಲಿರುವ ಸಾಂಸ್ಕೃತಿಕ ವೈವಿಧ್ಯವನ್ನು ತಮ್ಮ ಕಾದಂಬರಿಗಳಲ್ಲಿ ದಾಖಲಿಸಲು ಪ್ರಯತ್ನಿಸಿದ ಕಾರಂತರು ಪ್ರಾದೇಶಿಕ ಕಾದಂಬರಿಕಾರರು ಎಂದೇ ಪರಿಚಿತರಾದವರು. ಕರಾವಳಿ ಬದುಕಿನ ಚಿತ್ರಣ, ಅದರ ಒಳಹೊರಗುಗಳ ವಿಶ್ಲೇಷಣೆ, ಗ್ರಾಮೀಣ ಜನರ ಸಾಮಾಜಿಕ ಬದುಕಿನ ಸ್ಥಿತಿಗತಿಗಳನ್ನು ಕಲಾತ್ಮಕವಾಗಿ ಚಿತ್ರಿಸಿದ ಕಾರಂತರದು ಒಬ್ಬ ಯಶಸ್ವಿ ಕಾದಂಬರಿಕಾರರಾಗಿ ಮೂಡಿಬಂದಿದ್ದಾರೆ. ಅವರ ಕಾದಂಬರಿಗಳಲ್ಲಿನ ವಿಶೇಷತೆಯಿಂದಾಗಿಯೇ, ಅವು ಪಡೆದ

ಯಶಸ್ಸಿನಿಂದಾಗಿಯೇ ಅವರ ಕೆಲವು ಕಾದಂಬರಿಗಳು ಇನ್ನಿತರ ಹಲವು ಭಾಷೆಗಳಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ. ಮುಖ್ಯವಾಗಿ ವಸಾಹತುಶಾಹಿ ಕಾಲಘಟ್ಟದಲ್ಲಿ ಕರ್ನಾಟಕ ಕರಾವಳಿ ಭಾಗದ ಗ್ರಾಮೀಣ ಬದುಕಿನಲ್ಲಿ ಆದ ಬದಲಾವಣೆಗಳನ್ನು ಆಧುನಿಕತೆಯ ಗಾಳಿ ಬೀಸತೊಡಗಿದಾಗ ಜೀವನಶೈಲಿಯಲ್ಲಿ ಆದ ಬದಲಾವಣೆಗಳನ್ನು ಕಾರಂತರು ತಮ್ಮ ಕಾದಂಬರಿಗಳಲ್ಲಿ ದಾಖಲಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಕಾರಂತರು ವಾಸ್ತವವಾದಿ ನೆಲೆಯಲ್ಲಿ ಬರೆಯತೊಡಗಿದವರು. ಆಧುನಿಕತೆ ನಮಗೆ ಬಂದುದು ಹೊರಗಿನಿಂದ. ಫ್ರಾನ್ಸ್‌ನಲ್ಲಾಗಲಿ, ರಷ್ಯಾದಲ್ಲಾಗಲಿ ನಡೆದ ಮಹಾಕ್ರಾಂತಿಗಳು ಅಲ್ಲಿ ಆಧುನಿಕತೆಯನ್ನು ಹುಟ್ಟುಹಾಕಿದವು. ಆದರೆ ಅಲ್ಲಿ ಒಂದು ದೇಶದ ಒಳಗಡೆಯೇ ಈ ಕ್ರಾಂತಿಗಳು ಹುಟ್ಟಿಕೊಂಡು ವಾಸ್ತವವಾದಿ ಪರಂಪರೆಯನ್ನು ಅರಳಿಸಿದವು. ಭಾರತದಲ್ಲಿ ವಾಸ್ತವವಾದಿ ಪರಂಪರೆಯಾಗಲಿ, ಆಧುನೀಕತೆಯ ಪ್ರಕ್ರಿಯೆಯಾಗಲಿ ಆರಂಭವಾದದ್ದು ವಸಾಹತುಶಾಹಿಯ ಪ್ರಭಾವದಿಂದ. ಅದು ಹೊರಗಿನಿಂದ ಆದ ಪ್ರಭಾವ. ಆಧುನಿಕತೆ ಎಂಬುದು ನಮಗೆ ಅನಿವಾರ್ಯವಾಗಿ ಬಂದದ್ದು. ಮತ್ತು ಇದನ್ನು ನಾವು ಅನಿವಾರ್ಯವಾಗಿ ಸ್ವೀಕರಿಸಬೇಕಾಯಿತು. "ವಸಾಹತುಶಾಹೀ ಆಡಳಿತದ ಹಿಂದೆ ಕೈಗಾರಿಕಾಕ್ರಾಂತಿ ಇತ್ತು. ಹೊಸ ವೈಜ್ಞಾನಿಕ ಸಂಸ್ಕೃತಿ ಇತ್ತು. ಇವುಗಳಿಂದ ಪುಷ್ಟಿಗೊಂಡ ಸಾಮ್ರಾಜ್ಯಶಾಹೀ ಆಕ್ರಮಣಶೀಲತೆ ಇತ್ತು. ಹೀಗಾಗಿ ಭಾರತೀಯ ಸಮಾಜ ಮೊಟ್ಟಮೊದಲ ಬಾರಿಗೆ ಹೊಸದೊಂದು ವಾಸ್ತವಕ್ಕೆ ಅನಿವಾರ್ಯವಾಗಿ ತೆರೆದುಕೊಳ್ಳಬೇಕಾಯಿತು." ಹೀಗೆ ಈ ವಿಚಾರವನ್ನು ಟಿ.ಪಿ. ಅಶೋಕ ಇವರು ಎತ್ತಿಹಿಡಿಯುತ್ತಾರೆ.



ಇಂತಹದ್ದೊಂದು ಸಂದರ್ಭದಲ್ಲಿ ಕಾರಂತರು ಕಾದಂಬರಿಗಳನ್ನು ರಚಿಸಿದವರಾದುದರಿಂದ ಅವರ ಕಾದಂಬರಿಗಳಲ್ಲಿ ವಸಾಹತುಶಾಹಿಯ ದಟ್ಟವಾದ ಪ್ರಭಾವ, ಗ್ರಾಮೀಣ ಬದುಕನ್ನು ಅದು ಪ್ರಭಾವಿಸಿದ ರೀತಿ, ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಹಳ್ಳಿಯ ಬದುಕಿನ ಚಿತ್ರಣವನ್ನು ಕಾಣಬಹುದು. ಕಾರಂತರ ಕಾದಂಬರಿಗಳು ಕರ್ನಾಟಕದ ಓದುಗರಿಗೆ ಮಾತ್ರ ಅಥವಾ ಕನ್ನಡ ಸಾಹಿತ್ಯಕ್ಕೆ ಮಾತ್ರ ಸೀಮಿತವಾದ ಕಾದಂಬರಿಗಳು ಅನ್ನಿಸುವುದಿಲ್ಲ. ಅವರ ಕಾದಂಬರಿಗಳಲ್ಲಿರುವ ವಿಶೇಷತೆಯಿಂದಾಗಿ ಅವರ ಪ್ರಾದೇಶಿಕ ಕಾದಂಬರಿಗಳು ಅಖಿಲ ಕರ್ನಾಟಕ, ಅಖಿಲಭಾರತ, ಅಷ್ಟೇಕೆ ಒಟ್ಟು ತೃತೀಯ ಜಗತ್ತಿನ ಸಾಮಾಜಿಕ ಸ್ಥಿತ್ಯಂತರಗಳ ಕೆಲವು ಮೂಲ ಮಾದರಿಗಳನ್ನು ಸೂಕ್ಷ್ಮವಾಗಿ ಹೊಳೆಯಿಸುತ್ತವೆ" ಪ್ರಾದೇಶಿಕತೆಯನ್ನು ಮೀರಿದ ಕಾರಣದಿಂದ ಮನೋವೈಜ್ಞಾನಿಕ ಇಲ್ಲವೇ ತಾತ್ವಿಕ ತುಡಿತಗಳು

ಜಾಗತಿಕ ಮೌಲ್ಯದಲ್ಲಿ ತಲುಪಬಲ್ಲವಾದವುಗಳು. ಈ ಎಲ್ಲ ಕಾರಣಗಳಿಂದಾಗಿ ಕಾರಂತರ ಅತಿ ಹೆಚ್ಚು ಕಾದಂಬರಿಗಳು ದೇಶಿ–ವಿದೇಶಗಳ ಇನ್ನಿತರ ಭಾಷೆಗಳಿಗೆ ಭಾಷಾಂತರಗೊಂಡಿವೆ.

ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಕಾರಂತರು ಒಟ್ಟು ೪೫ ಕಾದಂಬರಿಗಳನ್ನು ನೀಡಿದ್ದಾರೆ. ಕಾರಂತರ ಆರಂಭದ ಕಾದಂಬರಿಗಳು ಪತ್ತೇದಾರಿ ಜಾಡನ್ನು ಹಿಡಿದು ಹೊರಟವುಗಳಾದರೂ ಒಬ್ಬ ಯಶಸ್ವಿ ಕಾದಂಬರಿಕಾರನಾಗಿ ಬೆಳೆಯುವ ಎಲ್ಲಾ ಮುನ್ಸೂಚನೆಗಳು ಈ ಕಾದಂಬರಿಗಳಲ್ಲೇ ಸಿಗುತ್ತಿದ್ದವು ಎನ್ನುವುದಾಗಿ ಜಿ.ಎಚ್. ನಾಯಕ ಅಭಿಪ್ರಾಯಪಡುತ್ತಾರೆ. ಕಾರಂತರ ಬಹುಪಾಲು ಕಾದಂಬರಿಗಳು ಪ್ರಾದೇಶಿಕತೆಯನ್ನು ಮೈಗೂಡಿಸಿಕೊಂಡು ಮಾನವೀಯ ನೆಲೆಯಲ್ಲಿ ಸಾಮಾಜಿಕ ಚಿತ್ರಣಗಳನ್ನು ನೀಡುತ್ತ ನಮ್ಮ ವಾಸ್ತವ ಬದುಕಿನ ಅನುಭವಗಳ ಸುತ್ತ ಹೆಣೆದ ಚಿತ್ರಣಗಳೇ ಆಗಿವೆ. ಬಹುಶಃ ಈ ಕಾದಂಬರಿಗಳಲ್ಲಿನ ವಸ್ತುಸ್ಥಿತಿಗಳು, ಕಾದಂಬರಿಗಳ ಆಶಯ ಅನ್ಯಭಾಷೆಯ ಲೇಖಕರನ್ನು ಪ್ರಭಾವಿಸಿ ಹಲವು ಭಾಷೆಗಳಲ್ಲಿ ಕಾರಂತರ ಕಾದಂಬರಿಗಳು ಅನುವಾದಗೊಂಡವು. ಇನ್ನಿತರ ಭಾಷೆಗಳಲ್ಲಿ ಪ್ರಕಟಗೊಂಡ ಕಾರಂತರ ಒಟ್ಟು ಕಾದಂಬರಿಗಳು ಎಂಟು. ಅವುಗಳೆಂದರೆ 'ಅಳಿದಮೇಲೆ', 'ಕುಡಿಯರ ಕೂಸು', 'ಚೋಮನದುಡಿ', 'ಬೆಟ್ಟದ ಜೀವ', 'ಮರಳಿಮಣ್ಣಿಗೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ', 'ಸರಸಮ್ಮನ ಸಮಾಧಿ' –ಇವುಗಳಲ್ಲಿ ಕೆಲವು ಕಾದಂಬರಿಗಳು ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಅನುವಾದಗೊಂಡಿವೆ. ಇದು ಕಾರಂತರ ಕಾದಂಬರಿಗಳ ಪ್ರಸ್ತುತತೆಯನ್ನು ಓದುಗವಲಯದಲ್ಲಿ ಅವು ಸೃಷ್ಟಿಸಿದ ಪ್ರಾಮುಖ್ಯತೆಯನ್ನು ಸಾಬೀತುಪಡಿಸುತ್ತದೆ. 'ಅಳಿದ ಮೇಲೆ' ಕಾದಂಬರಿಯು ತೆಲುಗು, ತಮಿಳು, ಮರಾಠಿ ಹಾಗೂ ಮಲೆಯಾಳಿ –ಈ ನಾಲ್ಕು ಭಾಷೆಗಳಲ್ಲಿ ಅನುವಾದಗೊಂಡಿದೆ. 'ಕುಡಿಯರ ಕೂಸು' ಕಾದಂಬರಿಯು ಇಂಗ್ಲಿಷ, ಮಲೆಯಾಳಮ್, ಮರಾಠಿ ಹಾಗೂ ಸ್ಪಾನಿಷ್ –ಈ ನಾಲ್ಕು ಭಾಷೆಗಳಲ್ಲಿ ಅನುವಾದಗೊಂಡಿದೆ. 'ಚೋಮನದುಡಿ' ಕಾದಂಬರಿಯು ಹಿಂದಿ, ಮಲೆಯಾಳಮ್, ತೆಲುಗು, ಇಂಗ್ಲಿಷ, ತುಳು, ಓರಿಯಾ, ಮರಾಠಿ, ಕೊಂಕಣಿ ಹೀಗೆ ಎಂಟು ಭಾಷೆಗಳಲ್ಲಿ ಅನುವಾದಗೊಂಡಿದೆ. 'ಬೆಟ್ಟದ ಜೀವ' ಕಾದಂಬರಿಯು ಹಿಂದಿಯಲ್ಲಿ ಎರಡುಬಾರಿ, ಮರಾಠಿಯಲ್ಲಿ ಒಂದು ಬಾರಿ ಹೀಗೆ ಎರಡು ಭಾಷೆಗಳಲ್ಲಿ ಒಟ್ಟು ಮೂರು ಅನುವಾದಗಳನ್ನು ಕಂಡಿದೆ. 'ಮರಳಿಮಣ್ಣಿಗೆ' ಕಾದಂಬರಿಯು ಇಂಗ್ಲಿಷನಲ್ಲಿ ನಾಲ್ಕು ಬಾರಿ ಅನುವಾದಗೊಂಡಿದ್ದು, ಉಳಿದಂತೆ ಇದೇ ಕಾದಂಬರಿಯು ತಮಿಳು, ಮಲೆಯಾಳಮ್, ಬಂಗಾಲಿ, ಮರಾಠಿ, ಗುಜರಾತಿ, ತೆಲುಗು, ಮೈಥಿಲಿ, ಪಂಜಾಬಿ, ಕೊಂಕಣಿ –ಹೀಗೆ ಇಂಗ್ಲಿಷ ಸೇರಿದಂತೆ ಒಟ್ಟು ಹತ್ತು ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿಯಾಗಿದೆ.

ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಕಾದಂಬರಿಯಾದ 'ಮೂಕಜ್ಜಿಯ ಕನಸುಗಳು' ಹಿಂದಿ, ಮರಾಠಿ, ತಮಿಳು, ಒರಿಯಾ, ಮಲೆಯಾಳಮ್ –ಈ ಐದು ಭಾಷೆಗಳಲ್ಲಿ ಅನುವಾದಗೊಂಡಿದೆ. 'ಮೈಮನಗಳ ಸುಳಿಯಲ್ಲಿ ಹಿಂದಿ, ಮರಾಠಿ ಹಾಗೂ ಇಂಗ್ಲಿಷ ಭಾಷೆಗಳಲ್ಲಿ ಅನುವಾದಗೊಂಡಿದೆ. 'ಸರಸಮ್ಮನ ಸಮಾಧಿ' ಕಾದಂಬರಿಯು ಇಂಗ್ಲಿಷ ಭಾಷೆಯಲ್ಲಿ ಅನುವಾದಗೊಂಡಿದೆ. ಅತಿಹೆಚ್ಚಿನ ಸಂಖ್ಯೆಯಲ್ಲಿ ಅನ್ಯಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿ 'ಮರಳಿಮಣ್ಣಿಗೆ'ಯಾಗಿದೆ.

ಇನ್ನು ಯಾವ ಯಾವ ಭಾಷೆಗೆ ಕಾರಂತರ ಎಷ್ಟು ಕಾದಂಬರಿಗಳು ಅನುವಾದಗೊಂಡಿವೆ ಎಂಬುದನ್ನು ಒಂದೊಂದಾಗಿ ಗಮನಿಸಬಹುದಾಗಿದೆ.

೧. **ತೆಲುಗುಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಅಳಿದಮೇಲೆ', 'ಚೋಮನದುಡಿ' ಮತ್ತು 'ಮರಳಿಮಣ್ಣಿಗೆ'

೨. **ತಮಿಳುಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಅಳಿದಮೇಲೆ', 'ಕುಡಿಯರಕೂಸು', 'ಚೋಮನದುಡಿ', 'ಬೆಟ್ಟದ ಜೀವ', 'ಮರಳಿಮಣ್ಣಿಗೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ'

೩. **ಮರಾಠಿಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಅಳಿದಮೇಲೆ', 'ಕುಡಿಯರ ಕೂಸು', 'ಚೋಮನದುಡಿ', 'ಬೆಟ್ಟದ ಜೀವ', 'ಮರಳಿಮಣ್ಣಿಗೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ'

೪. **ಮಲೆಯಾಳಮ್ ಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಅಳಿದಮೇಲೆ', 'ಕುಡಿಯರ ಕೂಸು', 'ಚೋಮನದುಡಿ', 'ಮರಳಿಮಣ್ಣಿಗೆ', 'ಮೂಕಜ್ಜಿಯ ಕನಸುಗಳು'

೫. **ಸ್ಪಾನಿಶ್ ಭಾಷೆಗೆ ಅನುವಾದಗೊಂಡ ಕಾದಂಬರಿ:** 'ಕುಡಿಯರ ಕೂಸು'.

೬. **ಹಿಂದಿ ಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಚೋಮನದುಡಿ', 'ಬೆಟ್ಟದ ಜೀವ' ಇವುಗಳಲ್ಲಿ 'ಬೆಟ್ಟದ ಜೀವ' ಹಿಂದಿಯಲ್ಲಿ ಎರಡುಬಾರಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ.

೭. **ತುಳುಭಾಷೆಗೆ ಅನುವಾದಗೊಂಡ ಕಾದಂಬರಿ:** 'ಚೋಮನದುಡಿ'.

೮. **ಒರಿಯಾ ಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಚೋಮನದುಡಿ', 'ಮರಳಿ ಮಣ್ಣಿಗೆ'

೯. **ಬಂಗಾಲಿ ಭಾಷೆಗೆ ಅನುವಾದಗೊಂಡ ಕಾದಂಬರಿ:** 'ಮರಳಿಮಣ್ಣಿಗೆ'.

೧೦. **ಗುಜರಾತಿ ಭಾಷೆಗೆ ಅನುವಾದಗೊಂಡ ಕಾದಂಬರಿ:** 'ಮರಳಿಮಣ್ಣಿಗೆ'.

೧೧. **ಮೈಥಿಲಿ ಭಾಷೆಗೆ ಅನುವಾದಗೊಂಡ ಕಾದಂಬರಿ:** 'ಮರಳಿಮಣ್ಣಿಗೆ'.

೧೨. **ಪಂಜಾಬಿ ಭಾಷೆಗೆ ಅನುವಾದಗೊಂಡ ಕಾದಂಬರಿ:** 'ಮರಳಿಮಣ್ಣಿಗೆ'.

೧೩. **ಇಂಗ್ಲಿಷ್ ಭಾಷೆಗೆ ಅನುವಾದಗೊಂಡ ಕಾದಂಬರಿಗಳು:** 'ಕುಡಿಯರಕೂಸು', 'ಚೋಮನದುಡಿ', 'ಮರಳಿಮಣ್ಣಿಗೆ', 'ಮೂಕಜ್ಜಿಯ ಕನಸುಗಳು', 'ಸರಸಮ್ಮನ ಸಮಾಧಿ', 'ಮೈಮನಗಳ ಸುಳಿಯಲ್ಲಿ' –ಹೀಗೆ ಒಟ್ಟು ೬ ಕಾದಂಬರಿಗಳು ಇಂಗ್ಲಿಷಿಗೆ ಅನುವಾದಗೊಂಡಿದ್ದು ಇವುಗಳಲ್ಲಿ 'ಮರಳಿಮಣ್ಣಿಗೆ' ಕಾದಂಬರಿ ನಾಲ್ಕು ಬಾರಿ ಅನುವಾದಗೊಂಡಿದ್ದನ್ನು ಕಾಣಬಹುದಾಗಿದೆ.

೧೪. **ಕೊಂಕಣಿ ಭಾಷೆಯಲ್ಲಿ ಅನುವಾದಗೊಂಡ ಕಾದಂಬರಿಗಳು:** 'ಚೋಮನದುಡಿ', 'ಮರಳಿಮಣ್ಣಿಗೆ'. ಹೀಗೆ ಒಟ್ಟು ಹದಿನಾಲ್ಕು ಭಾಷೆಗಳಲ್ಲಿ ಕಾರಂತರ ಕಾದಂಬರಿಗಳು ಅನುವಾದಗೊಂಡಿರುವುದು ಕಂಡುಬರುತ್ತದೆ.

ಇನ್ನಿತರ ಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕೃತಿಗಳನ್ನು ಹೋಲಿಸಿದಾಗ ಕಾರಂತರ ಅತಿ ಹೆಚ್ಚು ಕಾದಂಬರಿಗಳು ಅನುವಾದಗೊಂಡದ್ದು ಮರಾಠಿಯಲ್ಲಿ. ಒಟ್ಟು ಏಳು ಕಾದಂಬರಿಗಳು ಮರಾಠಿ ಭಾಷೆಯಲ್ಲಿ ಅನುವಾದಗೊಂಡಿವೆ. ಅನ್ಯಭಾಷೆಯಲ್ಲಿ ಭಾಷಾಂತರಗೊಂಡ ಕಾರಂತರ ಒಟ್ಟು ಎಂಟು ಕಾದಂಬರಿಗಳಲ್ಲಿ 'ಸರಸಮ್ಮನ ಸಮಾಧಿ' ಕಾದಂಬರಿಯೊಂದನ್ನು ಬಿಟ್ಟು ಉಳಿದ ಎಲ್ಲಾ ಕಾದಂಬರಿಗಳು ಮರಾಠಿ ಭಾಷೆಯಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದು. ಮರಾಠಿ ಓದುಗರು ಕಾರಂತರ ಕಾದಂಬರಿಗಳಿಂದ ೨ ಶೇಕಡ ಪ್ರಭಾವಿತರಾಗಿರುವುದನ್ನು ಇದರಿಂದ ಕಂಡುಕೊಳ್ಳಬಹುದಾಗಿದೆ.

ಅತ್ಯಂತ ಹೆಚ್ಚು ಭಾಷೆಗಳಲ್ಲಿ ಭಾಷಾಂತರಗೊಂಡ ಕಾರಂತರ ಕಾದಂಬರಿಗಳನ್ನು ಅವಲೋಕಿಸಿದಾಗ 'ಮೂಕಜ್ಜಿಯ ಕನಸುಗಳು' ಕಾದಂಬರಿ ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಕಾದಂಬರಿಯಾದರೂ ಇದು ಇಂಗ್ಲಿಷ್, ಹಿಂದಿ, ಮರಾಠಿ, ತಮಿಳು, ಒರಿಯಾ, ಮಲೆಯಾಳಮ್ –ಈ ಆರು ಭಾಷೆಗಳಲ್ಲಿ ಅನುವಾದಗೊಂಡಿದೆ. ಆದರೆ ಅವರ ಮರಳಿಮಣ್ಣಿಗೆ ಕಾದಂಬರಿ ಮಾತ್ರ ಇಂಗ್ಲಿಷ್, ತಮಿಳು, ಮಲೆಯಾಳಮ್, ಬಂಗಾಲಿ, ಮರಾಠಿ, ಗುಜರಾತಿ, ತೆಲುಗು, ಮೈಥಿಲಿ, ಪಂಜಾಬಿ, ಕೊಂಕಣಿ –ಈ ಹತ್ತು

ಭಾಷೆಗಳಲ್ಲಿ ಅನುವಾದಗೊಂಡಿದ್ದು ಅತಿ ಹೆಚ್ಚು ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಂಗ್ಲಿಷ್ ಭಾಷೆಯೊಂದರಲ್ಲೇ ಇದು ನಾಲ್ಕು ಅನುವಾದಗಳನ್ನು ಕಂಡಿದೆ –ಎ.ಎನ್. ಮೂರ್ತಿ ರಾವ್ ಅವರೇ ಇದನ್ನು `The Return to the Soil', `The Whispering Earth', `Back to the Soil' ಹೀಗೆ ಮೂರು ಬೇರೆ ಬೇರೆಯದಾದ ಶೀರ್ಷಿಕೆಯಡಿಯಲ್ಲಿ ಅನುವಾದಿಸಿದ್ದು ಕಂಡುಬರುತ್ತದೆ. ಇವರ ಹೊರತಾಗಿ ಪದ್ಮಾರಾಮಚಂದ್ರ ಶರ್ಮ ಇವರು `Return to Earth' ಎಂಬ ಶೀರ್ಷಿಕೆಯಡಿಯಲ್ಲಿ ಇದೇ ಕಾದಂಬರಿಯನ್ನು ಇಂಗ್ಲಿಷಗೆ ಅನುವಾದಿಸಿದ್ದಾರೆ. ಕಾರಂತರಿಗೆ 'ಮೂಕಜ್ಜಿಯ ಕನಸುಗಳು' ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟಿತಾದರೂ ಅತಿ ಹೆಚ್ಚು ಜನಮನ್ನಣೆಯನ್ನು ಗಳಿಸಿದ ಕಾದಂಬರಿ 'ಮರಳಿಮಣ್ಣಿಗೆ' ಎಂಬುದು ಈ ಕೃತಿ ಕಂಡ ಅತಿ ಹೆಚ್ಚು ಅನುವಾದಗಳಿಂದ ತಿಳಿದುಬರುತ್ತದೆ. 'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಕಾರಂತರು ಕಟ್ಟಿಕೊಡುವ ಮೂರು ತಲೆಮಾರುಗಳ ಆಗುಹೋಗುಗಳು, ಆಧುನಿಕತೆ ಬದುಕಿನಲ್ಲಿ ಪ್ರವೇಶವಾಗುವ ರೀತಿ, ವಸಾಹತುಶಾಹಿಯ ಪ್ರಭಾವದಿಂದ ಹಳ್ಳಿಗರ ಬದುಕಿನಲ್ಲಿ ಉಂಟುಮಾಡಿದ ಪರಿಣಾಮ ಮತ್ತು ಪ್ರಭಾವ, ಮರಳಿ ಮತ್ತೆ ಮೂಲ ಸಂಸ್ಕೃತಿಯತ್ತ ಹೊರಳುವ ವಿಚಾರಗಳು ಇನ್ನುಳಿದಂತೆ ಕರಾವಳಿ ಬದುಕಿನ ಒಳಹೊರಗುಗಳ ಚಿತ್ರಣ –ಇವೆಲ್ಲವುಗಳು ಬಹುಶಃ ಇತರ ಭಾಷೆಯ ಓದುಗರನ್ನು ಸಾಕಷ್ಟು ಪ್ರಭಾವಿಸಿರಬಹುದು. ಅವರ 'ಮೂಕಜ್ಜಿಯ ಕನಸುಗಳು' ಕಾದಂಬರಿಯು ಬಹುತೇಕ ಅವರಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ ಬಳಿಕವೇ ಇತರ ಭಾಷೆಗಳಿಗೆ ಅನುವಾದಗೊಂಡಿರುವುದು ಕಂಡುಬರುತ್ತದೆ. ಕಾದಂಬರಿ ಅನ್ಯಭಾಷೆಗಳಲ್ಲಿ ಅನುವಾದಗೊಂಡಿರುವುದು ಕಂಡುಬರುತ್ತದೆ. ಆದರೆ ಹಿಂದಿ ಭಾಷೆಯಲ್ಲಿ ಮಾತ್ರ ಇದು ಜ್ಞಾನಪೀಠ ಪ್ರಶಸ್ತಿ ಬರುವ ಪೂರ್ವದಲ್ಲೇ ಅಂದರೆ ೧೯೭೬ರಲ್ಲೇ ಅನುವಾದಗೊಂಡಿರುವುದು ಗಮನಾರ್ಹ ಅಂಶವಾಗಿದೆ. ಹೀಗೆ ಇತರ ಭಾಷೆಗಳಲ್ಲಿ ಭಾಷಾಂತರಗೊಂಡ ಕಾರಂತರ ಕಾದಂಬರಿಗಳಲ್ಲಿ ಹೆಚ್ಚಿನವು ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದನಂತರವೇ ಅನುವಾದಗೊಂಡಂತವು ಎಂಬುದು ಯೋಚಿಸತಕ್ಕ ವಿಚಾರ. ಲೇಖಕನೊಬ್ಬನ ಸಾಹಿತ್ಯಕೃತಿಗೆ ಜ್ಞಾನಪೀಠದಂಥ ಶ್ರೇಷ್ಠ ಪ್ರಶಸ್ತಿಗಳು ಬಂದಾಗ ಅದು ಓದುಗರನ್ನು ಅನ್ಯಭಾಷೆಯ ಸಾಹಿತ್ಯ ಪ್ರಿಯರನ್ನು ಪ್ರಭಾವಿಸುವುದರ ಜೊತೆಗೆ ಆ ಸಾಹಿತಿಯ ಬಗೆಗೆ, ಆತನ ಸಾಹಿತ್ಯದ ಬಗೆಗೆ ಅರಿತುಕೊಳ್ಳಬೇಕು, ಆತನ ಕೃತಿಗಳನ್ನು ತಮ್ಮ ಭಾಷೆಯಲ್ಲಿ ಪರಿಚಯಿಸಿ ತಮ್ಮ ಭಾಷಿಕರಿಗೂ ಅದನ್ನು ತಲುಪಿಸಬೇಕು ಎನ್ನುವ ವಿಚಾರಗಳಿಂದಾಗಿಯೂ ಅನುವಾದಗಳು ಹೆಚ್ಚಿನ ಸಂಖ್ಯೆಯಲ್ಲಿ ಹುಟ್ಟಿಕೊಳ್ಳುತ್ತವೆ.

ಬೇರೆ ಬೇರೆ ಭಾಷೆಗಳಿಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಗಳು ಯಾವವು, ಅನುವಾದಕರು ಯಾರು, ಯಾವ ಭಾಷೆಗೆ ಅನುವಾದಗೊಂಡಿದೆ, ಅದು ಅನುವಾದವಾಗಿ ಪ್ರಕಟಣೆ ಹೊಂದಿದ ವರ್ಷ ಹಾಗೂ ಪ್ರಕಾಶಕರ ವಿವರ ಇವುಗಳನ್ನು ಒಳಗೊಂಡಂತೆ ಲಭ್ಯವಿರುವ ಮಾಹಿತಿಯನ್ನಾಧರಿಸಿ ಕ್ರೋಡೀಕೃತ ಮಾಹಿತಿಯನ್ನು ಈ ಕೆಳಗೆ ನೀಡಲಾಗಿದೆ.

| ಕ್ರ.ಸಂ. | ಮೂಲಕೃತಿಯ ಶೀರ್ಷಿಕೆ | ಭಾಷಾಂತರಗೊಂಡ ಭಾಷೆ | ಭಾಷಾಂತರಗೊಂಡ ಭಾಷೆಯಲ್ಲಿಶೀರ್ಷಿಕೆ | ಭಾಷಾಂತರಕಾರರು | ಭಾಷಾಂತರ ಗೊಂಡವರ್ಷ | ಪ್ರಕಾಶಕರ ವಿವರ |
|---|---|---|---|---|---|---|
| ೦೧. | 'ಅಳಿದಮೇಲೆ' | ೧. ತೆಲುಗು | 'ಮರಣಾನಂತರಮುಂ' | ತಿರುಮಲ ರಾಮಚಂದ್ರ | ೧೯೭೧ | ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ, ನ್ಯೂಡೆಲ್ಲಿ |
| | | ೨. ತಮಿಳು | 'ಅಜಿಂದ ಪಿರುಗು' | ಎಮ್.ಸಿದ್ಧಲಿಂಗಯ್ಯ | ೧೯೭೨ | " |
| | | ೩. ಮಲೆಯಾಳಂ | 'ಮರಣತ್ತಿನ್ ಶೇಷಮಾ' | ಡಾ। ಜಿ. ಗೋಪಿನಾಥನ್ | ೧೯೭೬ | " |
| | | ೪. ಮರಾಠಿ | 'ಮಿಟಲ್ಯಾನಂತರ್' | ಕೇಶವ ಮಹಾಗಾಂವಕರ್ | ೧೯೭೫ | ಪಾಪ್ಯುಲರ್ ಪ್ರಕಾಶನ, ೩೫ಸಿ, ತಾಡದೇವ್ ರೋಡ್ ಮುಂಬಯಿ –೩೪ |
| ೦೨. | 'ಕುಡಿಯರ ಕೂಸು' | ೧. ಮಲೆಯಾಳಂ | 'ಮಲೆಯುಡೆ ಮಕ್ಕಳ್' | ಕೆ. ರಾಧಾಕೃಷ್ಣನ್ | ೧೯೮೧ | ಡಿ.ಸಿ. ಬುಕ್ಸ್, ಕೊಟ್ಟಾಯಂ –೬೮೬೦೦೧ |
| | | ೨. ಮರಾಠಿ | 'ಕುಡಿಯ' | ಉಮಾ ಕುಲಕರ್ಣಿ | ೧೯೯೧ | ಚಂದ್ರಕಲಾ ಪ್ರಕಾಶನ, ಪುಣೆ –೧೧ |
| | | ೩. ಇಂಗ್ಲಿಷ್ | HEADMAN OF THE LITTLE HILL | ಎಚ್.ವೈ. ಶಾರದಾ ಪ್ರಸಾದ್ | ೧೯೭೯ | ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು–೯ |
| | | ೪. ಸ್ಪಾನಿಶ್ | ELCACIQUE DE LA PEQUENA COLINA | ಮರಿಯಾ ದೆನೀಕ್ಯೂರಾ | – | New Delhi, Director General ICCR |
| ೦೩. | 'ಚೋಮನದುಡಿ' | ೧. ಹಿಂದಿ | 'ಚೋಮ ಕಾ ಢೋಲ್' | ಶ್ರೀಮತಿ ಬಿ.ಇಂದಿರಾಕೃಷ್ಣಮೂರ್ತಿ ಮತ್ತು ಡಾ। ಹಿರಣ್ಮಯ | ೧೯೭೬ | Institute of P.G. studies in Hindi, 7th Main, Second Block, Jayanagar, B.lore -560011 |
| ೦೧. | | ೨. ಮಲೆಯಾಳ | 'ಚೋಮಂಡೆ ತುಡಿ' | ಕೆ.ವಿ. ಕುಮಾರನ್ | ೧೯೭೮ | ಕೇರಳ ಸಾಹಿತ್ಯ ಅಕಾಡೆಮಿ, ತ್ರಿಶೂರ್ |
| | | ೩. ತೆಲುಗು | 'ಚೋಮನಿ ಡಪ್ಪು' | ಶರ್ವಾಣಿ | ೧೯೭೮ | ಎಮ್.ಶೇಷಾಚಲಮ್ ಎಂಡ್ ಕೋ. ಮಚಲೀಪಟ್ಟಣಮ್ ಸೆಕುಂದರಾಬಾದ್, ಮದ್ರಾಸು. |

| | | | | | |
|---|---|---|---|---|---|
| | ೪. ಇಂಗ್ಲಿಷ್ | CHOMA'S DRUM | ಯು.ಆರ್. ಕಲ್ಕೂರ್ | ೧೯೭೮ | Hindi Pocket Books Pvt. Ltd., G.T. Road, Shahdara, Delhi -110032 |
| | ೫. ತುಳು | 'ಚೋಮನದುಡಿ' | ಕೆದಂಬಾಡಿ ಜತ್ತಪ್ಪ ರೈ | ೧೯೮೩ | ಹೈದರಾಬಾದ್, ತೆಕ್ಕುಂಜ ಅಭಿನಂದನಲು |
| | ೬. ಓರಿಯಾ | 'ಚೋಮನಧೋಲಾ' | ಗ್ಯಾನೀಂದ್ರ ಕೆ. ಪ್ರಧಾನ | ೧೯೮೪ | ಕೇರಳಭಾಷಾ ಸಂಸ್ಥಾ, ಲಕ್ಷ್ಮೀಸಾಗರ, ಭುವನೇಶ್ವರ – |
| | ೭. ಮರಾಠಿ | 'ಚೋಮಾ ಮಹಾರ್' | ಶ್ಯಾಮಲತಾ ಕಾಕಡೆ | ೧೯೮೫ | ಅನಿರುದ್ಧ ಅನಂತ ಕುಲಕರ್ಣಿ, ಕಾಂಟಿನೆಂಟಲ್ ಪ್ರಕಾಶನ, ವಿಜಯನಗರ, ಪುಣೆ |
| | ೮. ಕೊಂಕಣಿ | 'ಅಂತ್ಯ ನಾ ಆಸಲ್ಲೆ ಸೊಪಾಣ್' | ಜೆ.ಬಿ. ಮೊರಾಯಿಸ್ | – | ಪಯ್ಣಾರಿ ಪ್ರಕಾಶನ, ಮುಂಬಯಿ. |
| ೦೪. ಬೆಟ್ಟದ ಜೀವ | ೧. ಹಿಂದಿ | 'ಪಹಾಡಿ ಜೀವ್' | ಬಿ.ಆರ್. ನಾರಾಯಣ | ೧೯೮೧ | ಶಬ್ದಾಕಾರ್, ೨೨೦೩ ಡಕೋಸಾನ್ ಗಲ್ಲಿ, ತುರ್ಕಮನ್ ಗೇಟ್, ದಿಲ್ಲಿ –೧೧೦೦೦೬ |
| | ೨. ಹಿಂದಿ | 'ಕಾನನ್ ಕೆ ಜೀವ್' | – | – | ಚಾಂದ್ ಎಂಡೆ ಕೋ., ದಿಲ್ಲಿ, ಬೆಂಗಳೂರು |
| | ೩. ಮರಾಠಿ | 'ಡೋಂಗರಾಯೆವಢಾ' | ಉಮಾ ಕುಲಕರ್ಣಿ | ೧೯೮೫ | ಮೆಹತಾ ಪಬ್ಲಿಷಿಂಗ್ ಹೌಸ್–೧೨೧೬ ಸದಾಶಿವಪೇಟೆ ಪುಣೆ ೩೦ |
| ೦೫. ಮರಳಿಮಣ್ಣಿಗೆ | ೧. ಇಂಗ್ಲಿಷ್ | THE RETURN TO THE SOIL | ಪ್ರೊ ಎ.ಎನ್. ಮೂರ್ತಿರಾವ್ | ೧೯೫೫ | ಜಿ.ಕೆ.ಅಂಡ್ ಬ್ರದರ್ಸ್, ಬೆಂಗಳೂರು –೪ |
| | ೨. ತಮಿಳು | 'ಮಣ್ಣುಮನಿ ತರುಂ' | ಟಿ.ಬಿ. ಸಿದ್ಧಲಿಂಗಯ್ಯ | ೧೯೬೭ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | ೩. ಮಲೆಯಾಳಂ | 'ಮಣ್ಣಿಲೇಕ್ಕ್ ಮಡಙ್ಗ' | ಟಿ. ಉಬ್ಬೈದ್ | ೧೯೬೭ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ |
| | ೪. ಇಂಗ್ಲಿಷ್ | THE WHISPERING EARTH | – | ೧೯೭೪ | Vikas Publishing House Pvt. Ltd., S. Daryaganj Ansari Road, Delhi |

| | | | | | | |
|---|---|---|---|---|---|---|
| | | ೫. ಬಂಗಾಲಿ | 'ಮಟಿರ್ ತಾನೆ' | ವಿಷ್ಣುಪಾದ ಭಟ್ಟಾಚಾರ್ಯ | ೧೯೭೬ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. ೧೧೦೦೦೧ |
| | | ೬. ಮರಾಠಿ | 'ಅಶೀಧರತೀ ಚೀ ಮಾಯ' | ಶಂ.ಶಾ. ಲೋಕಾಪುರ್ | ೧೯೮೦ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | | ೭. ಗುಜರಾತಿ | 'ಧರತಿ ಖೋಳೆಪಾಚೋವಾಳೆ' | ಪಿ.ವಿ. ಮಂಗಲ್ ವೇಡೇಕರ | ೧೯೮೨ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. ೧೧೦೦೦೧ |
| | | ೮. ಇಂಗ್ಲಿಷ್ | BACK TO THE SOIL | ಪ್ರೊ ಎ.ಎನ್. ಮೂರ್ತಿರಾವ್ | – | ವಿಕಾಸ ಪಬ್ಲಿಷಿಂಗ್ ಹೌಸ್, ಡೆಲ್ಲಿ –೬ |
| | | ೯. ತೆಲುಗು | 'ಮರಳಿ ಸದ್ಯಮ್ಕಿ' | – | – | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | | ೧೦. ಮೈಥಿಲಿ | 'ಮಾಟ ಮಂಗಲ್' | ನವೀನ್ ಚೌಧುರಿ | ೧೯೯೧ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | | ೧೧. ಪಂಜಾಬಿ | 'ಮಿಟ್ಟೀ ದ ಮೋಹ್' | ತಾವಲೀನ್ ಜೋಲಿ | ೧೯೯೧ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | | ೧೨. ಕೊಂಕಣಿ | 'ಮಾತ್ಯೆಚೊ ಮೋಗ' | ಯಶವಂತ ಎಸ್.ಪಾಲೇಕರ್ | ೧೯೯೪ | ಸಾಹಿತ್ಯ ಅಕಾಡೆಮಿ, ನ್ಯೂಡೆಲ್ಲಿ. |
| | | ೧೩. ಇಂಗ್ಲಿಷ್ | 'Return to Earth' | ಪದ್ಮಾರಾಮಚಂದ್ರ ಶರ್ಮ | ೨೦೦೨ | Sahithya Academy, Centre for translation B'lore. |
| ೦೬ | 'ಮೂಕಜ್ಜಿಯ ಕನಸುಗಳು | ೧. ಇಂಗ್ಲಿಷ್ | MOOKAJJI'S VISIONS | ಟಿ.ಎಸ್. ಸಂಜೀವ ರಾವ್ | 1979 | ಐ.ಬಿ.ಎಚ್. ಪ್ರಕಾಶನ, ಗಾಂಧೀನಗರ, ಬೆಂಗಳೂರು –೯ |
| | | ೨. ಹಿಂದಿ | 'ಮೂಕಜ್ಜಿ' | – | ೧೯೭೯ | ಭಾರತೀಯ ಜ್ಞಾನಪೀಠ ಪ್ರಕಾಶನ, 18, Institutional Area, Lodi Road, New Delhi -10003 |
| | | ೩. ಮರಾಠಿ | 'ಮೂಕಜ್ಜೀ' | ಮೀನಾ ವಾಂಗಿಕರ್ | ೧೯೮೦ | ಕಾಂಟಿನೆಂಟಲ್ ಪ್ರಕಾಶನ, ಪುಣೆ. |
| | | ೪. ತಮಿಳು | 'ಪಾಟಿಯನ್ ಕನವುಗಳ್' | ಡಾ। ಟಿ.ಪಿ. ಸಿದ್ಧಲಿಂಗಯ್ಯ | ೧೯೮೧ | ಸೋಮು ನೂಲಗಂ; ಶಾಸ್ತ್ರಿನಗರ, ಅಂಚಲ ಕಟ್ಟಡಂ ಮದ್ರಾಸು –೬೦೦೦೨೦ |
| | | ೫. ಒರಿಯಾ | 'ಬುಡ್ಡಿಮಾ' | ಪಂಡಿತ್ ನೀಲಮಣಿ ಮಿಶ್ರ | ೧೯೮೧ | ಗ್ರಂಥಮಂದಿರ, ಕಟಕ್ –೨ |
| | | ೬. ಮಲೆಯಾಳಂ | 'ಮೂಕಜ್ಜಿಯುಡೆ ಕನವುಗಳ್' | ಡಾ। ಎಮ್. ರಾಮ | ೧೯೮೭ | ಡಿ.ಸಿ. ಬುಕ್ಸ್, ಕೊಟ್ಟಾಯಂ –೬೮೬೦೦೧ |

| | | | | | | |
|---|---|---|---|---|---|---|
| ೧೭. | 'ಮೈಮನಗಳಸುಳಿಯಲ್ಲಿ' | ೧. ಹಿಂದಿ | 'ತನ್‌ಮನ್' | ಬಿ.ಆರ್. ನಾರಾಯಣ್ | ೧೯೮೨ | ಶಬ್ದಾಕಾರ್, ೨೨೦೩ ಡಕೋಸಾನ್ ಗಲ್ಲಿ ತುರ್ಕಮನ್ ಗೇಟ್, ದಿಲ್ಲಿ -೧೧೦೦೦೬ |
| -೩೦ | | ೨. ಮರಾಠಿ | 'ತನಮನಚ್ಯಾ ಭೋವರ್ಯಾಡ್' | ಉಮಾ ಕುಲಕರ್ಣಿ | ೧೯೮೨ | ತೋರಣ ಪ್ರಕಾಶನ ೪೬೧/೩. ಸದಾಶಿವಪೇಟೆ. ಪುಣೆ |
| | | ೩. ಇಂಗ್ಲಿಷ್ | THE WOMAN OF BASRUR | H.Y. Sharada Prasad | ೧೯೯೭ | RAVI DAYAL Publisher, Delhi |
| ೧೮. | 'ಸರಸಮ್ಮನ ಸಮಾಧಿ' | ೧. ಇಂಗ್ಲಿಷ್ | THE SHRINE | ಯು.ಆರ್. ಕಲ್ಕೂರ್ | ೧೯೮೪ | Arnold Heinemann, Arnold Pulishers (India) Pvt.Ltd. N'Delhi -110029 & Lucas Publications, 85, Braisenose, Bankhall, Liverpool L 208. |

ಈ ಮೇಲಿನ ವಿವರಗಳನ್ನು ಗಮನಿಸಿದಾಗ ಕಾರಂತರು ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರಲ್ಲಿ ಒಬ್ಬರಾದರೂ, ವೈಶಿಷ್ಟ್ಯಗಳಿಂದ ಕೂಡಿದ ಕಾದಂಬರಿಗಳ ರಚನೆ ಕಾರಂತರಿಂದ ಆಗಿದ್ದರೂ ಅವರ ಕಾದಂಬರಿಗಳು ಇತರ ಭಾಷೆಗಳಲ್ಲಿ ಪರಿಚಿತವಾದದ್ದು ತುಂಬ ತಡವಾಗಿಯೇ ಎಂಬುದನ್ನು ಗಮನಿಸಬಹುದಾಗಿದೆ.

ಅನ್ಯಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ಶೀರ್ಷಿಕೆಗಳನ್ನು ಅವಲೋಕಿಸಿದಾಗ ಅವು ಮೂಲಕೃತಿಯ ಶೀರ್ಷಿಕೆಗಳೊಂದಿಗೆ ಸಾಮ್ಯತೆಯನ್ನು ಹೊಂದಿವೆಯೇ ಅಥವಾ ಅವು ಭಿನ್ನವಾದ ಧ್ವನಿಯನ್ನು ನೀಡುತ್ತವೆಯೇ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಅನ್ಯಭಾಷೆಗಳಲ್ಲಿ ಭಾಷಾಂತರಗೊಂಡ ಕಾರಂತರ ಕಾದಂಬರಿಗಳನ್ನು ಈ ಕೆಳಗಿನಂತೆ ಒಂದೊಂದಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

**೧. ಅಳಿದ ಮೇಲೆ:**

ಈ ಕಾದಂಬರಿಯು ತೆಲುಗು, ತಮಿಳು, ಮರಾಠಿ, ಮಲೆಯಾಳಂ ಭಾಷೆಗಳ ಅನುವಾದವನ್ನು ಹೊಂದಿದೆ. ತೆಲುಗಿನಲ್ಲಿ 'ಮರಣಾನಂತರಮು', ತಮಿಳಿನಲ್ಲಿ 'ಅಳೀಂದ ಪಿರುಗು', ಮರಾಠಿಯಲ್ಲಿ 'ಮಿಟಲ್ಯಾನಂತರ್' ಹಾಗೂ ಮಲೆಯಾಳಂನಲ್ಲಿ 'ಮರಣತ್ತಿನ್ ಶೇಷಮ್' ಎಂಬ ಶೀರ್ಷಿಕೆಗಳನ್ನು ನೀಡಲಾಗಿದ್ದು ಈ ಎಲ್ಲಾ ಶೀರ್ಷಿಕೆಗಳು ಕನ್ನಡದ ಮೂಲ ಕಾದಂಬರಿಯ ಶೀರ್ಷಿಕೆಯ ಅರ್ಥವನ್ನು ಹೋಲುವ/ಅದೇ ಅರ್ಥವನ್ನು ಧ್ವನಿಸುವಂತಹ ಶೀರ್ಷಿಕೆಗಳಾಗಿವೆ ಎಂಬುದು ಕಂಡುಬರುತ್ತದೆ.

**೨. ಕುಡಿಯರ ಕೂಸು:**

ಈ ಕಾದಂಬರಿಯು ಮಲಯಾಳಂ, ಮರಾಠಿ, ಇಂಗ್ಲಿಷ, ಸ್ಪಾನಿಶ್ –ಈ ನಾಲ್ಕು ಭಾಷೆಗಳಲ್ಲಿ ಅನುವಾದಗೊಂಡಿದೆ. ಮಲಯಾಳಂನಲ್ಲಿ 'ಮಲೆಯುಡೆ ಮಕ್ಕಳ್'[೧] ಎಂದು ಅನುವಾದಗೊಂಡಿದ್ದು (ಕನ್ನಡದಲ್ಲಿ ಇದು 'ಮಲೆಯ ಮಕ್ಕಳು' ಎಂಬ ಹೆಸರಿನೊಂದಿಗೆ ಚಲನಚಿತ್ರವಾಗಿ ಮೂಡಿಬಂದಿದೆ) ಮಲಯಾಳಮ್‌ನಲ್ಲಿ ಈ ಕಾದಂಬರಿಗೆ ನೀಡಿದ ಶೀರ್ಷಿಕೆ ಕನ್ನಡದಲ್ಲಿ ಆದ ಚಲನಚಿತ್ರದ ಶೀರ್ಷಿಕೆಗೆ ಹತ್ತಿರವಾಗಿರುವುದನ್ನು ಕಾಣಬಹುದಾಗಿದೆ. ಮರಾಠಿಯಲ್ಲಿ ಈ ಕಾದಂಬರಿ 'ಕುಡಿಯ' ಎಂಬ ಶೀರ್ಷಿಕೆಯೊಂದಿಗೆ ಅನುವಾದಗೊಂಡಿದ್ದು ಇದು ಇಡಿಯ 'ಕುಡಿಯ' ಜನಾಂಗವನ್ನು ಉದ್ದೇಶಿಸಿ ನೀಡಿದ

---

೧. ಸ್ವತಃ ಶಿವರಾಮ ಕಾರಂತರ ನಿರ್ದೇಶನದಲ್ಲಿ ಈ ಕಾದಂಬರಿಯು 'ಮಲೆಯ ಮಕ್ಕಳು' ಎಂಬ ಹೆಸರಿನ ಚಲನಚಿತ್ರವಾಗಿಯೂ ನಿರ್ಮಾಣವಾಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಶೀರ್ಷಿಕೆಯಂತೆ ಭಾಸವಾಗುತ್ತದೆ. ಇಂಗ್ಲಿಷ್‌ನಲ್ಲಿ ಈ ಕಾದಂಬರಿ `Headman of the Little Hill' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಗೊಂಡಿದೆ. ಇದು ಕುಡಿಯ ಜನಾಂಗವನ್ನು ಪ್ರತಿನಿಧಿಸುವ ಅಥವಾ ಕುಡಿಯರ ಮುಖ್ಯಸ್ಥನ ಕುರಿತಾದ ಕಾದಂಬರಿ ಎಂಬ ಅರ್ಥವನ್ನು ಅಷ್ಟಾಗಿ ನೀಡದೇ 'ಮಲೆ'ಯನ್ನೂ `Little Hill' ಎಂಬುದಾಗಿಯೂ ಮುಖ್ಯಸ್ಥನನ್ನು Headman ಎಂದೂ ಅರ್ಥೈಸಿ ಶೀರ್ಷಿಕೆಯನ್ನು ನೀಡಿರುವುದರಿಂದ 'ಸಣ್ಣ ಬೆಟ್ಟದ ಒಡೆಯ' ಎಂಬ ಅರ್ಥವನ್ನು ಕೊಡುತ್ತದೆ. ಸ್ಪಾನಿಶ್ ಭಾಷೆಯಲ್ಲಿ 'ELCACIQLE DELA PEQUENA `COLINA' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಕಾದಂಬರಿಯು ಅನುವಾದವನ್ನು ಹೊಂದಿದೆ*

**೩. ಚೋಮನದುಡಿ:**

ಕಾರಂತರ 'ಚೋಮನದುಡಿ' ಕಾದಂಬರಿಯು ಹಿಂದಿ, ಮಲೆಯಾಳಂ, ತೆಲುಗು, ಇಂಗ್ಲಿಷ್, ತುಳು, ಒರಿಯಾ, ಮರಾಠಿ ಹಾಗೂ ಕೊಂಕಣಿ –ಈ ಎಂಟು ಭಾಷೆಗಳಲ್ಲಿ ಭಾಷಾಂತರಗೊಂಡಿದೆ. ಅನ್ಯಭಾಷೆಗಳಲ್ಲಿ ಭಾಷಾಂತರಗೊಂಡ ಕಾರಂತರ ಕಾದಂಬರಿಗಳಲ್ಲಿ ಅತಿ ಹೆಚ್ಚು ಇನ್ನಿತರ ಭಾಷೆಗಳಲ್ಲಿ ಭಾಷಾಂತರಗೊಂಡ ಎರಡನೆಯ ಕಾದಂಬರಿ ಇದಾಗಿದೆ. ಭಾಷಾಂತರಿತ ಎಲ್ಲಾ ಭಾಷೆಗಳಲ್ಲಿ ಕೊಂಕಣಿಯ ಅನುವಾದವೊಂದನ್ನು ಬಿಟ್ಟು ಚೋಮನ ಹೆಸರನ್ನು ಶೀರ್ಷಿಕೆಯಲ್ಲಿ ಬಳಸಿಕೊಳ್ಳಲಾಗಿದೆ. ಕೊಂಕಣಿಯ ಅನುವಾದದಲ್ಲಿ ಮಾತ್ರ ಚೋಮನ ಹೆಸರು ಪ್ರಸ್ತಾಪವಾಗದೇ ಇರುವುದನ್ನು ಕಾಣಬಹುದಾಗಿದೆ.

ಹಿಂದಿಯಲ್ಲಿ 'ಚೋಮಕಾ ಧೋಲ್', ಮಲೆಯಾಳಂನಲ್ಲಿ 'ಚೋಮಂಡೆ ತುಡಿ', ತೆಲುಗು ಭಾಷೆಯಲ್ಲಿ 'ಚೋಮುನಿ ಡಪ್ಪು', ಇಂಗ್ಲಿಷ್‌ನಲ್ಲಿ `CHOMA'S DRUM' ತುಳುಭಾಷೆಯಲ್ಲಿ 'ಚೋಮನಕುಡಿ', ಒರಿಯಾ ಭಾಷೆಯಲ್ಲಿ 'ಚೋಮರಾ ಧೋಲಾ', ಮರಾಠಿಯಲ್ಲಿ 'ಚೋಮಾ ಮಹಾರ್' ಹಾಗೂ ಕೊಂಕಣಿಯಲ್ಲಿ 'ಅಂತ್ಯ ನಾಸಲ್ಲೇ ಸೋಪಾಣ್' ಎಂದು ಈ ಕಾದಂಬರಿ ಶೀರ್ಷಿಕೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ.

'ಚೋಮನ ದುಡಿ'ಯಲ್ಲಿ ದುಡಿಯ ಪಾತ್ರ ಬಹಳ ಮಹತ್ವದ್ದಾಗಿದೆ. ಚೋಮನ ಸಮುದಾಯದ ಸಾಂಸ್ಕೃತಿಕತೆಯನ್ನು ಈ ದುಡಿ ಪ್ರತಿನಿಧಿಸುವುದರ ಜೊತೆಗೆ ಕಾದಂಬರಿಯಲ್ಲಿ ಚೋಮ ತನ್ನ ಸುಖದುಃಖಗಳನ್ನು ವ್ಯಕ್ತಪಡಿಸುವ ಒಂದು ಸಾಧನವಾಗಿ, ಒಂದು ಅಭಿವ್ಯಕ್ತಿಮಾಧ್ಯಮವಾಗಿ ದುಡಿಯನ್ನು ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ. ತನ್ನ ನೆಂಟರಿಷ್ಟರೊಡನೆ ಕುಣಿತಮಾಡುವಾಗ ತನ್ನ ಅಸಹಾಯಕತೆ, ಆಕ್ರೋಶಗಳನ್ನು

ಹೊರಹೊಮ್ಮಿಸುವ ಸಾಧನವಾಗಿಯೂ ಚೋಮದುಡಿಯನ್ನು ಮೆಟ್ಟುವುದನ್ನು ಕಾಣುತ್ತೇವೆ. ಹೀಗಾಗಿ ದುಡಿಯಿಲ್ಲದ ಚೋಮ ಅಪೂರ್ಣವಾಗಿ ಭಾಸವಾಗುತ್ತಾನೆ.

ಇನ್ನು ಇಷ್ಟು ಮಹತ್ವದ ಪಾತ್ರವಹಿಸುವ ದುಡಿ ಬೇರೆ ಬೇರೆ ಭಾಷೆಗಳಲ್ಲಿ ಭಾಷಾಂತರಗೊಂಡಾಗ , ಅನ್ಯಭಾಷೆಯಲ್ಲಿ ದುಡಿಗೆ ಸಮಾನವಾಗಿ ಸ್ಪಂದಿಸುವ ಪದ ಸಿಗದೇ ಇರುವ ಸಾಧ್ಯತೆಯೂ ಇದೆ. ದುಡಿಯು ಬದಲಾಗಿ ಬಳಸಿದ ಪದ ಚೋಮನದುಡಿಯು ಕಟ್ಟಿಕೊಡುವ ಭಾವವನ್ನು, ಕಾದಂಬರಿಯಲ್ಲಿ ಅದು ಹೊರಹೊಮ್ಮಿಸುವ ಅರ್ಥವನ್ನು ಅನುವಾದಿತ ಭಾಷೆಯಲ್ಲಿ ಅಷ್ಟೇ ಸಮರ್ಪಕವಾಗಿ ಹೊರಹೊಮ್ಮಿಸದೇ ಹೋಗಬಹುದು. ಅನುವಾದಗೊಂಡ ಭಾಷೆಯಲ್ಲಿ ದುಡಿ ತನ್ನ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಕಳೆದುಕೊಳ್ಳುವ ಅಪಾಯವಂತೂ ಇದ್ದೇ ಇದೆ. ಈ ನಿಟ್ಟಿನಲ್ಲಿ ಅನುವಾದಗೊಂಡ ಭಾಷೆಗಳಲ್ಲಿ ದುಡಿಯ ಬದಲಾಗಿ ಬಳಸಿದ ಪದಗಳನ್ನು ವಿಶ್ಲೇಷಿಸಬಹುದಾಗಿದೆ. ಹಿಂದಿಯಲ್ಲಿ ದುಡಿಯ ಬದಲಾಗಿ 'ಢೋಲ್' ಎಂಬುದಾಗಿಯೂ, ಮಲೆಯಾಳಂಲ್ಲಿ 'ತುಡಿ' ಎಂದೂ, ತೆಲುಗುವಿನಲ್ಲಿ 'ಡಪ್ಪು', ಇಂಗ್ಲಿಷ್‌ನಲ್ಲಿ `DRUM', ತುಳುವಿನಲ್ಲಿ 'ದುಡಿ' ಎಂದೇ ಬಳಸಲಾಗಿದೆ. ಒರಿಯಾ ಭಾಷೆಯಲ್ಲಿ 'ಢೋಲಾ' ಎಂಬ ಪದವನ್ನು ಬಳಸಲಾಗಿದೆ. ಮರಾಠಿ ಅನುವಾದದ ಶೀರ್ಷಿಣೆಯಲ್ಲಿ ದುಡಿಯ ಪ್ರಸ್ತಾಪ ಬರುವುದಿಲ್ಲ. ಬದಲಾಗಿ ಚೋಮಾ ಮಹಾರ್ ಎಂದು ಅನುವಾದಿಸಿದ್ದು –'ಮಹಾರ್' ಎಂದರೆ ಹೊಲೆಯ ಎಂದು ಚೋಮಾ ಮಹಾರ್ ಎಂದರೆ 'ಚೋಮನೆಂಬ ಹೊಲೆಯ' ಅಥವಾ 'ಹೊಲೆಯ ಚೋಮ' ಎಂಬ ಅರ್ಥವನ್ನು ಇದು ಕೊಡುತ್ತದೆ. ಕೊಂಕಣಿಯ ಅನುವಾದದಲ್ಲಿ ಕಾದಂಬರಿಯ ಒಟ್ಟು ಆಶಯವನ್ನು ವ್ಯಕ್ತಪಡಿಸುವ ಶೀರ್ಷಿಕೆಯನ್ನು ಕೊಡುವ ಪ್ರಯತ್ನವನ್ನು ಅನುವಾದಕರು ಮಾಡಿದ್ದು 'ಅಂತ್ಯನಾಸಲ್ಲೇ ಸೊಪ್ಪಾರ' ಅಂದರೆ ಈಡೇರದ ಕನಸು ಎಂಬ ಅರ್ಥವನ್ನು ಕೊಡುವ ಶೀರ್ಷಿಕೆ ಇದಾಗಿದೆ. ತುಳು ಅನುವಾದದಲ್ಲಿ ಮೂಲ ಕಾದಂಬರಿಯ ಯಥಾವತ್ತಾದ ಶೀರ್ಷಿಕೆಯನ್ನೇ ಬಳಸಿಕೊಳ್ಳಲಾಗಿದೆ. 'ಚೋಮನದುಡಿ' ಎಂದೇ ಇದು ಶೀರ್ಷಿಕೆಯನ್ನು ಹೊಂದಿದ್ದು ಕನ್ನಡ ಹಾಗೂ ತುಳುಭಾಷೆಗಳಲ್ಲಿ ಇರುವ ನಿಕಟವಾದ ಸಂಬಂಧವನ್ನು ಇದು ತಿಳಿಸುವುದು ಮಾತ್ರವಲ್ಲದೆ ಸಾಂಸ್ಕೃತಿಕವಾಗಿ ಹಾಗೂ ರಚನಾತ್ಮಕವಾಗಿ ಅತೀ ಹತ್ತಿರದ ಭಾಷೆಯಲ್ಲಿ ಒಂದು ಕೃತಿ ಅನುವಾದಗೊಂಡಾಗ ಅದು ಯಶಸ್ವಿ ಅನುವಾದವಾಗುತ್ತದೆ ಎಂಬುದಕ್ಕೆ ತುಳುವಿನ ಅನುವಾದವೇ ಸಾಕ್ಷಿಯಾಗಿದೆ. ತುಳುವಿನಲ್ಲಿ ಇದನ್ನು ಕೆದಂಬಾಡಿ ಜತ್ತಪ್ಪ ರೈ ಅನುವಾದಿಸಿದ್ದು ಸ್ವತಃ ಕಾರಂತರೇ ಈ ಅನುವಾದವನ್ನು ಓದಿ ನಿಜಕ್ಕೂ ಇದು ಮೂಲಕಾದಂಬರಿಗಿಂತಲೂ ಇನ್ನೂ ಹೆಚ್ಚು

ಯಶಸ್ವಿಯಾಗಿ ಬಂದಿದೆ ಎಂದು ಹರ್ಷವನ್ನು ವ್ಯಕ್ತಪಡಿಸಿದ್ದರೆಂದು ಅವರ ನಿಕಟವರ್ತಿಗಳು ಅಭಿಪ್ರಾಯಪಡುತ್ತಾರೆ. ತುಳು ಭಾಷೆಯಲ್ಲಿಯೂ 'ದುಡಿ'ಗೆ ದುಡಿ ಎಂದೇ ಬಳಸಿರುವುದರಿಂದ ಕನ್ನಡ ಮತ್ತು ತುಳುಭಾಷೆಗಳ ಸಾಮ್ಯ ಮತ್ತು ಸಾಮೀಪ್ಯವನ್ನು ನಮಗೆ ತೋರಿಸಿಕೊಡುತ್ತದೆ. ದ್ರಾವಿಡಭಾಷೆಗಳಿಂದ ಮಲಯಾಳಂ, ತೆಲುಗು, ತುಳು ಈ ಭಾಷೆಗಳಲ್ಲಿ ಚೋಮನದುಡಿ ಅನುವಾದಗೊಂಡಿದ್ದು ಇಲ್ಲಿ ದುಡಿಯ ಬದಲಾಗಿ ಬಳಸಿದ ಮಲೆಯಾಳಂನ 'ದುಡಿ', ತೆಲುಗಿನಲ್ಲಿ 'ಡಪ್ಪು' ಹಾಗೂ ತುಳುವಿನಲ್ಲಿ 'ದುಡಿ' ಇವು ಕನ್ನಡದ 'ದುಡಿ'ಗೆ ಅತೀ ಹತ್ತಿರವಾಗಿ ಸ್ಪಂದಿಸುತ್ತವೆ. ತಮಿಳು ಭಾಷೆಯಲ್ಲಿ ಕಾರಂತರ ಈ ಕಾದಂಬರಿ ಇದುವರೆಗೆ ಅನುವಾದಗೊಂಡಿಲ್ಲ. ಸಹೋದರಭಾಷೆಯಲ್ಲಿ ಅನುವಾದಗೊಂಡಾಗ ಕಾದಂಬರಿಯ ಅತೀ ಹತ್ತಿರದ ಹಾಗೂ ಹೆಚ್ಚು ಸಮರ್ಪಕವಾದ ಅನುವಾದ ಸಾಧ್ಯವಾಗುತ್ತದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

**೪. ಬೆಟ್ಟದ ಜೀವ:**

'ಬೆಟ್ಟದ ಜೀವ' ಕಾದಂಬರಿಯು ಹಿಂದಿಯಲ್ಲಿ ಎರಡು ಬಾರಿ ಹಾಗೂ ಮರಾಠಿಯಲ್ಲಿ ಒಂದು ಬಾರಿ ಅನುವಾದಗೊಂಡ ಕಾದಂಬರಿಯಾಗಿದೆ. ಹಿಂದಿಯಲ್ಲಿ 'ಪಹಾಡಿ ಜೀವ್' ಎಂದು ಒಂದನೇ ಬಾರಿ ಅನುವಾದಗೊಂಡಿರುವ ಈ ಕಾದಂಬರಿ ಎರಡನೇ ಬಾರಿ ಅನುವಾದಗೊಂಡಾಗ 'ಕಾನನ್ ಕೆ ಜೀವ್' ಎಂಬ ಶೀರ್ಷಿಕೆಯನ್ನು ಹೊಂದಿದೆ. ಕನ್ನಡದಲ್ಲಿ 'ಜೀವ' ಎಂಬ ಪದಕ್ಕೆ ಹಿಂದಿಯಲ್ಲಿಯೂ 'ಜೀವ್' ಎಂಬ ಪದ ಲಭ್ಯವಿದ್ದು ಇದು ಕನ್ನಡದ 'ಜೀವ' ಪದದ ಅರ್ಥವನ್ನೇ ನೀಡುತ್ತದೆ. 'ಪಹಾಡಿ' ಎಂಬ ಪದ 'ಬೆಟ್ಟ' ಎಂಬ ಅರ್ಥವನ್ನೇ ನೀಡುತ್ತದೆ. 'ಕಾನನ್' ಎಂದರೆ ಕನ್ನಡದಲ್ಲಿ 'ಕಾಡು' ಎಂಬ ಅರ್ಥವನ್ನು ನೀಡುವುದರಿಂದ ಬೆಟ್ಟ ಹಾಗೂ ಕಾಡು ಇವುಗಳಲ್ಲಿಯ ಸೂಕ್ಷ್ಮವಾದ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ಆದುದರಿಂದ 'ಪಹಾಡಿ ಜೀವ್' ಎಂಬ ಶೀರ್ಷಿಕೆಯೇ ಮೂಲ ಶೀರ್ಷಿಕೆಯನ್ನು ಹೆಚ್ಚಾಗಿ ಹೋಲುವುದನ್ನು ಕಂಡುಕೊಳ್ಳಬಹುದಾಗಿದೆ. ಮರಾಠಿಯಲ್ಲಿ ಈ ಕಾದಂಬರಿಯು 'ಡೋಂಗರಾ ಯೆವಥಾ' ಎನ್ನುವ ಶೀರ್ಷಿಕೆಯನ್ನು ಹೊಂದಿದೆ.

**೫. ಮರಳಿ ಮಣ್ಣಿಗೆ:**

ಕನ್ನಡದ ಲೇಖಕರ ಕಾದಂಬರಿಗಳನ್ನು ಗಮನಿಸಿದಾಗ ಬಹುಶಃ ಇಷ್ಟೊಂದು ಭಾಷೆಗಳಲ್ಲಿ ಅನುವಾದಗೊಂಡ ಇನ್ನೊಂದು ಕಾದಂಬರಿ ಇರಲಾರದು. ಒಟ್ಟು ಹತ್ತು ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿ ಇದಾಗಿದ್ದು ಇಂಗ್ಲಿಷ. ತಮಿಳು. ಮಲೆಯಾಳಂ, ಬಂಗಾಲಿ.

ಮರಾಠಿ, ಗುಜರಾತಿ, ತೆಲುಗು, ಮೈಥಿಲಿ, ಪಂಜಾಬಿ, ಕೊಂಕಣಿ –ಇವೇ ಆ ಹತ್ತು ಭಾಷೆಗಳಾಗಿವೆ. 'ಮೂಕಜ್ಜಿಯ ಕನಸುಗಳು' ಕಾದಂಬರಿ ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಕೃತಿಯಾದರೂ ಅದು ಅನುವಾದಗೊಂಡದ್ದು ಕೇವಲ ಆರುಭಾಷೆಗಳಲ್ಲಿ ಮಾತ್ರ. ಆದರೆ 'ಮರಳಿ ಮಣ್ಣಿಗೆ' ಕಾದಂಬರಿ ಹತ್ತು ಭಾಷೆಗಳಲ್ಲಿ ಅನುವಾದಗೊಂಡಿದ್ದು ಇದು ಇನ್ನಿತರ ಭಾಷೆಗಳ ಓದುಗರನ್ನು ವಿದ್ವಾಂಸರನ್ನು ಅತಿ ಹೆಚ್ಚು ಪ್ರಭಾವಿಸಿದೆ, ಜನಪ್ರಿಯತೆಯನ್ನು ಗಳಿಸಿಕೊಂಡಿದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಇಂಗ್ಲಿಷ್ ಭಾಷೆಯಲ್ಲಿ ಇದು ನಾಲ್ಕು ಬೇರೆ ಬೇರೆ ಶೀರ್ಷಿಕೆಗಳಡಿಯಲ್ಲಿ ಅನುವಾದಗೊಂಡಿರುವು ದನ್ನು ಕಾಣುತ್ತೇವೆ. ಇಂಗ್ಲಿಷ ಭಾಷೆಯ `The Return to the Soil', `The Whispering Earths', `Back to the Soil' ಹಾಗೂ `Return to Earth' ಈ ಶೀರ್ಷಿಕೆಗಳಡಿಯಲ್ಲಿ ಭಾಷಾಂತರಗೊಂಡಿದೆ. ಇವುಗಳಲ್ಲಿ ಎ.ಎನ್. ಮೂರ್ತಿ ರಾವ್ ಅವರು ೧೯೫೫ರಲ್ಲಿ `The Return to the Soil' ಎಂಬ ಶೀರ್ಷಿಕೆಯನ್ನು ಹಾಗೂ `Back to the Soil' ಎಂದು ಇನ್ನೊಂದು ಶೀರ್ಷಿಕೆಯನ್ನು ನೀಡಿ ಎರಡು ಬಾರಿ ಅನುವಾದಿಸಿದ್ದು ಕಂಡುಬರುತ್ತದೆ. ೧೯೭೪ರಲ್ಲಿ ಇದೇ ಕಾದಂಬರಿಯು `The Whispering Earth' ಎಂದು ಅನುವಾದಗೊಂಡಿದೆ. ೨೦೦೨ರಲ್ಲಿ ಪದ್ಮಾರಾಮಚಂದ್ರ ಶರ್ಮ ಇವರು `Return to Earth' ಎಂದು ಅನುವಾದಿಸಿದ್ದಾರೆ. ಒಂದು ಕಾದಂಬರಿಯು ಪಾಶ್ಚಾತ್ಯ ಭಾಷೆಯಾದ ಇಂಗ್ಲಿಷನಲ್ಲಿ ನಾಲ್ಕು ಬಾರಿ ಅನುವಾದಗೊಳ್ಳುವುದರ ಔಚಿತ್ಯವೇನೆಂಬುವುದು ಇಲ್ಲಿ ಗಮನಿಸಬೇಕಾದ ವಿಚಾರವಾಗಿದೆ. 'ಮರಳಿ ಮಣ್ಣಿಗೆ' ಕಾದಂಬರಿ ಎಷ್ಟು ಪ್ರಸಿದ್ಧಿಯನ್ನು ಪಡೆದಿತ್ತೆಂಬುದಕ್ಕೆ ಅದು ಇಂಗ್ಲಿಷನಲ್ಲಿ ನಾಲ್ಕು ಬಾರಿ ಅನುವಾದಗೊಂಡಿರುವುದೇ ಸಾಕ್ಷಿಯಾಗಿದೆ. ಅದೇ ರೀತಿ ಇಂಗ್ಲಿಷ್‌ನಲ್ಲಿ ಎಷ್ಟೇ ಬಾರಿ ಅನುವಾದಗೊಂಡರೂ ಅದು ಮೂಲಕೃತಿಗೆ ಎಲ್ಲಾ ರೀತಿಯಿಂದಲೂ ನಿಷ್ಠವಾಗಿರಲು ಸಾಧ್ಯವಿಲ್ಲ; ಹಾಗಾಗಿಯೇ ಕಾದಂಬರಿಯು ಒಂದೇ ಭಾಷೆಯಲ್ಲಿ ಮತ್ತೆ ಮತ್ತೆ ಅನುವಾದವನ್ನು ಕಾಣುತ್ತದೆ ಎಂಬ ವಾಸ್ತವಾಂಶವೂ ಇದರಿಂದ ಮನವರಿಕೆಯಾಗುತ್ತದೆ.

ಇನ್ನುಳಿದಂತೆ ತಮಿಳು ಭಾಷೆಯಲ್ಲಿ 'ಮಣ್ಣ್ ಮನಿ ತರುಂ' ಎಂದು ಮಲಯಾಳಂನಲ್ಲಿ 'ಮಣಿಲೇಕ್ ಮಡಜ್ಗ್' ಎಂದು, ತೆಲುಗುಭಾಷೆಯಲ್ಲಿ 'ಮರಳಿ ಸದ್ಯಮ್ ಕಿ' ಎಂದು, ಬಂಗಾಲಿಯಲ್ಲಿ 'ಮಟಿಕ್ ತಾನೆ' ಎಂದು, 'ಮರಾಠಿಯಲ್ಲಿ 'ಅಶೀ ಧರತೀ ಚೀ ಮಾಯಾ' ಎಂದು, ಗುಜರಾತಿಯಲ್ಲಿ 'ಧರತಿ ಖೋಳೆ ಪಾಚೋ ವಾಳೆ', 'ಮೈಥಿಲಿ ಭಾಷೆಯಲ್ಲಿ

'ಮಾಟಿ ಮಂಗಲ್' ಎಂದು ಪಂಜಾಬಿನಲ್ಲಿ 'ಮಿಟ್ಟೀದ ಮೋಹ್' ಎಂದು ಹಾಗೂ ಕೊಂಕಣಿಯಲ್ಲಿ 'ಮಾತ್ಯೆಚೊ ಮೋಗ್' ಎಂದು ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ.

ಈಗಾಗಲೇ 'ಚೋಮನದುಡಿ'ಯ ಅನುವಾದದ ವಿಶ್ಲೇಷಣೆಯ ಸಂದರ್ಭದಲ್ಲಿ ವಿವರಿಸಿದ ಹಾಗೆ ದ್ರಾವಿಡ ಭಾಷೆಗಳಾದ ತಮಿಳು, ಮಲಯಾಳಂ, ತೆಲುಗು ಈ ಭಾಷೆಗಳಲ್ಲಿ ನೀಡಿರುವ ಶೀರ್ಷಿಕೆಗಳು ಮೂಲದ ಶೀರ್ಷಿಕೆ 'ಮರಳಿಮಣ್ಣಿಗೆ'ಯ ಅರ್ಥವನ್ನೇ ಹೆಚ್ಚು ಸಮೀಪದಿಂದ ಹೋಲುವುದನ್ನು ಕಾಣಬಹುದಾಗಿದೆ. ಮರಾಠಿಯಲ್ಲಿ ನೀಡಿದ ಶೀರ್ಷಿಕೆ 'ಅಶೀ ಧರತೀ ಚೀ ಮಾಯಾ' ಎಂಬುದು ಕನ್ನಡದಲ್ಲಿ 'ಇದು ಭೂಮಿಯ ಮಾಯೆ' ಎಂಬ ಅರ್ಥವನ್ನು ನೀಡಿದರೆ ಪಂಜಾಬಿಯಲ್ಲಿರುವ 'ಮಿಟ್ಟೀದ್ ಮೋಹ್' ಇದು 'ಮಣ್ಣಿನ ಮೋಹ' ಎಂಬ ಅರ್ಥವನ್ನು ಕೊಡುತ್ತದೆ. ಕೊಂಕಣಿಯಲ್ಲಿ 'ಮಾತ್ಯೆಚೊ ಮೋಗ್' ಅಂದರೆ 'ತಾಯಿಯ ಮೋಹ' ಎಂಬ ಅರ್ಥವನ್ನು ಕೊಡುತ್ತದೆ.

**೬. ಮೂಕಜ್ಜಿಯ ಕನಸುಗಳು:**

ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಕಾದಂಬರಿ ಇದಾಗಿದ್ದು ಒಟ್ಟು ಆರು ಭಾಷೆಗಳಲ್ಲಿ ಇದು ಅನುವಾದಗೊಂಡಿದೆ. ಇಂಗ್ಲಿಷ, ಹಿಂದಿ, ಮರಾಠಿ, ಒರಿಯಾ, ತಮಿಳು, ಮಲೆಯಾಳಂ –ಈ ಆರು ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿ ಇದಾಗಿದೆ. ಇಂಗ್ಲಿಷನಲ್ಲಿ `Mookajji's Visions', ಹಿಂದಿಯಲ್ಲಿ 'ಮೂಕಜ್ಜಿ', ಮರಾಠಿಯಲ್ಲಿ 'ಮೂಕಜ್ಜಿ', ಒರಿಯಾ ಭಾಷೆಯಲ್ಲಿ 'ಬುಡ್ಡಿಮಾ', ತಮಿಳು ಭಾಷೆಯಲ್ಲಿ 'ಪಾಟಿಯನ್ ಕನವುಗಳ್', ಮಲಯಾಳಂನಲ್ಲಿ 'ಮೂಕಜ್ಜಿಯುಡೆ ಕನವುಗಳ್' ಎಂಬ ಶೀರ್ಷಿಕೆಗಳನ್ನು ಹೊಂದಿದ ಕಾದಂಬರಿ ಇದಾಗಿದೆ. ಈ ಕಾದಂಬರಿಯಲ್ಲಿ ಮೂಕಜ್ಜಿಯ ಕನಸುಗಳೇ ಪ್ರಧಾನ ಪಾತ್ರವನ್ನು ವಹಿಸುವುದರಿಂದ ಕನಸುಗಳಿಲ್ಲದ ಮೂಕಜ್ಜಿ ದುಡಿಯಿಲ್ಲದ ಚೋಮನಂತೆ ಅಪೂರ್ಣವಾಗಿ ಓದುಗರಿಗೆ ಭಾಸವಾಗುತ್ತಾಳೆ. ಹಿಂದಿ, ಮರಾಠಿ ಹಾಗೂ ಒರಿಯಾ ಭಾಷೆಗಳಲ್ಲಿ ಈ ಕೃತಿಯ ಅನುವಾದಕ್ಕೆ ನೀಡಿದ ಶೀರ್ಷಿಕೆಗಳು ಮೂಕಜ್ಜಿಯನ್ನಷ್ಟೇ ಪ್ರಸ್ತಾಪಿಸುವುದರಿಂದ, ಕನಸುಗಳನ್ನು ಪ್ರಸ್ತಾಪಿಸುವುದಿಲ್ಲವಾದ್ದರಿಂದ ಈ ಶೀರ್ಷಿಕೆಗಳು ಅಪೂರ್ಣವಾಗಿ ಭಾಸವಾಗುತ್ತವೆ. ಕಾದಂಬರಿಯ ಒಟ್ಟು ಅರ್ಥವನ್ನು ಗ್ರಹಿಸುವಲ್ಲಿ ಕೃತಿಗೆ ನೀಡುವ ಶೀರ್ಷಿಕೆ ಮಹತ್ವದ್ದಾಗಿದ್ದು ಇವು ಒಟ್ಟು ಅರ್ಥವನ್ನು ಗ್ರಹಿಸುವಲ್ಲಿ ವಿಫಲವಾಗುತ್ತವೆ. ಒರಿಯಾ ಭಾಷೆಯಲ್ಲಿ 'ಬುಡ್ಡಿಮಾ' ಎಂದಷ್ಟೇ ನೀಡಿದ್ದು ಕೂಡ ಮೂಲ ಶೀರ್ಷಿಕೆಯಿಂದ ದೂರ ಹೋದಂತೆ ಭಾಸವಾಗುತ್ತದೆ. ಇಲ್ಲಿ ಮೂಕಜ್ಜಿ ಇನ್ನಿತರ ಮುದುಕಿಯರಂತೆ

ಕೇವಲ ಮುದುಕಿಯಾಗಿರದೇ ಐತಿಹಾಸಿಕ, ಪಾರಂಪರಿಕ, ಸಾಂಸ್ಕೃತಿಕ, ಪೂರ್ವಾಪರದ ವಿವೇಚನಾಶಕ್ತಿಯುಳ್ಳ ಮಹತ್ವದ ವ್ಯಕ್ತಿಯಾಗಿರುವುದನ್ನು ಗಮನಿಸಿದಾಗ ಹಾಗೂ ಇಡೀ ಕಾದಂಬರಿ ಅವಳ ವಿಶ್ಲೇಷಣೆಯ ಸುತ್ತಲೂ ಹೆಣೆದ ಕಾದಂಬರಿಯಾಗಿರುವುದರಿಂದ ಕೇವಲ 'ಬುಡ್ಡಿಮಾ' ಎಂದರೆ 'ಅಜ್ಜಿ' ಎಂದು ಕರೆದರೆ ಈ ಶೀರ್ಷಿಕೆ ಸಮರ್ಪಕವಾಗಲಾರದು ಎಂಬ ಅಭಿಪ್ರಾಯ ಮೂಡುತ್ತದೆ.

ಈ ಹಿಂದಿನ ಕಾದಂಬರಿಗಳ ಶೀರ್ಷಿಕೆಯಲ್ಲಿ ಗುರುತಿಸಿದ ಹಾಗೆ ಮೂಲ ಕಾದಂಬರಿಯ ಶೀರ್ಷಿಕೆಯ ಅರ್ಥವು ದ್ರಾವಿಡಭಾಷೆಗಳಲ್ಲಿ ಅನುವಾದಗೊಂಡಿರುವ ಕಾದಂಬರಿಗಳಿಗೆ ನೀಡಿರುವ ಶೀರ್ಷಿಕೆಯನ್ನು ಹೆಚ್ಚು ಹತ್ತಿರದಿಂದ ಹೋಲುತ್ತವೆ ಎಂಬುದು ಈ ಕಾದಂಬರಿಯಲ್ಲಿಯೂ ಕೂಡ ಸಾಬೀತಾಗುತ್ತದೆ. ತಮಿಳು ಭಾಷೆಯಲ್ಲಿ ನೀಡಿದ 'ಪಾಟಿಯನ್ ಕನವುಗಳ್', ಮಲಯಾಳಂನಲ್ಲಿ 'ಮೂಕಜ್ಜಿಯುಡೆ ಕನವುಗಳ್' ಇವು ಕನ್ನಡದ ಶೀರ್ಷಿಕೆಗೆ ಹತ್ತಿರದ ಶೀರ್ಷಿಕೆಗಳಾಗಿವೆ. ತಮಿಳು ಭಾಷೆಯಲ್ಲಿ ನೀಡಿದ ಶೀರ್ಷಿಕೆ 'ಪಾಟಿಯನ್ ಕನವುಗಳ್' –ಇಲ್ಲಿ 'ಪಾಟಿ' ಎಂಬ ಪದಕ್ಕೆ 'ಅಜ್ಜಿ' ಎಂಬ ಅರ್ಥ ಇದ್ದು ಈ ಪದದ ಬದಲಾಗಿ ಮಲಯಾಳಂನಲ್ಲಿ ನೀಡಿದಂತೆ 'ಮೂಕಜ್ಜಿ' ಎಂಬ ಪದವನ್ನೇ ಪ್ರಯೋಗ ಮಾಡಿದ್ದರೆ ಅದು ಇನ್ನಷ್ಟು ಅರ್ಥಪೂರ್ಣವಾಗುತ್ತಿತ್ತು. ಈ ಕಾದಂಬರಿಯ ಶೀರ್ಷಿಕೆಯ ವಿಶೇಷತೆ 'ಮೂಕಜ್ಜಿ' ಎಂದರೆ ಮಾತುಬಾರದ ಅಜ್ಜಿ ಎಂಬ ಅರ್ಥವಿದ್ದರೂ ಕಾದಂಬರಿಯಲ್ಲಿ 'ಮೂಕಜ್ಜಿ' ಮೂಖಳಾಗಿರದೇ ಮಾತನಾಡುವ, ಸಾಕಷ್ಟು ಮಾತನಾಡುವ, ಕನಸುಗಳನ್ನು ವಿಶ್ಲೇಷಿಸುವ, ದಿವ್ಯದೃಷ್ಟಿಯನ್ನು ಕಂಡುಕೊಂಡ ಇತಿಹಾಸದ, ಭೂತದ ಘಟನೆಗಳನ್ನು ವರ್ತಮಾನದಲ್ಲಿ ಬಿತ್ತರಿಸುವ ಭೂತ ಹಾಗೂ ವರ್ತಮಾನದ ಕೊಂಡಿಯಾಗಿ ಮಹತ್ವದ ಪಾತ್ರವನ್ನು ವಹಿಸುತ್ತಾಳೆ. ಹೀಗಾಗಿ ಈ ನಿಟ್ಟಿನಲ್ಲಿಯೂ ಶೀರ್ಷಿಕೆ ಮಹತ್ವದ್ದು ಅನಿಸುತ್ತದೆ.

**೬. ಮೈಮನಗಳ ಸುಳಿಯಲ್ಲಿ:**

ಹಿಂದಿ, ಮರಾಠಿ ಹಾಗೂ ಇಂಗ್ಲಿಷ ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿ ಇದಾಗಿದ್ದು ಕುಂದಾಪುರ ಸಮೀಪದ ಬಸ್ರೂರಿನ ಹಿನ್ನಲೆಯನ್ನು ಕಾದಂಬರಿಯ ವಸ್ತುವನ್ನಾಗಿ ಬಳಸಿಕೊಂಡ ಕಾರಂತರು ವೇಶ್ಯೆಯೊಬ್ಬಳ ಬದುಕಿನಲ್ಲಿ ಮೈಗೆ ಮಾತ್ರ ಮಹತ್ವವನ್ನು ನೀಡದೇ ಅವಳಿಗೂ ಒಂದು ಮನಸ್ಸಿದೆ; ಆ ಮನಸ್ಸಿನ ಸಂತೃಪ್ತಿ ಭಾವವನ್ನು ಹೊಂದಲು ಪಡುವ ಕಾತರ, ತವಕಗಳ ಚಿತ್ರಣವನ್ನು ಕೊಟ್ಟು ಅವಳ ಬದುಕನ್ನು ಅತ್ಯಂತ ಹತ್ತಿರದಿಂದ, ಕಾಳಜಿಯಿಂದ, ಮನುಷ್ಯತ್ವದ ನೋಟದಿಂದ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ

ಕಾದಂಬರಿ ಇದಾಗಿದ್ದು ಮಂಜುಳೆಯ ಬದುಕಿನಲ್ಲಿ ಅವಳ ಮೈ ಮತ್ತು ಮನಗಳ ಸುಳಿಯಲ್ಲಿ ಸಿಲುಕಿ ಹೊರಹೊಮ್ಮುವ ಭಾವಗಳನ್ನು ಕಾಣಬಹುದಾಗಿದೆ. ಇದನ್ನು ಮೂಲಕಾದಂಬರಿಯ ಶೀರ್ಷಿಕೆ ಸಮರ್ಪಕವಾಗಿಯೇ ಅಭಿವ್ಯಕ್ತಿಪಡಿಸುತ್ತದಾದರೂ ಅನುವಾದಗೊಂಡ ಭಾಷೆಗಳಲ್ಲಿ ಇದು ಅಷ್ಟೊಂದು ಸಮರ್ಪಕವಾಗಿ ಮೂಡಿಬಂದಿಲ್ಲ. ಹಿಂದಿಯಲ್ಲಿ 'ತನ್‌ಮನ್' ಎಂದರೆ 'ಮೈ ಮತ್ತು ಮನಸ್ಸು' ಎಂದಷ್ಟೇ ಅರ್ಥವನ್ನು ಕೊಡುತ್ತದೆ. ಮರಾಠಿಯಲ್ಲಿ 'ತನ್‌ಮನಚ್ಯಾ ಭೋವಶ್ಯಾತ್' ಎಂದು ಶೀರ್ಷಿಕೆ ನೀಡಲಾಗಿದ್ದು ಇದು ಬಹುಮಟ್ಟಿಗೆ ಕನ್ನಡಕ್ಕೆ ಹತ್ತಿರವಾಗಿದೆ. ಇಂಗ್ಲಿಷನಲ್ಲಿ `The woman of Basrur' ಎಂದು ಅನುವಾದಗೊಂಡಿದ್ದು ಕನ್ನಡದ 'ಮೈಮನಗಳ ಸುಳಿಯಲ್ಲಿ' ಎಂಬುದು ಒಂದು ಪ್ರಾದೇಶಿಕತೆಯನ್ನು ಮೀರಿದ ಮನುಷ್ಯನ ಮನಸ್ಸಿನ ಹೊಯ್ದಾಟವನ್ನು, ಅದು ಅನುಭವಿಸುವ ವಿವಿಧ ಸ್ಥಿತಿಗತಿಗಳನ್ನು ಅಭಿವ್ಯಕ್ತಿಸುವ ಮನುಷ್ಯ ಪ್ರಪಂಚದ ಎಲ್ಲಾ ಪ್ರದೇಶದವರಿಗೂ ಅನ್ವಯವಾಗುವ ಶೀರ್ಷಿಕೆಯಾಗಿ ಮೂಡಿಬಂದರೆ. `The woman of Basrur' ಎಂಬ ಶೀರ್ಷಿಕೆಯು ಒಂದು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿ ಒಂದು ಮಿತಿಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಹಾಗೂ ಜಾಗತಿಕ ಭಾಷೆಯಾದ ಇಂಗ್ಲಿಷನ ಓದುಗರಿಗೆ ಬಸ್ರೂರು ಎಂಬ ಜಗತ್ತಿನ ಭೂಪಟದಲ್ಲಿ ಅಷ್ಟೇನೂ ಗಮನಸೆಳೆಯದ ಊರನ್ನು ಪ್ರಸ್ತಾಪಿಸಿರುವುದು ಶೀರ್ಷಿಕೆಯಲ್ಲಿನ ಮಿತಿಯನ್ನು ಗುರುತಿಸಬಹುದಾಗಿದೆ ಹಾಗೂ ಮೂಲಕಾದಂಬರಿಯ ಶೀರ್ಷಿಕೆಗೂ ಇಂಗ್ಲಿಷ ಅನುವಾದದ ಶೀರ್ಷಿಕೆಗೂ ಮೇಲ್ನೋಟದಲ್ಲಿ ಯಾವ ಸಂಬಂಧವೂ ಗೋಚರಿಸುವುದಲ್ಲ. ಇನ್ನು ಈ ಕಾದಂಬರಿಯ ಅಥವಾ ಕನ್ನಡದ ಕಾದಂಬರಿಗಳ ಅನುವಾದ ಕನ್ನಡದ ಓದುಗರನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಮಾಡಿದ ಅನುವಾದವೇ? ಅಥವಾ ಕರ್ನಾಟಕದ ಒಳಗಡೆ ಮಾತ್ರ ಇದರ ಓದು ನಡೆಯಬೇಕೆ? ಇಂಗ್ಲಿಷನಂತಹ ಜಾಗತಿಕ ಭಾಷೆಯಲ್ಲಿ ಅನುವಾದಗೊಂಡಾಗ ಇದು ಕರ್ನಾಟಕದ ಗಡಿಯನ್ನು ದಾಟಿ ಜಾಗತಿಕ ಮಟ್ಟದಲ್ಲಿ ಓದು ವಿಮರ್ಶೆಗೆ ಒಳಪಡಬೇಕೆನ್ನುವ ನಿರೀಕ್ಷೆಗಳು ಅನುವಾದಕ್ಕೆ ಬೇಡವೆ? ಎಂಬ ಪ್ರಶ್ನೆಗಳು ಹುಟ್ಟುತ್ತವೆ.

**೮. ಸರಸಮ್ಮನ ಸಮಾಧಿ:**

ಇಂಗ್ಲಿಷ ಅನುವಾದವೊಂದನ್ನು ಬಿಟ್ಟು ಇನ್ನುಳಿದ ಬೇರಾವ ಭಾಷೆಯಲ್ಲೂ ಅನುವಾದವನ್ನು ಇದುವರೆಗೂ ಹೊಂದಿರದ ಕಾದಂಬರಿ ಇದಾಗಿದೆ. ಕನ್ನಡದಲ್ಲಿ 'ಸರಸಮ್ಮನ ಸಮಾಧಿ' ಎಂಬ ಶೀರ್ಷಿಕೆಯನ್ನು ಹೊಂದಿರುವ ಈ ಕಾದಂಬರಿಗೆ ಇಂಗ್ಲಿಷ್‌ನಲ್ಲಿ

`THE SHRINE' ಎಂಬ ಶೀರ್ಷಿಕೆಯನ್ನು ನೀಡಿಲಾಗಿದೆ. ಮೂಲದಲ್ಲಿ ಸರಸಮ್ಮನ ಸಮಾಧಿ ಎಂಬ ಇಡಿಯಾದ ಅರ್ಥವನ್ನು ನೀಡಿದರೆ ಇಂಗ್ಲಿಷನಲ್ಲಿ ಕೇವಲ `THE SHRINE' ಎಂಬುದರಿಂದ ಶೀರ್ಷಿಕೆಯಲ್ಲಿ ಇದು ಇಡಿಯಾದ ಅರ್ಥವನ್ನು ಕಟ್ಟಿಕೊಡುವುದಿಲ್ಲ. `Websters Dictionary'ಯಲ್ಲಿ SHRINE ಎಂಬ ಪದಕ್ಕೆ ಈ ಮುಂದಿನಂತೆ ಅರ್ಥಗಳನ್ನು ನೀಡಲಾಗಿದೆ. 'case in which sacred relics are deposited, tomb of saint, place of workship, any sacred place. ಎ.ಕೆ. ರಾಮಾನುಜನ್ ಅವರು ತಮ್ಮ ವಚನದ ಅನುವಾದದಲ್ಲಿ 'ಶಿರವೇ ಹೊನ್ನಕಳಸವಯ್ಯ' –ಇಲ್ಲಿ 'ಕಳಸ' ಎಂಬ ಪದಕ್ಕೆ 'THE SHRINE' ಎಂದೇ ಬಳಸಿರುವುದನ್ನು ಗಮನಿಸಬಹುದಾಗಿದೆ. ಅನ್ಯಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳ ಶೀರ್ಷಿಕೆಗಳಲ್ಲಿ ಕೆಲವು ಮೂಲದ ಕಾದಂಬರಿಯ ಅನುವಾದದಲ್ಲಿ ಕಟ್ಟಿಕೊಡದೇ ಅದು ಅಪೂರ್ಣ ಎನಿಸುವ ಅಭಿಪ್ರಾಯ ಬರುತ್ತದೆ.

ಕನ್ನಡದ ಇತರ ಕಾದಂಬರಿಗಳಿಗೆ ಹೋಲಿಸಿದಾಗ ಅನ್ಯಭಾಷೆಗಳಿಗೆ ಭಾಷಾಂತರಗೊಂಡ ಕೃತಿಗಳಲ್ಲಿ ಕಾರಂತರ ಕಾದಂಬರಿಗಳೇ ಹೆಚ್ಚು ಎಂಬುದು ಸತ್ಯವಾದರೂ, ಭಾಷಾಂತರಗೊಂಡ ಕಾದಂಬರಿಗಳ ಬಗ್ಗೆ ಹೆಚ್ಚಿನ ವಿಮರ್ಶೆಗಳು ಇದುವರೆಗೂ ಬಾರದೇ ಇರುವುದನ್ನು ಕಾಣಬಹುದಾಗಿದೆ. ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಂಡ ಕಾರಂತರ ಕಾದಂಬರಿಗಳನ್ನು ಅವಲೋಕಿಸಿದಾಗ ಉಳಿದೆಲ್ಲ ಭಾಷೆಗಳಿಗಿಂತ ಮರಾಠಿಯಲ್ಲಿ ಕಾರಂತರ ಹೆಚ್ಚು ಕಾದಂಬರಿಗಳು ಅನುವಾದಗೊಂಡಿವೆ ಎಂಬುದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಕಾರಂತರ ಕಾದಂಬರಿಗಳು ಮರಾಠಿಯಲ್ಲಿ ಕೇವಲ ಅನುವಾದಗೊಂಡಿದ್ದು ಮಾತ್ರವಲ್ಲದೆ ಆ ಅನುವಾದಿತ ಕೃತಿಗಳ ಬಗೆಗೆ ವಿಮರ್ಶೆ ಕೂಡ ಪ್ರಕಟವಾಗಿರುವುದು ಒಂದು ಗಮನಾರ್ಹ ಸಂಗತಿಯಾಗಿದೆ. ವಿಮರ್ಶಕರಾದ ಸುಧಾಕರ ದೇಶಪಾಂಡೆಯವರು ಮರಾಠಿಗೆ ಅನುವಾದಗೊಂಡ ಕಾರಂತರ ಕಾದಂಬರಿಗಳಾದ 'ಚೋಮನದುಡಿ', 'ಮರಳಿಮಣ್ಣಿಗೆ', 'ಬೆಟ್ಟದ ಜೀವ', 'ಅಳಿದ ಮೇಲೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ' ಹಾಗೂ 'ಕುಡಿಯರ ಕೂಸು' –ಈ ಏಳು ಕಾದಂಬರಿಗಳ ಬಗೆಗೆ ವಿಮರ್ಶೆಯನ್ನು ಮಾಡಿರುತ್ತಾರೆ. 'ಕಾರಂತರ ಕಾದಂಬರಿಗಳು ಮಹಾರಾಷ್ಟ್ರಿಯರ ದೃಷ್ಟಿಯಲ್ಲಿ' ಎಂಬ ಶೀರ್ಷಿಕೆಯೊಂದಿಗೆ ವಿರೂಪಾಕ್ಷ ಕುಲಕರ್ಣಿಯವರು ಈ ಎಲ್ಲಾ ವಿಮರ್ಶೆಗಳನ್ನು ಸಂಪಾದಿಸಿ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿರುತ್ತಾರೆ. ಇಂಗ್ಲಿಷನಂತಹ ಜಾಗತಿಕ ಭಾಷೆಗೂ ಭಾಷಾಂತರಗೊಂಡ ಖ್ಯಾತಿ ಕಾರಂತರ ಕಾದಂಬರಿಗಳಿಗಿದ್ದರೂ ಜಾಗತಿಕ ಮಟ್ಟದಲ್ಲಿ

ಅವರಿಗೆ ಹೆಸರು, ಪ್ರಸಿದ್ಧಿಗಳನ್ನು ತಂದುಕೊಟ್ಟರೂ ಅನ್ಯಭಾಷಾ ಸಂದರ್ಭದ ವಿಮರ್ಶಾವಲಯದಲ್ಲಿ ಕಾರಂತರ ಕಾದಂಬರಿಗಳು ಅಷ್ಟಾಗಿ ಪ್ರಭಾವವನ್ನುಂಟುಮಾಡಿಲ್ಲ ಎನ್ನಬಹುದಾಗಿದೆ. ಆದರೆ ಕಾರಂತರ ಕಾದಂಬರಿಗಳ ಬಗ್ಗೆ ಕನ್ನಡದಲ್ಲಿ ಸಾಕಷ್ಟು ವಿಮರ್ಶೆಗಳು ಹೊರಬಂದಿರುವುದನ್ನು ಕಂಡಾಗ ಈ ಅಂಶ ಇನ್ನಷ್ಟು ಮನದಟ್ಟಾಗುತ್ತದೆ. ಅನ್ಯಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ಬಗೆಗೆ ವಿಮರ್ಶೆ ಅಷ್ಟಾಗಿ ನಡೆದಿಲ್ಲ ಎಂಬ ಅಂಶವನ್ನು ಗಮನಿಸಿದರೂ ಮರಾಠಿ ಸಾಹಿತ್ಯದಲ್ಲಿ ಕಾರಂತರ ಕೆಲವು ಕಾದಂಬರಿಗಳ ಕುರಿತಾದ ವಿಮರ್ಶೆ ನಡೆದಿದೆ ಎಂಬುದು ಆಶಾದಾಯಕ ಸಂಗತಿಯಾಗಿದೆ. 'ಚೋಮನದುಡಿ', 'ಮರಳಿಮಣ್ಣಿಗೆ', 'ಬೆಟ್ಟದ ಜೀವ', 'ಅಳಿದಮೇಲೆ', 'ಮೂಕಜ್ಜಿಯ ಕನಸುಗಳು', 'ಮೈಮನಗಳ ಸುಳಿಯಲ್ಲಿ' ಹಾಗೂ 'ಕುಡಿಯರ ಕೂಸು' ಈ ಏಳು ಕಾದಂಬರಿಗಳು ಮರಾಠಿಯಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ.

ಒಟ್ಟಿನಲ್ಲಿ ಕನ್ನಡದ ಶ್ರೇಷ್ಠ ಕಾದಂಬರಿಕಾರರೊಬ್ಬರು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ ಯಾವ ರೀತಿಯಲ್ಲಿ ಅರ್ಥೈಸಲ್ಪಟ್ಟಿದ್ದಾರೆ? ಎಂಬುದನ್ನು ಅರಿಯಲು ಈ ವಿಮರ್ಶೆಗಳು ಸಹಕಾರಿಯಾಗುತ್ತವೆ. ಈ ರೀತಿ ವಿವಿಧ ಭಾಷೆಗಳಿಗೆ ಕಾರಂತರ ವಿವಿಧ ಕಾದಂಬರಿಗಳು ಅನುವಾದಗೊಂಡಿದ್ದಲ್ಲದೆ ಕೆಲವು ಭಾಷೆಗಳಲ್ಲಿ ಅವರ ಕಾದಂಬರಿ ಕುರಿತ ಚಿಂತನೆಯೂ ನಡೆದಿದೆ. ಅವುಗಳಲ್ಲಿ ಮರಾಠಿ ಭಾಷೆಯಲ್ಲಿ ನಡೆದಿರುವ ಚಿಂತನೆಯು ಗಮನಾರ್ಹವೆನಿಸುತ್ತದೆ. ಇದು ಅನ್ಯ ಭಾಷಾವಲಯದಲ್ಲಿ ಕಾರಂತರಿಗಿರುವ ಪ್ರಸಿದ್ಧಿಯ ದ್ಯೋತಕವು ಹೌದು.

ಅನುವಾದ ಕಾರ್ಯ ತುಂಬಾ ಕಾಳಜಿಯಿಂದ ಮಾಡಬೇಕಾದ ಕಾರ್ಯ. ಅನುವಾದದಲ್ಲಿ ಪ್ರಮಾದಗಳಾದಲ್ಲಿ ಅದು ಮೂಲಲೇಖಕನ ಸಾಹಿತ್ಯಕ ವ್ಯಕ್ತಿತ್ವಕ್ಕೆ ಧಕ್ಕೆಯನ್ನುಂಟುಮಾಡುವ ಸಂಭವವಿರುತ್ತದೆ. ಕಾರಂತರ ಕಾದಂಬರಿಗಳ ಮರಾಠಿ ಅನುವಾದವನ್ನು ಓದಿಕೊಂಡ ಮರಾಠಿ ಸಾಹಿತ್ಯದ ವಿಮರ್ಶಕರು ಕಾರಂತರನ್ನು ಟೀಕಿಸಿದ ಸಂದರ್ಭವನ್ನು ಶ್ರೀನಿವಾಸ ಹಾವನೂರು ಅವರು ಉಲ್ಲೇಖಿಸುತ್ತಾರೆ. ಆಗ ಕಾದಂಬರಿಗಳನ್ನು ಮೂಲದಿಂದ ಮರಾಠಿಗೆ ಅನುವಾದಿಸುವಲ್ಲಿ ಅನೇಕ ಪ್ರಮಾದಗಳನ್ನು ಕಂಡರು. ಕೆಲವು ಮೂಲದ ಅರ್ಥವಾಗದೇ ಆದವುಗಳು. ಇನ್ನು ಕೆಲವು ಅನುವಾದದ ನಿಲುಮೆಯಲ್ಲಿಯೇ ತಪ್ಪಿದ್ದರಿಂದ ನುಸುಳಿಕೊಂಡವುಗಳು. ದುರ್ದೈವದ ಸಂಗತಿಯೆಂದರೆ, ಈ ಪ್ರಮಾದಗಳಿಂದಾಗಿ ಬೇರೆ ಮರಾಠಿ ವಿಮರ್ಶಕರು ಕಾದಂಬರಿಗಳನ್ನು ಅಪಾರ್ಥ ಮಾಡಿಕೊಂಡು ಕಾರಂತರನ್ನು ಟೀಕಿಸಿದ್ದುದೂ ಇದೆ....." (ವಿರೂಪಾಕ್ಷ ಕುಲಕರ್ಣಿ

(ಸಂ./ಅನು); 1990; ಪು.)

ಈ ಮೇಲೆ ಪ್ರಸ್ತಾಪಿಸಿದ ಮರಾಠಿಗೆ ಅನುವಾದಗೊಂಡ ಕಾರಂತರ ಕಾದಂಬರಿಗಳನ್ನು ಮರಾಠಿ ವಿಮರ್ಶಕರು ಗುರುತಿಸಿದ ಕ್ರಮವನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

೧. ಚೋಮನದುಡಿ

ಮರಾಠಿ ಶೀರ್ಷಿಕೆ : 'ಚೋಮಾ ಮಹಾರ'

ಅನು: ಶ್ಯಾಮಲತಾ ಕಾಕಡೆ

ಈ ಕೃತಿಯು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ ಕೃತಿ ಎಂಬುದನ್ನು ಗುರುತಿಸಿರುವ ವಿಮರ್ಶಕರು ಕಾರಂತರನ್ನು ಮರಾಠಿಯ ಲೇಖಕರಾದ ಶ್ರೀ ಮ.ಮಾಟೆಯವರೊಂದಿಗೆ ಹೋಲಿಸಿದ್ದಾರೆ. "ಶ್ರೀ ಮ.ಮಾಟೆಯವರಂತೆ" ಮಾನವೀಯ ಕನಿಕರದಿಂದ ಉಪೇಕ್ಷಿತರ ಅಂತರಂಗವನ್ನು ಅರಿಯುವ ಯತ್ನ ಕಾರಂತರದಾಗಿದೆ....." (ಅದೇ. ಪು. ೧೨). ಒಂದು ಪ್ರಾದೇಶಿಕತೆಯನ್ನು ಮೀರಿದ ಗುಣಲಕ್ಷಣಗಳನ್ನು ಗುರುತಿಸುವ ವಿಮರ್ಶಕರು ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯರ ಬದುಕಿನ ಚಿತ್ರಣವನ್ನು ಕಾದಂಬರಿಯಲ್ಲಿ ಕಟ್ಟಿಕೊಡುವ ಸಂದರ್ಭವನ್ನು ವಿಶ್ಲೇಷಿಸುತ್ತ ಮಹಾರಾಷ್ಟ್ರದ ಹೊಲೆಯ ಜನಾಂಗದವರಿಗೂ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಜನಾಂಗದಲ್ಲಿರುವ ಸಾಮ್ಯತೆಯನ್ನು ಗುರುತಿಸುತ್ತಾರೆ. 'ಚೋಮನದುಡಿ'ಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ದಲಿತರ ಊಟ, ತಿಂಡಿ, ಮನರಂಜನೆ, ನಡೆ-ನುಡಿ, ಸ್ವಭಾವ, ಪ್ರತಿಕ್ರಿಯೆಗಳು ಅವರ ಬಾಳು ಹಾಗೂ ಬಾಳಿನ ಮಟ್ಟಗಳ ತಿಳಿಯಾದ ದರ್ಶನವಾಗುತ್ತದೆ. ಮಹಾರಾಷ್ಟ್ರದ ಹೊಲೆಯರಲ್ಲಿ ಇರುವ ರಸಿಕತೆ, ಕಲೆಯ ಚೈತನ್ಯ, ದುಂದುಗಾರಿಕೆ, ಔದಾರ್ಯಗಳಂತಹ ವೈಶಿಷ್ಟ್ಯಗಳು 'ಕರ್ನಾಟಕದ ದಲಿತ ಸಮಾಜದಲ್ಲೂ ಕಂಡುಬರುತ್ತದೆ.... (ಅದೇ. ಪು. ೧೫).

ಕಾದಂಬರಿಯಲ್ಲಿರುವ ನ್ಯೂನತೆಗಳನ್ನು ಕೂಡ ಓದುಗರ ಗಮನಕ್ಕೆ ತರುವ ವಿಮರ್ಶಕರು ಕಾದಂಬರಿಯಲ್ಲಿನ ನಿವೇದನ ಪದ್ಧತಿಯಿಂದಾಗಿ ಓದುಗನಿಗೆ ಅಡ್ಡಿಯನ್ನುಂಟುಮಾಡುತ್ತದೆ ಎಂಬ ಅಂಶವನ್ನು ಎತ್ತಿಹಿಡಿದು ಕಾದಂಬರಿಯ ಕಥಾವಸ್ತು ಬಣ್ಣನೆಗಳಲ್ಲಿ ತೊಡಗಿದ ಓದುಗನಿಗೆ ಏಕಾಗ್ರತೆಯ ಭಗ್ನವಾಗುತ್ತದೆ ಎಂಬ ಅಭಿಪ್ರಾಯಪಡುತ್ತಾರೆ - "ಹೀಗಾಗಿ ನಿವೇದಕ ಹಾಗೂ ಪಾತ್ರಗಳು ಒಬ್ಬರನ್ನೊಬ್ಬರು ಎದುರುಹಾಕಿಕೊಳ್ಳುತ್ತ ಕಾದಂಬರಿಯ

ಮಂಡನೆ ಎರಡು ಮಟ್ಟಗಳಲ್ಲಿ (Two Tier) ಸಾಗಿರುವುದು ಕಲೆಗೆ ಮಾರಕವಾಗಿದೆ" (ಅದೇ ಪು. ೧೯). ನ್ಯೂನತೆಗಳನ್ನು ಗುರುತಿಸುವುದರೊಂದಿಗೆ ಕಾದಂಬರಿಯ ಯಶಸ್ಸನ್ನು ಕೂಡ ಗುರುತಿಸುತ್ತಾರೆ. ಕಾರಂತರು ಚೋಮನೊಂದಿಗೆ ಸಂಪೂರ್ಣವಾಗಿ ಬೆರೆಯುವುದರಿಂದಲೇ ಕಾದಂಬರಿ ಯಶಸ್ಸನ್ನು ಹೊಂದಿದೆ ಎನ್ನುತ್ತಾರೆ. –'ಚೋಮನ ಆಸೆ ಆಕಾಂಕ್ಷೆಗಳಷ್ಟೇ ಅಲ್ಲದೆ ಆತನ ಮನ್ನದಲ್ಲಿಯ ತೀರ ಸೂಕ್ಷ್ಮವಾದ ಚಲನವಲನಗಳು ಕೂಡ ಅವರ ಅನುಭವಕ್ಕೆ ಬರುತ್ತವೆ. ಈ ಅನುಭೂತಿಯೇ 'ಚೋಮನದುಡಿಯ' ಯಶದ ಅಡಿಗಲ್ಲಾಗಿದೆ (ಅದೇ ಪು. ೧೯). ಕಾರಂತರ ಶೈಲಿ ಅನಲಂಕೃತವಾಗಿದ್ದು ನೇರವಾಗಿದೆ ಹಾಗೂ ಕಣ್ಣೆದುರು ಆಶಯವನ್ನಿಟ್ಟುಕೊಂಡು ಬರೆಯುವಂಥದ್ದಾಗಿದೆ. ಕಾದಂಬರಿಯಲ್ಲಿ ಬಳಸಿದ ಗಾದೆಯ ಮಾತುಗಳು ಹಾಗೂ ಜಾಣ್ನುಡಿಗಳು ಹಲವು ಬಾರಿ ಪ್ರತಿಮೆಗಳಾಗಿ ಕೆಲಸಮಾಡುತ್ತವೆ ಎಂಬುದಾಗಿ ಪ್ರತಿಕ್ರಿಯಿಸಿದ್ದಾರೆ.

ಮರಾಠಿ ಲೇಖಕರಾದ ಪ್ರಾ। ಶ್ರೀ ಮ. ಮಾಟೆಯವರೊಂದಿಗೆ ಕಾರಂತರನ್ನು ಹೋಲಿಸಲಾಗಿದೆ. ಹೋಲಿಕೆಯ ಅಂಶಗಳನ್ನು ಈ ರೀತಿಯಾಗಿ ಗುರುತಿಸಲಾಗಿದೆ– "ಈ ಕಾದಂಬರಿಯನ್ನು ಓದುವಾಗ ನಮ್ಮಲ್ಲಿಯ ಪ್ರಾ। ಶ್ರೀ. ಮ. ಮಾಟೆ ಹಾಗೂ ಡಾ। ಶಿವರಾಮ ಕಾರಂತರಲ್ಲಿಯ ಸಾಮ್ಯವು ಕಣ್ಣಿಗೆ ಕಟ್ಟುತ್ತದೆ. ಇವರಿಬ್ಬರೂ 'ಕಂಡದ್ದನ್ನು ಹೇಳಿದೆ' ಎನ್ನುವ ವಾಸ್ತವದ ಪ್ರತ್ಯಕ್ಷ ನಿರೀಕ್ಷಣೆಗೆ ಒತ್ತುಕೊಡುವವರು. ಇಬ್ಬರಿಗೂ ತಂತ್ರದ ಬಡಿವಾರ ಬೇಕಿಲ್ಲ. ಇಬ್ಬರೂ ಉಪೇಕ್ಷಿತರ ವ್ಯಥೆಯನ್ನು ಮಾನವತಾಬುದ್ಧಿ ಹಾಗೂ ಕರುಣಾಭಾವದಿಂದ ಕಂಡುಕೊಂಡವರು. ನಿವೇದಕನ ಪಾತ್ರಗಳಂತೆ ಎಲ್ಲೆಡೆಗಳಲ್ಲಿ ಸಂಚರಿಸುವನು. ಅವನು ಭಾಷ್ಯಕಾರನೂ ಅಹುದು. ಇಬ್ಬರ ಚಿಂತನೆ, ಬರಹಗಳ ಮುಖ ಸಾಮಾಜಿಕತೆಯತ್ತ ಹೊರಳಿದ್ದು, ಇಬ್ಬರೂ ಸಾಮಾಜಿಕ ಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ದುಡಿದವರು (ಅದೇ ಪು: ೨೪).

ಅನುವಾದ ಮಾಡುವುದು ಕಷ್ಟದ ಕೆಲಸವಾಗಿದ್ದು ಅನುವಾದಕರಾದ ಶ್ಯಾಮಲತಾ ಕಾಕಡೆಯವರು 'ಚೋಮನದುಡಿ'ಯ ಮೂಲ ಕಾದಂಬರಿಯ ರಸಗ್ರಹಣವನ್ನು ಅನುವಾದದಲ್ಲೂ ಸಾಧ್ಯವಾಗಿಸಿರುವುದನ್ನು ಶ್ಲಾಘಿಸಲಾಗಿದೆ. ".......ಹಾಗೆ ನೋಡಿದರೆ 'ಚೋಮನದುಡಿ'ಯ ಅನುವಾದದ ಕೆಲಸ ಕಷ್ಟದ್ದು. ಶ್ಯಾಮಲತಾ ಕಾಕಡೆಯವರು ಚೋಮ ಹಾಗೂ ಉಳಿದ ಪಾತ್ರಗಳ ಬಾಯಲ್ಲಿ ಹಳ್ಳಿಯ ಆಡುನುಡಿಯನ್ನು ಹಾಕಿದ್ದಾರೆ. ದಕ್ಷಿಣ ಕನ್ನಡದ ಮಾರಿ ಹೊಲೆಯರು ಆಡುಮಾತಿನ feel ಬೇರೆಯದೇ ಆಗಿರಲಿಕ್ಕೆ ಸಾಕು. ಆದರೆ ಅದಕ್ಕೊಂದು ಪರ್ಯಾಯವನ್ನು ಹುಡುಕುವ ಆವಶ್ಯಕತೆಯಿತ್ತು. ಶ್ಯಾಮಲತಾ

ಕಾಕಡೆಯವರು ಅದನ್ನು ಸರಿಯಾಗಿ ಕಂಡುಹಿಡಿದಿದ್ದಾರೆ. ಒಂದೊಂದು ನುಡಿಗೂ ತನ್ನದೇ ಆದ ವಿಶಿಷ್ಟ ಸಂದರ್ಭಗಳಿರುವುದುಂಟು. ಪದಗಳ ರೂಪ ಹಾಗೂ ಅವುಗಳ ಅರ್ಥಗಳು ಬೇರ್ಪಡಿಸಲಾಗದವುಗಳು. ಹೀಗಾಗಿ ಮೂಲದ ರಸವನ್ನು ಭಾಷಾಂತರದಲ್ಲಿ ಇಳಿಸುವುದು ಅಸಾಧ್ಯವೇ ಸರಿ! ಹೀಗಿದ್ದೂ ದಾಟಲಾಗದ ಈ ಅಡ್ಡಿಯನ್ನು ಶ್ಯಾಮಲತಾ ಕಾಕಡೆಯವರು ತಮ್ಮದೇ ಅದ ರೀತಿಯಲ್ಲಿ ದಾಟಲು ಯತ್ನಿಸಿದ್ದಾರೆ. ಅಂತೆಯೇ ಕಾರಂತರ ಒಂದು ಮಹತ್ವದ ಕಾದಂಬರಿ ಮರಾಠಿಯ ಓದುಗರ ಅಳವಿಗೆ ಬಂದಿದೆಯೆನ್ನಬಹುದು (ಅದೇ ಪು. 24).

**ಮರಳಿಮಣ್ಣಿಗೆ:**

ಮರಾಠಿಶೀರ್ಷಿಕೆ : 'ಅಶೀ ಧರತೀಚೀ ಮಾಯಾ'

ಅನು: ಶ್ರೀ ಶಂ.ಶಾ. ಲೋಕಾಪುರ

ಕಾದಂಬರಿಯು ಪಡೆದುಕೊಂಡ ವಿಶಿಷ್ಟರೂಪವನ್ನು ಈ ರೀತಿಯಾಗಿ ಗುರುತಿಸಲಾಗಿದೆ. '.....ಕೈಗಾರಿಕೆ ಹಾಗೂ ನಗರಗಳ ಪ್ರಭಾವದಿಂದ ದೂರದಲ್ಲಿರುವ ಅಲಕ್ಷಕ್ಕೆ ಗುರಿಯಾದ ಹಳ್ಳಿಯ ಬಾಳಿಗೆ ಪ್ರಾಧಾನ್ಯ ಕೊಟ್ಟಿದ್ದರಿಂದ ಕಾದಂಬರಿಗೆ ಒಂದು ಪರಿಸರ ಕೇಂದ್ರಿತವಾದ ವಿಶಿಷ್ಟರೂಪ ಬಂದಿದೆ' (ಅದೇ. ಪು. ೨೫). ಮೂಲ ಕಾದಂಬರಿಯನ್ನು ಕನ್ನಡ ಸಾಹಿತ್ಯ ವಿಮರ್ಶಕರು ಗುರುತಿಸಿದ ರೀತಿಯಲ್ಲೇ ಮರಾಠಿಯಲ್ಲೂ ಕಾದಂಬರಿಯಲ್ಲಿ ಮೂರು ತಲೆಮಾರುಗಳಲ್ಲಿ ಬದುಕಿನಲ್ಲಿ ಆಗುವ ಮೂರು ಹಂತದ ಬದಲಾವಣೆಗಳ ಸನ್ನಿವೇಶಗಳ ಸಂದರ್ಭಗಳನ್ನು ಗುರುತಿಸಲಾಗಿದೆ– ".....ಈ ಕಾದಂಬರಿಯಲ್ಲಿ ಮೂರು ತಲೆಮಾರುಗಳ ಚಿತ್ರಣವಿದ್ದು ಕಾಲಪ್ರವಾಹದಲ್ಲಿ ಸಾಮಾಜಿಕ ಪರಿವರ್ತನೆ ಹೇಗೆ ನಡೆಯುವುದೆಂಬುದರ ದರ್ಶನವಾಗುತ್ತದೆ....." (ಅದೇ. ಪು. ೨೯). ಕಾದಂಬರಿಯಲ್ಲಿ ಪುರುಷ ಪಾತ್ರಗಳಿಗಿಂತ ಸ್ತ್ರೀಪಾತ್ರಗಳೇ ಹೆಚ್ಚು ರಸವತ್ತಾಗಿ ಮೂಡಿಬಂದಿರುವುದನ್ನು ಕಂಡುಕೊಳ್ಳಲಾಗಿದೆ. ಕಾರಂತರು ಸ್ತ್ರೀಮನದ ಮೂಲಕ ಚಿತ್ರಿಸಿದ ಈ ಪಾತ್ರಗಳು ಮನುಷ್ಯನ ಬದುಕಿನ ದುಃಖಗಳ ಬೇರೆ ಬೇರೆ ಪದರುಗಳನ್ನು ಬಿಡಿಸಿ ತೋರಿಸುವಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬಂದಿವೆ ಎಂಬ ಅಭಿಪ್ರಾಯ ವಿಮರ್ಶಕರದ್ದು. ಕಾದಂಬರಿಯ ಕಟ್ಟಡದಲ್ಲಿ (plot construction) ಕಾದಂಬರಿಯ ಪಾತ್ರಗಳು ಹಾಗೂ ಪ್ರಸ್ತಾಪಿಸಿರುವ ಪ್ರಸಂಗಗಳಲ್ಲಿರುವ ವಿರೋಧ ಹಾಗೂ ಸಾಮ್ಯ ಸಂಬಂಧಗಳನ್ನು ಬಳಸಿಕೊಂಡು ಇಡಿಯ ಕಾದಂಬರಿಯನ್ನು ವಿರೋಧಲಯದಲ್ಲಿ ಕಟ್ಟಿರುವುದನ್ನು ಉದಾಹರಣೆ ಸಹಿತ ವಿವರಿಸಲಾಗಿದೆ. ಐತಾಳರು ಹಾಗೂ ಅವರ ಮಗ ರಾಮ ಈ ಪಾತ್ರಗಳಲ್ಲಿರುವ

ವಿರೋಧಲಯಗಳು ನಾಗವೇಣಿಯ ಚಾಂಚಲ್ಯತೆಯಿಂದ ಕೂಡಿದ ತಾರುಣ್ಯ, ಅವಳು ಪತಿಯಿಂದ ಬಯಸಿದ್ದು ಒಂದಾದರೆ ಅವಳಿಗೆ ದೊರಕಿದ್ದು ಇನ್ನೊಂದು ಎಂಬುದನ್ನು ಉದಾಹರಿಸುವ ವಿಮರ್ಶಕರು ರಾಮನು ಹಳ್ಳಿಯ ಬದುಕನ್ನು ತೊರೆದು ನಗರಕ್ಕೆ ಬಂದಾಗ ಗ್ರಾಮಜೀವನ ಹಾಗೂ ಮಹಾನಗರಗಳ ಜೀವನಗಳಲ್ಲಿನ ವಿರೋಧ ಸಂಬಂಧ ಪ್ರಕಟಗೊಳ್ಳುತ್ತದೆ. ವಿರೋಧ ಸಂಬಂಧದಂತೆ ಸಾಮ್ಯ ಸಂಬಂಧಗಳಿಗೆ ಉದಾಹರಣೆಯೆಂದರೆ ಸರಸ್ವತಿ ಹಾಗೂ ನಾಗವೇಣಿ ಇವರಿಗೆ ಇರುವ ಕೋಡಿಯ ಬಗೆಗಿನ ಸಮನಿಷ್ಠೆ, ರಾಮ ಹಾಗೂ ಜ್ಯೂ ಚಿತ್ರಕರ್ತೆಯಾದ ನೋವಾ ಇವರ ವೃತ್ತಿ-ಪ್ರವೃತ್ತಿಗಳಲ್ಲಿರುವ ಸಾಮ್ಯತೆ, ಐತಾಳರು ಹಾಗೂ ಅವರ ಮೊಮ್ಮಗ ಇವರುಗಳ ಹೆಸರುಗಳಲ್ಲಿರುವ ಸಾಮ್ಯತೆ ಹಾಗೂ ಮೊಮ್ಮಗ ರಾಮ ಅನಂತರದಲ್ಲಿ ತನ್ನ ಅಜ್ಜನ ಬದುಕಿನ ಶೈಲಿಯನ್ನೇ ಒಪ್ಪಿಕೊಳ್ಳುವ ಪ್ರಸಂಗಗಳಲ್ಲಿರುವ ಸಾಮ್ಯತೆಗಳನ್ನು ಗುರುತಿಸಲಾಗಿದೆ.

ಪ್ರಾದೇಶಿಕ ಕಾದಂಬರಿಯೊಂದರ ಆಶಯ ಹಾಗೂ ಆವಿಷ್ಕಾರ ಇವೆರಡರಲ್ಲೂ ಪ್ರಾದೇಶಿಕತೆಯನ್ನು ಉಳಿಸಿಕೊಳ್ಳುವುದು ಮೂಲ ಕಾದಂಬರಿಯಲ್ಲಿ ಮಾತ್ರ ಸಾಧ್ಯವಾಗಬಹುದೇ ಹೊರತು ಅನುವಾದದಲ್ಲಿ ಸಾಧ್ಯವಾಗಲಾರದು ಎಂಬುದಾಗಿ ಅನುವಾದದ ಮಿತಿಯನ್ನು ಹೇಳಲಾಗಿದೆ. "ಮೂಲ ಕಾದಂಬರಿಯಲ್ಲಿ ಇದನ್ನು ಸಾಧಿಸಬಹುದಾದರೂ ಅನುವಾದಿತ ಕಾದಂಬರಿಯಲ್ಲಿ ಇದು ಅಸಾಧ್ಯವಾದ ಮಾತೇ ಸರಿ. ಅನುವಾದದಲ್ಲಿ ಬಹಳಷ್ಟು ಕಳೆದುಹೋಗುತ್ತದೆ. ಮೂಲದ ನುಡಿ, ಪ್ರಾದೇಶಿಕ ಪದಗಳಲ್ಲಿರುವ ಲಯ, ಚೈತನ್ಯ ಅವುಗಳಲ್ಲಿರುವ ನಾದಗಳೆಲ್ಲವೂ ಕಳೆದುಹೋಗುತ್ತದೆ. ಅನುವಾದವೂ ಭಾಷೆಯ ಪ್ರಮಾಣ (standard) ನಾಗರರೂಪವನ್ನು ಕೇವಲ ಒಂದು ಹೊಂದಾಣಿಕೆಯಾಗಿ ಸ್ವೀಕರಿಸುತ್ತದೆ. ಹೀಗಾಗಿ ಅನುವಾದಗೊಂಡ ಪ್ರಾದೇಶಿಕ ಕಾದಂಬರಿಗಳ ಸರ್ವಾಂಗೀಣವಾದ ಆಸ್ವಾದನೆಯು ಇನ್ನಷ್ಟು ಕಷ್ಟದ ಕಾಯಕವಾಗಿಬಿಡುತ್ತದೆ" (ಅದೇ ಪು. ೩೬). ಮೂಲದಷ್ಟೇ ಯಥಾವತ್ತಾಗಿ ಅನುವಾದವನ್ನು ಸೃಷ್ಟಿಸುವುದು ಸಾಧ್ಯವಾಗಲಾರದು ಎಂಬ ವಿಚಾರವನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ. ಅನುವಾದಕ್ಕೆ ಮಿತಿ ಇರುವಂತೆಯೇ ಅನುವಾದದ ವಿಮರ್ಶೆಮಾಡುವ ವಿಮರ್ಶಕರಿಗೂ ಇರುವ ಮಿತಿಯನ್ನು ಈ ರೀತಿಯಾಗಿ ಗುರುತಿಸಿದ್ದಾರೆ: "ಇಂತಹ ಸಂದರ್ಭಗಳಲ್ಲಿ ಕಿಡ್ನಿಯ ಮೂಲಕ ಮೂಲದ ಸಾಹಿತ್ಯಕೃತಿಯ ಭವ್ಯತೆಯನ್ನು ಅಳೆಯಲೆತ್ನಿಸುವುದಷ್ಟೆ ನಮ್ಮ ಕೈಯಲ್ಲಿರುವ ಮಾತು. ಅನುವಾದಗೊಂಡ ಸಾಹಿತ್ಯದಲ್ಲಿ ಇದೊಂದು ತುಂಬಿಬರಲಾಗದ ಕೊರತೆಯೆನ್ನಬಹುದು...." (ಅದೇ. ಪು. ೩೬)

**ಬೆಟ್ಟದ ಜೀವ:**

ಮರಾಠಿ ಶೀರ್ಷಿಕೆ : 'ಡೋಂಗರಾ ಯವಢಾ'

ಅನು : ಸೌ. ಉಮಾ ಕುಲಕರ್ಣಿ

ಮೂಲಕಾದಂಬರಿಯು ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರಭಾವಿಸಿರುವುದನ್ನು ಗುರುತಿಸಲಾಗಿದ್ದು ಕಾದಂಬರಿ ಕನ್ನಡದಲ್ಲಿ ಹನ್ನೊಂದು ಆವೃತ್ತಿಗಳಲ್ಲಿ ಹೊರಬಂದಿರುವುದನ್ನು ಉಲ್ಲೇಖಿಸಲಾಗಿದೆ. 'ಕಂಡದ್ದನ್ನು ಕಂಡಂತೆ ಬರೆದೆ' ಎನ್ನುವ ಕಾರಂತರಿಗೂ ಮರಾಠಿ ಸಾಹಿತ್ಯದಲ್ಲಿನ ವೆಂಕಟೇಶ ಮಾಡಗೂಳಕರ್ ಅವರಿಗೂ ಹೋಲಿಕೆ ಮಾಡಲಾಗಿದೆ. ಕಾದಂಬರಿ ಒಂದು ದೀರ್ಘ ಕತೆಯ ಆಕಾರವನ್ನು ಪಡೆದುಕೊಂಡಿದೆ ಎಂಬ ಅಭಿಪ್ರಾಯ ವಿಮರ್ಶಕರದ್ದು. 'ಬೆಟ್ಟದ ಜೀವ' ಒಂದು ಕಾದಂಬರಿ ಎಂದಿದ್ದರೂ ಅದರ ಆಕಾರವು ಒಂದು ದೀರ್ಘ ಕಥೆಯಷ್ಟೇ ಇದೆ. ಹೀಗೆನ್ನಲು ಕಾರಣವೇನೆಂದರೆ ಒಂದು ಬಾಣದಂತೆ ನೇರವಾಗಿ ಅದು ಮುನ್ನುಗ್ಗುತ್ತಿರುವುದೇ ಆಗಿದೆ. ಅದರಲ್ಲಿ ಉಪಕಥೆಗಳಿಗೆ ಅವಕಾಶವಿಲ್ಲ. ಪಾತ್ರಗಳ ಸಂಖ್ಯೆ ಬೆರಳೆಣಿಸುವಷ್ಟು.. ಅದರ ಸಂಘಟನೆ ಒಂದು ಕೇಂದ್ರದ ಸುತ್ತ ಇದೆ. ಅದರಂತೆಯೇ ಅದು ಒಳ್ಳೆಯ ಪ್ರಮಾಣಬದ್ಧವೂ ಆಗಿದೆ....." (ಅದೇ. ಪು. ೩೯). ಕಾದಂಬರಿ ಪ್ರಾದೇಶಿಕತೆಯಿಂದಲೇ ತುಂಬಿದ್ದು ಪ್ರದೇಶವನ್ನು ಬಿಟ್ಟರೆ ಕಾದಂಬರಿಯ ಬೆನ್ನೆಲುಬೇ ಮುರಿದು ಹೋದೀತು ಎಂಬುದು ಕಾದಂಬರಿಯಲ್ಲಿ ದಟ್ಟವಾಗಿ ಹರಡಿರುವ ಪ್ರಾದೇಶಿಕತೆಯನ್ನು ಗುರುತಿಸಲು ಸಹಾಯಕವಾಗಿದೆ. ಭಾರತದ ಹಳ್ಳಿಯ ಬದುಕಿನ ಜೊತೆಯಲ್ಲಿ ಜಾತಿಜಾತಿಗಳಲ್ಲಿರುವ ಒತ್ತಡಗಳನ್ನು ಕಾದಂಬರಿಯಲ್ಲಿ ಯಶಸ್ವಿಯಾಗಿ ಚಿತ್ರಿಸಲ್ಪಟ್ಟಿರುವುದನ್ನು ಗುರುತಿಸಲಾಗಿದೆ. ತಲೆಮಾರುಗಳ ಸಂಘರ್ಷದ ಚಿತ್ರಣದಿಂದ ಈ ಕಾದಂಬರಿಯು ಹೊರತಾಗಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ. ಕಾರಂತರ ಶೈಲಿಯಲ್ಲಿರುವ ವಿಶಿಷ್ಟತೆಯನ್ನು ವಿಮರ್ಶಕರು ಗುರುತಿಸಿರುವುದು ಈ ರೀತಿಯಾಗಿದೆ. "....ಕಾರಂತರ ಶೈಲಿಯು ಬೆರಗುಗೊಳಿಸುವಷ್ಟು ಚಿತ್ರದರ್ಶಿಯಾಗಿದೆ. ಚಿಕ್ಕಪುಟ್ಟ ವಿವರಗಳನ್ನು ಕೊಡುತ್ತ ಹೋಗುವುದರಿಂದಾಗಿ ಘಟನೆ ಹಾಗೂ ಪ್ರಸಂಗಗಳ ಸರಿಯಾದ Feel ಗೊತ್ತಾಗುತ್ತದೆ......" (ಅದೇ ಪು. ೪೮). ಕಾದಂಬರಿಯಲ್ಲಿ ಬರುವ ಸಂವಾದಗಳು ಜೀವನ ಸದೃಶತೆಯನ್ನು ತಳೆಯುವ ಬಗೆಯನ್ನು, ಅನುಭವವನ್ನು ಅರ್ಥೈಸಿ ವಿವರಿಸುವ ಕಾರಂತರ ಮನೋಧರ್ಮವನ್ನು ಈ ಕಾದಂಬರಿಯಲ್ಲಿಯೂ ಗುರುತಿಸುವಲ್ಲಿ ವಿಮರ್ಶಕರು ಯಶಸ್ವಿಯಾಗಿದ್ದಾರೆ. 'ಬೆಟ್ಟದ ಜೀವ' ಕಾದಂಬರಿಗೂ ಗ್ರೀಕ್ ನಾಟಕಗಳಿಗೂ ತುಲನೆ ಮಾಡಿ ಇವೆರಡರಲ್ಲಿರುವ ಸಾಮ್ಯತೆಗಳನ್ನು ಗುರುತಿಸಲಾಗಿದೆ: ".....ಗ್ರೀಕ್ ನಾಟಕಗಳಲ್ಲಿರುವಂತೆ

ಸ್ಥಳ, ಕಾಲ ಹಾಗೂ ಕೃತಿಯ ಐಕ್ಯವು 'ಬೆಟ್ಟದ ಜೀವ'ದಲ್ಲಿರುವುದನ್ನು ಕಾಣಬಹುದು. ಇದನ್ನು ಈ ಕಾದಂಬರಿಯು ರೂಪುರೇಷೆಯು ಒಂದು ಅಸಾಧಾರಣವಾದ ವಿಶಿಷ್ಟತೆಯೆನ್ನಬಹುದಾಗಿದೆ....." (ಅದೇ ಪು. ೫೦).

ಕಾದಂಬರಿಯಲ್ಲಿಯ ಕಥಾವಸ್ತುವಿನ ಕೊರತೆಯನ್ನು ವಿಮರ್ಶಕರು ಗುರುತಿಸಿದ್ದಾರೆ. ಆ ಕೊರತೆಯನ್ನು ಹೇಗೆ ನಿವಾರಿಸಬಹುದಿತ್ತು ಎಂಬುದನ್ನು ವಿಮರ್ಶಕರು ಹೇಳುವುದು ಹೀಗೆ: "ಸರಿ ಕಾಣದ ಒಂದು ಸಂಗತಿಯನ್ನು ಕುರಿತು ಇಲ್ಲಿ ಹೇಳಬೇಕು. ಅದೆಂದರೆ ಒಬ್ಬ ಕಲಾವಿದರಾದ ಕಾರಂತರು ಗೋಪಾಲಯ್ಯನವರ ಮಗನನ್ನು ಕಂಡುಹಿಡಿಯುವ ಕೆಲಸವನ್ನು ದಾರಿತಪ್ಪಿ ಅಲ್ಲಿಗೆ ಬಂದ ಶಿವರಾಮಯ್ಯ ಮಾಡುತ್ತಾನೆಂಬುದನ್ನು ತೋರಿಸುವ ಮೋಹದಲ್ಲಿ ಬೀಳುವುದನ್ನು ತಪ್ಪಿಸಬೇಕಿತ್ತು....." (ಅದೇ. ಪು. ೫೧).

**ಅಳಿದಮೇಲೆ:**

ಮರಾಠಿ ಶೀರ್ಷಿಕೆ : 'ಮಿಟಲ್ಯಾನಂತರ'

ಅನು : ಶ್ರೀ ಕೇಶವ ಮಹಗಾಂವಕರ್

ಗಮನಿಸಬೇಕಾದ ಅಂಶವೆಂದರೆ ಮರಾಠಿಗೆ ಅನುವಾದಗೊಂಡು ಸುಮಾರು ೯ ವರ್ಷಗಳ ನಂತರ ಇದರ ವಿಮರ್ಶೆ ನಡೆದದ್ದು. ವಿವಿಧ ಹಂತಗಳಲ್ಲಿ ಕಾದಂಬರಿಯನ್ನು ವಿಮರ್ಶೆಗೊಡ್ಡಿ ಕಾದಂಬರಿಯ ಒಟ್ಟು ತಾತ್ಪರ್ಯವನ್ನು ಕಂಡುಕೊಳ್ಳುವುದು ಹೀಗೆ: "ಮಾನವನ ಕ್ಷಣಭಂಗುರವಾದ ಬದುಕಿನಲ್ಲಿ 'ಅಳಿದಮೇಲೆ' ಕೊನೆಗೆ ಉಳಿಯುವುದು ಏನೆಂಬುದನ್ನು ಶಿವರಾಮ ಕಾರಂತರು ಈ ಕಾದಂಬರಿಯಲ್ಲಿ ಕಂಡುಹಿಡಿಯಲು ಯತ್ನಿಸಿದ್ದಾರೆ .(ಅದೇ ಪು: 52). ಕಾದಂಬರಿಯನ್ನು ಬಾಡಿ ಮುದುಡಿರುವ ಹೂವಿಗೆ ಹೋಲಿಸಿ ಅದು ಅರಳುತ್ತಿರುವಾಗ ಕಂಡ ಬಗೆ ಹೇಗಿರಬಹುದೆಂಬುದನ್ನು ಹುಡುಕುವ ಪ್ರಯತ್ನವನ್ನು ಕಾರಂತರು ಮಾಡಿದ್ದಾರೆ ಎಂಬ ಅಭಿಪ್ರಾಯ ವಿಮರ್ಶಕರದ್ದು. ಕಾದಂಬರಿಯಲ್ಲಿ ವಿರುದ್ಧ ದಿಕ್ಕಿನ ಪಯಣವನ್ನು ಗುರುತಿಸುತ್ತ– "......ಇದೊಂದು ನೆನಪುಗಳನ್ನು ಕಲೆಹಾಕುತ್ತ ಕೊನೆಯಿಂದ ಮೊದಲಿನತ್ತ, ಅಂತ್ಯದಿಂದ ಆರಂಭದತ್ತ ಹೊರಟ ವಿರುದ್ಧ ದಿಕ್ಕಿನ ಪಯಣವಾಗಿದೆ" (ಅದೇ. ಪು. ೫೩). ಭಾರತೀಯತೆಯನ್ನು ಭಾರತದ ಎಲ್ಲಾ ರಾಜ್ಯಗಳಲ್ಲೂ ಕಾಣಬಹುದು ಎಂದು ಸೂಕ್ಷ್ಮವಾಗಿ ಮಹಾರಾಷ್ಟ್ರ, ಕರ್ನಾಟಕ ರಾಜ್ಯಗಳ ಮಾನವ ಬದುಕಿನ ಚಿತ್ರಣಗಳು ಸಾಮ್ಯತೆ – ಏಕರೂಪತೆಗಳಿಂದಲೇ ಕೂಡಿವೆ ಎಂಬ ವಿಚಾರವನ್ನು ಹೊರಹಾಕಿದ್ದಾರೆ: "ಹಳ್ಳಿಯ ಚಿತ್ರಗಳಿಂದಾಗಿ ಆಶಯ

ಹಾಗೂ ಆವಿಷ್ಕಾರಗಳ ಎರಡೂ ಬದಿಗಳಿಂದ ಈ ಕಾದಂಬರಿಯ 'ಭಾರತೀಯತ್ವದ' ಸಂಸ್ಕಾರವು ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಕರ್ನಾಟಕ, ಬಂಗಾಲ ಇಲ್ಲವೇ ಮಹಾರಾಷ್ಟ್ರವೇ ಆಗರಲಿ ಅವುಗಳ ಮೇಲು ಹೊದಿಕೆಯನ್ನು ತುಸು ಬದಿಗೆ ಸರಿಸಿದರೆ ಇಡಿಯ ನಮ್ಮ ದೇಶದ ಚಹರೆ ಒಂದೇ ಆಗಿರುವುದನ್ನು ಕಾಣಬಹುದು. ಕಾದಂಬರಿಯಲ್ಲಿ ಮಾನವನ ಜಿಗುಟುತನ, ಅವನ ಸಹನೆ, ಐಹಿಕತೆಗಿಂತ ಪಾರಲೌಕಿಕದ ಒಲವು, ಒತ್ತು; ಇವುಗಳ ಜತೆಗೆ ಮಾನವನ ಅಸ್ತಿತ್ವದ ಕ್ಷಣಭಂಗುರತೆ; ಎಲ್ಲವೂ ಮಾಯೆ, ಹಣೆಬರಹವನ್ನು ತಪ್ಪಿಸಲಾಗದು; ಕರ್ಮಫಲವನ್ನು ಅನುಭವಿಸಲೇ ಬೇಕು ಎಂಬ ಮುಂತಾದ ವಿಚಾರಗಳು ಬಂದಿವೆ....." (ಅದೇ ಪು. ೬೭). ಮನುಷ್ಯನ ಬದುಕಿನ ಈ ಮೇಲಿನ ಚಿತ್ರಣಗಳು ವಿವಿಧ ರಾಜ್ಯಗಳಲ್ಲಿ ವಾಸಿಸುವ, ಬದುಕಿ ಬಾಳುವವರ ಚಿತ್ರಣಗಳಾಗಿರುವುದರಿಂದ ಅವರಲ್ಲಿರುವ ಸಾಮ್ಯತೆಗಳನ್ನು ಗುರುತಿಸಿದ್ದಾರೆ.

ಕಾರಂತರು ತಮ್ಮ ಕಾದಂಬರಿಗಳಲ್ಲಿ ಬಳಸುವ ಭಾಷೆ ಅನಲಂಕೃತವಾದುದು ಮತ್ತು ಆಶಯಕ್ಕೆ ಒಂದು ಒಳ್ಳೆಯ ಆಕಾರವನ್ನು ಕೊಟ್ಟಲ್ಲಿ ತನ್ನ ಕೆಲಸವಾಯಿತೆಂದು ಅದು ಬಗೆಯುತ್ತದೆ ಎಂದು ಹೇಳುವ ವಿಮರ್ಶಕರು ಓದುಗರಿಗೆ ಇದರ ಬಿಡಿಬಿಡಿಯಾದ ಅನುಭವವೇ ಆಗುವುದಿಲ್ಲ ಎಂಬ ಅಭಿಪ್ರಾಯವನ್ನು ಪಡುತ್ತಾರೆ. ಕಾರಂತರ ಭಾಷೆಯಲ್ಲಿ ಪಾರದರ್ಶಕತೆಯನ್ನು ಗುರುತಿಸಿದ್ದಾರೆ.

ಕಾದಂಬರಿ ಓದುಗರ ಮೇಲೆ ಬೀರುವ ಒಟ್ಟು ಪರಿಣಾಮವನ್ನು ಹೀಗೆ ವಿವರಿಸಲಾಗಿದೆ: "......'ಅಳಿದಮೇಲೆ' ಈ ಕಾದಂಬರಿಯನ್ನು ಓದಿಯಾದ ಬಳಿಕ 'ಕಾವ್ಯಾರ್ಥರಾದ' ಕಾರಂತರ ಮನದಲ್ಲಿ ಇರುವ ಆಶಯವೇ ಓದುಗರ ಮನದಲ್ಲಿ ಇಳಿದುಬರುತ್ತದೆ ಎನ್ನಬಹುದು. ಯಶವಂತರಾಯನ ದಿನಚರಿಯ ರೂಪದಲ್ಲಿ ಅವರ ಪಾಲಿಗೆ ದೊರಕಿದ ಹೊಂಬೆಳಕು ಓದುಗರ ಪಾಲಿಗೂ ಬರುತ್ತದೆ...." ಕಲಾವಂತನ ಅನುಭವ ಹಾಗೂ ಓದುಗರ ಅನುಭವಗಳು ಇಲ್ಲಿ ಒಂದಾಗುತ್ತವೆ..." (ಅದೇ ಪು. ೬೯). ಮೇಲಿನ ಮಾತುಗಳನ್ನು ಆದರಿಸಿ ಕಾರಂತರ 'ಅಳಿದ ಮೇಲೆ' ಕಾದಂಬರಿ ಮರಾಠಿಯ ಓದುಗರನ್ನು ತಲುಪುವಲ್ಲಿ ಸಫಲವಾಗಿದೆ ಹಾಗೂ ಮೂಲಕೃತಿಯ ಅನುವಾದವೂ ತಕ್ಕಮಟ್ಟಿಗೆ ಸಮರ್ಪಕವಾಗಿಯೇ ನಡೆದಿದೆ ಎನ್ನಬಹುದಾಗಿದೆ.

**ಮೂಕಜ್ಜಿಯ ಕನಸುಗಳು:**

ಮರಾಠಿ ಶೀರ್ಷಿಕೆ : 'ಮೂಕಜ್ಜಿ'

ಅನು : ಮೀನಾ ವಾಂಗೀಕರ

ಶಿವರಾಮ ಕಾರಂತರ ಒಟ್ಟು ಕಾದಂಬರಿಗಳಲ್ಲಿ 'ಮೂಕಜ್ಜಿಯ ಕನಸುಗಳು' ಕಾದಂಬರಿಗೆ ವಿಶೇಷವಾದ ಸ್ಥಾನವಿದೆ ಎಂದು ಅಭಿಪ್ರಾಯಪಡಲಾಗಿದೆ. ಇದರ ವಿಶೇಷತೆಯನ್ನು ಗುರುತಿಸುವ ವಿಮರ್ಶೆಯ ಆರಂಭದಲ್ಲಿನ ಈ ಮಾತುಗಳನ್ನು ಗಮನಿಸಬಹುದಾಗಿದೆ: "ಡಾ। ಶಿವರಾಮ ಕಾರಂತರ ಒಟ್ಟು ಕಾದಂಬರಿಗಳಲ್ಲಿ 'ಮೂಕಜ್ಜಿಯ ಕನಸುಗಳು' ಸ್ಥಾನವು ಅನನ್ಯ ಅಸಾಧಾರಣವಾದುದು....." (ಅದೇ. ಪು. ೭೦).

ಸಂಸ್ಕೃತಿಯ ಬಗೆಗಿನ ಕುರಿತಾದ ಚರ್ಚೆ ಈ ಕಾದಂಬರಿಯಲ್ಲಿ ನಡೆದಿರುವುದನ್ನು ವಿಮರ್ಶಕರ ಈ ಮಾತುಗಳು ಸ್ಪಷ್ಟಪಡಿಸುತ್ತವೆ. "......ನಾಲ್ಕೈದು ವರ್ಷಗಳಿಂದ ನಡೆದುಬಂದ ಸಂಸ್ಕೃತಿ ಹಾಗೂ ಅದರಿಂದಾಗಿ ಹುಟ್ಟಿಕೊಂಡ ಸಮಸ್ಯೆಗಳ ಮಂಥನ 'ಮೂಕಜ್ಜಿಯ ಕನಸುಗಳಲ್ಲಿದೆ' (ಅದೇ. ಪು. ೭೧). ಮಹಾರಾಷ್ಟ್ರದ ಮಹಾತ್ಮಾ ಜ್ಯೋತಿಬಾ ಫುಲೆಯವರೊಂದಿಗೆ ಡಾ। ಶಿವರಾಮ ಕಾರಂತರನ್ನು ಹೋಲಿಸಲಾಗಿದೆ. ಸಮಾಜದಲ್ಲಿ ಬೇರುಬಿಟ್ಟಿರುವ ಪಂರಪರಾಗತವಾಗಿ ಬೆಳೆದುಬಂದಿರುವ ಕೆಲವು ಕಲ್ಪನೆಗಳನ್ನು ಕೆದಕಿ ಅದರಲ್ಲಿರುವ ಸತ್ಯಾಸತ್ಯತೆಯನ್ನು ಹುಡುಕುವ ಪ್ರಯತ್ನ ಈ ಕಾದಂಬರಿಯ ಮೂಲಕ ನಡೆದಿದೆ ಎಂಬುದಾಗಿ ಕಾದಂಬರಿಯ ಆಶಯವನ್ನು ಗುರುತಿಸಲಾಗಿದೆ: "....ಡಾ। ಕಾರಂತರು ಮೂಕಜ್ಜಿಯ ಈ ಪಾತ್ರದ ಮೂಲಕ ಆಳವಾಗಿ ಬೇರೂರಿದ ಪರಂಪರೆಯ ಈ ಕಲ್ಪನೆಗಳನ್ನು ಕೆಣಕುತ್ತಿದ್ದಾರೆ. ಅಲ್ಲದೆ ಆಳವಾಗಿ ಬೇರೂರಿದ ಈ ವಿಚಾರಧಾರೆಗಳನ್ನು ಅವರು ಪುಟಕ್ಕಿಟ್ಟು ಅಪರಂಜಿಯೇನಾದರೂ ಕೈಗೆ ಹತ್ತುವುದೋ ಎಂಬುದನ್ನು ಕಂಡುಕೊಳ್ಳಲು ಹವಣಿಸಿದ್ದಾರೆ. ಮಹಾರಾಷ್ಟ್ರದಲ್ಲಿ ಮಹಾತ್ಮಾ ಜ್ಯೋತಿಬಾಫುಲೆಯವರು ಸುಮಾರು ಒಂದುನೂರು ವರ್ಷಗಳ ಮೊದಲು ಬರೆದ ತಮ್ಮ ಗ್ರಂಥಗಳಿಂದ 'ಗುಲಾಮಗಿರಿ' ಹಾಗೂ 'ಬ್ರಹ್ಮಣಾಂಚೀ ಕಸಬ'(ಹಾರುವರ ಚಾತುರ್ಯ)ಗಳಲ್ಲಿ ನೆಲೆನಿಂತ ನಂಬಿಕೆಗಳಿಗೆ ತಮ್ಮ ಕಲ್ಪನಾವಿಲಾಸದಿಂದಲೇ ಹೇಗೆ ಏಟು ಕೊಟ್ಟಿದ್ದರೆಂಬುದನ್ನು ಇಲ್ಲಿ ನೆನಸಿಕೊಳ್ಳಬಹುದು....." (ಅದೇ ಪು. ೭೧).

ಕಾರಂತರ ಪೂರ್ಣಪ್ರಮಾಣದ ವ್ಯಕ್ತಿತ್ವವನ್ನು 'ಮೂಕಜ್ಜಿಯ ಕನಸುಗಳು' ಕಾದಂಬರಿ ಪ್ರಕಟಪಡಿಸುತ್ತದೆ ಎಂಬ ಅಭಿಪ್ರಾಯಪಡುವ ವಿಮರ್ಶಕರು ಕಾರಂತರು ತಮ್ಮ ವಿಚಾರಲಹರಿಗಳು ಅವರ ಮನೋಧರ್ಮ, ದೃಷ್ಟಿಕೋನಗಳನ್ನು ಹೊರಗೆಡಹುವುದರ ಮೂಲಕ ಪೂರ್ಣ ಪ್ರಮಾಣದಲ್ಲಿ ಪ್ರಕಟಗೊಂಡಿದ್ದಾರೆ ಎಂದಿದ್ದಾರೆ. ಮರಾಠಿ ಲೇಖಕರಾದ ಹ.ನಾ. ಆಪ್ಟೆ ಮತ್ತು ಕಾರಂತರ ನಡುವೆ ಇರುವ ಸಾಮ್ಯತೆಯನ್ನು ಗುರುತಿಸಲಾಗಿದೆ.

ಹ.ನಾ. ಆಪ್ಟೆಯವರ 'ಗಣಪತರಾವ್' ಕೃತಿಯನ್ನು ಕಾರಂತರ ಈ ಕಾದಂಬರಿಯೊಂದಿಗೆ ತುಲನೆ ಮಾಡಲಾಗಿದೆ. 'ಮೂಕಜ್ಜಿಯ ಕನಸುಗಳು' ಕಾದಂಬರಿ ಹೇಗೆ ಕಾರಂತರ ವ್ಯಕ್ತಿತ್ವವನ್ನೇ ಪ್ರತಿನಿಧಿಸುತ್ತದೆ ಎಂಬುದನ್ನು ವಿಶ್ಲೇಷಿಸುತ್ತ: "ಕೆಲವು ಲೇಖಕರು ಮಾತ್ರ ತಮ್ಮ ಬಾಳಿನ ಸಂಜೆಯಲ್ಲಿ ಅಪ್ರತ್ಯಕ್ಷವಾಗಿ ಆತ್ಮಾಚಿತ್ರಣವನ್ನು ಮಾಡಲು ಯತ್ನಿಸುತ್ತಾರೆ. 'ಮೂಕಜ್ಜಿಯ ಕನಸು'ಗಳಲ್ಲಿ ಕಾರಂತರ ಮನೋಧರ್ಮ ಹಾಗೂ ದೃಷ್ಟಿಕೋನಗಳು ಹೆಜ್ಜೆಹೆಜ್ಜೆಗೂ ಕಂಡುಬರುತ್ತವೆ. ತಮ್ಮ ಪ್ರಗಲ್ಭ ಹಾಗೂ ಪರಿಣತ ಪ್ರಾಜ್ಞವಾದ ವಯಸ್ಸಿನಲ್ಲಿ ಬರೆದ (ಬಾಳಿನ ಏಳನೆಯ ದಶಕದಲ್ಲಿ) ಈ ಕಾದಂಬರಿಯ ಮೂಲಕ ಕಾರಂತರು ಪೂರ್ಣಾಂಶದಲ್ಲಿ ಪ್ರಕಟಗೊಂಡಿದ್ದಾರೆ. ಮಾನವತಾವಾದಿ, ವ್ಯಾವಹಾರಿಕ (pragmatic), ಬುದ್ಧಿವಾದಿ, ಕರುಣಾಮಯತೆಯಂತಹ ಬದಿಗಳಿಂದ ಕೂಡಿ ಅನುಭವಸಂಪನ್ನವಾದ ಅವರ ವ್ಯಕ್ತಿತ್ವವು 'ಮೂಕಜ್ಜಿಯ ಕನಸುಗಳ'ಲ್ಲಿ ವ್ಯಕ್ತಗೊಂಡಿದೆ...." (ಅದೇ. ಪು. ೭೨). ಕಾರಂತರ ವ್ಯಕ್ತಿತ್ವದ ವಿಶೇಷತೆಯನ್ನು ಈ ರೀತಿಯಾಗಿ ಗುರುತಿಸಲಾಗಿದೆ. ಮಾನವನ ಬಾಳಿಗೆ ಆಕಾರವನ್ನು ಕೊಡುವ ವಿಚಾರ ಪ್ರಣಾಳಿಯತ್ತ ಚಿಕಿತ್ಸಕ ದೃಷ್ಟಿಯಿಂದ ನೋಡುವುದೇ ಈ ಕಾದಂಬರಿಯ ಗುರಿ ಎಂಬುದಾಗಿ ಅಭಿಪ್ರಾಯಪಡಲಾಗಿದೆ.

ಕಾದಂಬರಿಯಲ್ಲಿ ನಮ್ಮ ದೇಶದ ಮೇಲೆ ಆದ ಪರಕೀಯರ ಆಕ್ರಮಣ ಅದರಿಂದ ಸಮಾಜದ ಮೇಲೆ ಆದ ಹಿಂಸೆ, ಇಲ್ಲಿನ ಸಂಸ್ಕೃತಿಯಲ್ಲಿ ಎದ್ದ ದೊಡ್ಡ ದೊಡ್ಡ ಆಘಾತಗಳ ಕುರಿತಾದ ಐತಿಹಾಸಿಕ ವಿಚಾರಗಳ ಪ್ರಸ್ತಾಪವಿರುವುದಾದರೂ ಇದು ಕೇವಲ ಐತಿಹಾಸಿಕ ಹೊತ್ತಿಗೆ ಅನಿಸಿಕೊಳ್ಳುವುದಿಲ್ಲ. ಸಾಂಸ್ಕೃತಿಕ ಇತಿಹಾಸವು ಪಾತಳಿಯಲ್ಲಿದ್ದು ಆಸ್ವಾದನೆಯನ್ನು ನೀಡುವುದರಿಂದ ಹಾಗೂ ಕಾದಂಬರಿಯಲ್ಲಿ ಬರುವ ವಿಚಾರಲಹರಿಗಳು ದೃಶ್ಯಾತ್ಮಕವಾದ ಪರಿಣಾಮಗಳನ್ನು ತಂದುಕೊಡುವುದರಿಂದ ಇದು ಕಾದಂಬರಿಯಾಗಿ ರೂಪುಗೊಂಡಿದೆ ಎಂಬುದಾಗಿ ಕಾದಂಬರಿಯನ್ನು ಗುರುತಿಸಲಾಗಿದೆ. ಧರ್ಮಧರ್ಮಗಳಲ್ಲಿ ಆದ ಪರಿವರ್ತನೆಯ ವಿವರಣೆಯನ್ನು ಕಾದಂಬರಿಯಲ್ಲಿ ಕಾಣುವುದರಿಂದ ಕಾದಂಬರಿಯ ಧಾರ್ಮಿಕ ವಿಚಾರಗಳ ವಿಶ್ಲೇಷಣೆಯನ್ನು ಮಾಡುತ್ತದೆ ಎಂಬುದಾಗಿ ಅಭಿಪ್ರಾಯಪಡಲಾಗಿದೆ.

ಕಾದಂಬರಿಯ ತಂತ್ರಗಾರಿಕೆಯನ್ನು ವಿಶೇಷತೆಯನ್ನು ವಿಮರ್ಶಕರು ಸ್ಪಷ್ಟಪಡಿಸುತ್ತಾರೆ: "..... ಈ ಕಾದಂಬರಿಯಲ್ಲಿ ರಬ್ಬಾದ ಘಟನೆಗಳಿಲ್ಲ; ಶೃಂಗಾರ ಪ್ರಸಂಗಗಳಿಲ್ಲ. ಕಾರಂತರು ಕೃತಿಯ ತಂತ್ರಕ್ಕೆ ಸಂಬಂಧಪಟ್ಟ ಸಂಗತಿಗಳಾದ ನಿಗೂಢತೆ, ತೊಡಕಿನ ಪರಿಸ್ಥಿತಿ, ಅವುಗಳಿಂದಾದ ಕಗ್ಗಂಟುಗಳು; ತರುವಾಯ ಅವುಗಳನ್ನು ಬಿಚ್ಚಿ ತೋರಿಸುವುದು ಮೊದಲಾದ ಸಂಕೇತಗಳನ್ನೆಲ್ಲ ಕಾದಂಬರಿಯ ಮಟ್ಟಿಗೆ ನಿರಾಕರಿಸಿದ್ದಾರೆ" (ಅದೇ ಪು. ೮೭).

ಕಾದಂಬರಿಯಲ್ಲಿ ಮೂಕಜ್ಜಿ ಸಾವನ್ನು ಹೊಂದದೇ ಇರುವುದರ ಔಚಿತ್ಯತೆಯನ್ನು ವಿಮರ್ಶಕರು ಒಪ್ಪಿಕೊಳ್ಳುತ್ತ ಮಾನವನ ಮನದಲ್ಲಿ ಸಂಸ್ಕೃತಿಯನ್ನು ಕುರಿತು ಏಳುವ ಸನಾತನಳೂ ನಿತ್ಯ ನೂತನಳೂ ಆಗಿರುವುದರಿಂದ ಅವಳು ಸಾವನ್ನು ಹೊಂದದೇ ಇರುವುದೇ ಔಚಿತ್ಯಪೂರ್ಣವಾದದ್ದು ಎಂಬ ಅಭಿಪ್ರಾಯ ವಿಮರ್ಶಕರದ್ದು.

'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಸಾಹಿತ್ಯಕ್ಷೇತ್ರಕ್ಕೆ ಕಾರಂತರು ನೀಡಿದ ಒಂದು ಅದ್ಭುತವಾದ ಕೊಡುಗೆಯನ್ನಾಗಿ ಪರಿಗಣಿಸಲಾಗಿದೆ. ಕಾದಂಬರಿಯಲ್ಲಿನ ಕಲಾತ್ಮಕತೆಯಿಂದಾಗಿ ಕಾದಂಬರಿ ಕನ್ನಡ ಸಾಹಿತ್ಯಕ್ಕಷ್ಟೇ ಅಲ್ಲದೇ ಇಡೀ ಭಾರತೀಯ ಸಾಹಿತ್ಯಕ್ಕೆ ನೀಡಿದ ಚಿರಂತನವಾದ ಕೊಡುಗೆಯೆನಿಸಿಕೊಂಡಿದೆ ಎಂಬ ಪ್ರಶಂಸೆಗೆ ಪಾತ್ರವಾಗಿರುವುದರಿಂದ ಇದು ಪ್ರಾದೇಶಿಕತೆಯ ಗಡಿ ದಾಟಿ ಜಾಗತಿಕ ಮಟ್ಟದಲ್ಲಿ ವಿಸ್ತಾರವನ್ನು ಹೊಂದಿದ ಕೃತಿ ಎಂದು ಪರಿಗಣಿಸಬಹುದಾಗಿದೆ.

ಮೂಲ ಕಾದಂಬರಿಯ ಅನುವಾದ ಮರಾಠಿ ಸಾಹಿತ್ಯದಲ್ಲಿ ಅಷ್ಟೊಂದು ಸಮರ್ಪಕವಾಗಿ ನಡೆದಿಲ್ಲದಿರುವುದನ್ನು ವಿಮರ್ಶಕರು ಗುರುತಿಸಿ ಮರಾಠಿ ಅನುವಾದಕ್ಕಿಂತ ಹಿಂದಿಯ ಅನುವಾದ ಹೆಚ್ಚು ರಸಪೂರ್ಣವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಕೃತಿಯೊಂದು ಇನ್ನಿತರ ಭಾಷೆಗಳಲ್ಲಿ ಸಮರ್ಪಕವಾಗಿ ಅನುವಾದಗೊಳ್ಳದೇ ಇರುವಾಗ ಅದು ಉಂಟುಮಾಡುವ ಅಪಾಯವನ್ನು ವಿವರಿಸುತ್ತಾರೆ. ಮೂಲಕಾದಂಬರಿ, ಹಿಂದಿಯ ಅನುವಾದ ಹಾಗೂ ಮರಾಠಿಯ ಅನುವಾದಗಳನ್ನು ಗಮನಿಸಿ ಅಲ್ಲಿಯ ವ್ಯತ್ಯಾಸಗಳನ್ನು ಗುರುತಿಸಿ ಕಾದಂಬರಿ ತನ್ನ ಮಹತ್ವವನ್ನು ಕಳೆದುಕೊಳ್ಳುವ ಅಪಾಯವನ್ನು ತಿಳಿಸಿದ್ದಾರೆ: "....ಇಂತಹ ಅನುವಾದದಿಂದಾಗಿ ಮೂಲಕಾದಂಬರಿಯಲ್ಲಿಯ ಪ್ರಸಂಗಗಳನ್ನು ಚಿತ್ರಿಸುವ ಕೌಶಲ್ಯ ಹಾಗೂ ಜೀವಂತಿಕೆ ಇವುಗಳ ಅನುಭವ ಉಂಟಾಗಲಾರದು. ನಾಗಿಯನ್ನು ಮರಳುಮಾಡಿ ಓಡಿಸಿಕೊಂಡು ಒಯ್ದ ಘಟನೆಯ ಅಂದವಾದ ಚಿತ್ರಣವು ಹಿಂದಿಯ ಅನುವಾದದಲ್ಲಿ ಇದೆಯಾದರೆ ಅದನ್ನು ಕುರಿತ ಮರಾಠಿಯ ಅನುವಾದ ಮಾತ್ರ ಸಂಕ್ಷಿಪ್ತವಾಗಿ ಬಂದಿದೆ. ಅದರಿಂದ ಮೂಲ ಲೇಖಕನ ಸಾಮರ್ಥ್ಯದ ಬಗೆಗೇನೆ ತಪ್ಪು ತಿಳುವಳಿಕೆ ಉಂಟಾಗುವ ಭಯವಿದೆ......" (ಅದೇ ಪು. ೯೨). ಇದು ಲೇಖಕರ ಸಾಹಿತ್ಯಕ ವ್ಯಕ್ತಿತ್ವಕ್ಕೆ ಮಾರಕವಾಗಿ ಪರಿಣಮಿಸಬಹುದಾದ ಸಾಧ್ಯತೆಯನ್ನು ಹೇಳುತ್ತದೆ. ಮರಾಠಿ ಅನುವಾದದಲ್ಲಿ ರಸಪೂರ್ಣತೆ ಹಾಗೂ ಲಯಬದ್ಧತೆಯ ಕೊರತೆಯನ್ನು ಗುರುತಿಸಲಾಗಿದೆ ಹಾಗೂ ಹಿಂದಿಯ ಅನುವಾದದಲ್ಲಿ ಈ ಕೊರತೆ ಕಂಡುಬರುವುದಿಲ್ಲ ಎಂಬುದು ವಿಮರ್ಶಕರು ಮರಾಠಿ ಮತ್ತು ಹಿಂದಿ ಅನುವಾದಗಳೊಂದಿಗೆ ಹೋಲಿಸಿ ನೋಡಿ ಹೇಳುವ ಅಭಿಪ್ರಾಯವಾಗಿದೆ. ಮರಾಠಿ ಅನುವಾದದಲ್ಲಿ ಕಂಡುಬರುವ ಕೊರತೆಗಳನ್ನು ವಿಮರ್ಶಕರು

ಎತ್ತಿ ಹೇಳಿದ್ದಾರೆ: "......ಇಂತಹ ಅದೆಷ್ಟೋ ಕೊರತೆಗಳು ಸೌ. ಮೀನಾ ವಾಂಗೀಕರರು ಮಾಡಿದ ಮರಾಠಿಯ ಅನುವಾದದಲ್ಲಿ ಇವೆ. ಬರವಣಿಗೆಯ ವಿಸ್ತಾರ ಭಯದಿಂದಾಗಿ ಇವೆಲ್ಲವುಗಳನ್ನು ಇಲ್ಲಿ ನಮೂದಿಸುತ್ತಿಲ್ಲ. ಆದರೆ 'ಕಥೆ' ಹೇಳುವುದೆಂದರೇನೆ ಅನುವಾದ ಎಂಬ ಕಲ್ಪನೆ ಇರುವುದರಿಂದ ಅಂಕಗಣಿತದಲ್ಲಿಯ ಕಳೆವ-ಕೂಡಿಸುವ ಲೆಕ್ಕಾಚಾರಗಳ ಅನುವಾದವೇ ಓದುಗರ ಪಾಲಿಗೆ ಬಂದೀತು. ಬೇರೆ ಏನಾಗಲು ಸಾಧ್ಯ......" (ಅದೇ ಪು. ೯೩). ಈ ಮಾತುಗಳು 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಮರಾಠಿ ಅನುವಾದವು ಮರಾಠಿಯಲ್ಲಿ ಕಥೆಯ ಸ್ವರೂಪವನ್ನು ಪಡೆದುಕೊಂಡಿದೆ. ಸಮರ್ಪಕವಾದ ಅನುವಾದವಾಗಿ ಹೊರಬಂದಿಲ್ಲ ಎಂಬ ವಿಚಾರವನ್ನು ಬೆಳಕಿಗೆ ತರುತ್ತದೆ.

**ಮೈಮನಗಳ ಸುಳಿಯಲ್ಲಿ**

ಮರಾಠಿ ಶೀರ್ಷಿಕೆ : 'ತನುಮನಾಚ್ಯಾಭೋವಶ್ಯಾತ್'

ಅನು : ಸಾ. ಉಮಾ ಕುಲಕರ್ಣಿ.

'ಮರಳಿಮಣ್ಣಿಗೆ' ಕಾದಂಬರಿಯಲ್ಲಿ ಬರುವ ಮೂರು ಪೀಳಿಗೆಗಳ ಚಿತ್ರಣ ಪ್ರಸ್ತುತ ಕಾದಂಬರಿಯಲ್ಲಿಯೂ ಕಂಡುಬರುವುದನ್ನು ಗುರುತಿಸಲಾಗಿದೆ. ಕಾದಂಬರಿಯ ಪ್ರಮುಖ ಪಾತ್ರವಾಗಿರುವ ಮಂಜುಳೆಯ ಪಾತ್ರವನ್ನು ಸಂಸ್ಕೃತ ನಾಟಕಗಳಲ್ಲಿ ಬರುವ ವಸಂತಸೇನೆಯೊಂದಿಗೆ ಹೋಲಿಸಲಾಗಿದೆ: "......ಸಂಸ್ಕೃತ ನಾಟಕಗಳಲ್ಲಿ ಬರುವ ವಸಂತಸೇನೆ ಹಾಗೂ ಇನ್ನಿತರ ಗಣಿಕೆಯರಂತಹ ಪ್ರವೃತ್ತಿ ಧರ್ಮವುಳ್ಳ ಮಂಜುಳೆ, ಆ ವ್ಯವಸಾಯದ ನಿರ್ದಿಷ್ಟವಾದ ಅವನತಿಯನ್ನು ತೋರಿಸುವ ಮಂಜುಳೆಯ ಸಾಕುಮಗಳಾದ ಶಾರಿ ಹಾಗೂ ಶಾರಿಗೆ ಇಳಿವಯಸ್ಸಿನಲ್ಲಿ ಹುಟ್ಟಿ ಆ ವ್ಯವಸಾಯವನ್ನೇ ತೊರೆದು ಪ್ರತಿಷ್ಠೆಯಿಂದ ಬಾಳಬೇಕೆನ್ನುವ ಚಂದ್ರಿಯರಿಂದಾಗಿ ಕಾಲ, ವ್ಯವಸಾಯ, ವ್ಯಕ್ತಿ ಹಾಗೂ ಪ್ರವೃತ್ತಿಗಳ ಬದಲಾಗುತ್ತಿರುವ ರೂಪಕ್ಕೆ ಇಲ್ಲಿ ಒತ್ತುಕೊಡಲಾಗಿದೆ......" (ಅದೇ ಪು. ೯೬).

ಕನ್ನಡದಲ್ಲಿ ಕಾರಂತರು ತಮ್ಮ ಕಾದಂಬರಿಗಳಲ್ಲಿ ಮೂರು ಪೀಳಿಗೆಗಳ ಚಿತ್ರಣವನ್ನು ಕೊಡುವಂತೆ ಮರಾಠಿ ಸಾಹಿತ್ಯದಲ್ಲಿ ಕೂಡ ಹರಿನಾರಾಯಣ ಅಷ್ಟೆಯವರು ಈ ರೀತಿಯ ಮೂರು ಪೀಳಿಗೆಗಳ ವ್ಯಕ್ತಿಗಳು ಒಂದೇ ಕಾಲಕ್ಕೆ ತಮ್ಮ ಕಾದಂಬರಿಯಲ್ಲಿ ಓಡಾಡುವಂತೆ ಮಾಡಿರುವುದನ್ನು ಹೋಲಿಸಲಾಗಿದೆ. ಈ ಇಬ್ಬರು ಸಾಹಿತಿಗಳಲ್ಲಿರುವ ಸಾಮ್ಯತೆಯನ್ನು ಗುರುತಿಸಲಾಗಿದೆ.

ಕಾದಂಬರಿಯಲ್ಲಿನ ಸೂತ್ರವನ್ನು ಗುರುತಿಸುತ್ತ ಅದು ಗಂಡುಹೆಣ್ಣುಗಳು ಹೇಗೆ

ಮೈಮನಗಳ ಸುಳಿಯಲ್ಲಿ ಸಿಕ್ಕು ಗರಗರನೆ ಸುತ್ತುವ ಪರಿಯನ್ನು ಹಾಗೂ ಈ ಸೂತ್ರದ ಮೂಲಕವೇ ಕಾದಂಬರಿ ರೂಪುಗೊಂಡಿರುವುದಾಗಿ ಅಭಿಪ್ರಾಯಪಡಲಾಗಿದೆ: "…..ಗಂಡು ಹೆಣ್ಣುಗಳು ರತಿಸುಖವನ್ನು ಪಡೆಯಲೆಂದು ಮೈಮನಗಳ ಸುಳಿಯಲ್ಲಿ ಸಿಕ್ಕು ರಭಸದಿಂದ ಗರಗರನೆ ಸುತ್ತುತ್ತಾರೆ ಎಂಬ ಸೂತ್ರವು ಈ ಕಾದಂಬರಿಗೆ ಒಂದು ಒಳ್ಳೆಯ ಮಿಳಿತ ಹಾಗೂ ಅಖಂಡತೆಯನ್ನು ತಂದುಕೊಟ್ಟಿದೆ. ಕಾದಂಬರಿಯಲ್ಲಿಯ ಪಾತ್ರಗಳು, ಘಟನೆ, ಪ್ರಸಂಗಗಳು ಇಲ್ಲಿಯ ವಾತಾವರಣ ಹಾಗೂ ಸಂವಾದಗಳು ಕೂಡ ಈ ಸೂತ್ರದಿಂದಾಗಿಯೇ ರೂಪುಗೊಂಡಿವೆ…." (ಅದೇ ಪು. ೧೦೧).

ಮಂಜುಳೆಯ ಮನಸ್ಸಿನೊಂದಿಗೆ ಒಂದಾದ ಕಾರಂತರು ಅವಳ ಕಣ್ಣಿನಿಂದಲೇ ಬಾಳಿನ ವಾಸ್ತವತೆಯನ್ನು ಅರಿಯುವ ಪ್ರಯತ್ನ ಮಾಡಿದ್ದಾರೆ ಹಾಗೂ ಇದರಿಂದಾಗಿ ಕಾದಂಬರಿಗೆ ಒಂದು ಅಂದವಾದ ರೂಪ ದಕ್ಕಿ ಕಾದಂಬರಿಯಲ್ಲಿ ಒಳ್ಳೆಯ ಉತ್ಕಟತೆ ಹುಟ್ಟಿಕೊಂಡಿದೆ ಎಂಬುದಾಗಿ ವಿಶ್ಲೇಷಿಸಲಾಗಿದೆ. ಕಾದಂಬರಿಯ ಯಶಸ್ಸಿನ ಅಂಶಗಳನ್ನು ಕೊಡುತ್ತಾ: "……ನಾಯಿಕೆಯಾದ ಮಂಜುಳೆಯು ಓದುಗರ ಮನವನ್ನು ಸೂರೆಗೊಳ್ಳುತ್ತ ಬಾಳಿನ ಕತ್ತಲೆಯಲ್ಲಡಗಿದ ಬೇರೆ ಬೇರೆ ಬದಿಗಳ ಮೇಲೆ ಬೆಳಕನ್ನು ಬೀರತೊಡಗುತ್ತಾಳೆ. ಇದೇ ಈ ಕಾದಂಬರಿಯ ಯಶಸ್ಸು….." (ಅದೇ ಪು. ೧೦೫). ಇದು ಬದುಕಿನ ಕತ್ತಲೆಯೊಳಗಿರುವ ವಿಚಾರಗಳನ್ನು ಬೆಳಕಿಗೆ ತಂದು ಸಮಾಜಕ್ಕೆ ಪ್ರಕಟಪಡಿಸಿದ ರೀತಿಯಾಗಿದೆ. ಪ್ರಸ್ತುತ ಕಾದಂಬರಿ ಮರಾಠಿ ಅನುವಾದದ ಯಶಸ್ಸಿನ ಬಗೆಗಾಗಲಿ ಅಥವಾ ಲೋಪಗಳ ಬಗೆಗಾಗಲಿ ವಿಮರ್ಶೆ ಮಾಡದೇ ಇರುವುದರಿಂದ ಇದರ ಮರಾಠಿ ಅನುವಾದದ ಕುರಿತಾಗಿ ಖಚಿತವಾಗಿ ಹೇಳುವುದು ಕಷ್ಟಸಾಧ್ಯವಾಗುತ್ತದೆ.

ಈ ಮೇಲೆ ಚರ್ಚಿತವಾದ ಕಾರಂತರ ಕಾದಂಬರಿಗಳನ್ನು ಹೊರತುಪಡಿಸಿ ಇದೇ ಶೈಲಿಯ ಅನುಬಂಧದಲ್ಲಿ, 'ಮತಸ್ಥ ಅಲೋಚನಾ', 'ಸರಸಮ್ಮನ ಸಮಾಧಿ', 'ಕುಡಿಯರ ಕೂಸು' ಹಾಗೂ 'ಅನುವಾದ ಪ್ರಮಾದ' –ಎಂಬ ನಾಲ್ಕು ವಿಮರ್ಶಾ ಲೇಖನಗಳನ್ನು ಸೇರ್ಪಡೆಗೊಳಿಸಲಾಗಿದೆ. 'ಸರಸಮ್ಮನ ಸಮಾಧಿ' ಹಾಗೂ 'ಕುಡಿಯರ ಕೂಸು' ಈ ಎರಡು ಕಾದಂಬರಿಗಳ ಬಗೆಗೆ ಡಾ। ಸುಧಾಕರ ದೇಶಪಾಂಡೆಯವರೇ ಬರೆದ ವಿಮರ್ಶಾ ಲೇಖನಗಳಿವೆ. 'ಸರಸಮ್ಮನ ಸಮಾಧಿ' ಇದುವರೆಗೂ ಮರಾಠಿಗೆ ಅನುವಾದಗೊಂಡಿಲ್ಲ. 'ಕುಡಿಯರ ಕೂಸು' ಮರಾಠಿಗೆ ಅನುವಾದಗೊಂಡಿದೆಯಾದರೂ ಸುಧಾಕರ ದೇಶಪಾಂಡೆಯವರು ಈ ವಿಮರ್ಶಾಲೇಖನವನ್ನು ಬರೆಯುವ ಸಂದರ್ಭದಲ್ಲಿ ಇದು ಮರಾಠಿಗೆ ಅನುವಾದಗೊಂಡಿರಲಿಲ್ಲ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

ಆದರೆ ಇಂಗ್ಲಿಷ ಮತ್ತು ಹಿಂದಿಯಲ್ಲಿ ಭಾಷಾಂತರಗೊಂಡ ಅನುವಾದಕೃತಿಗಳನ್ನು ಓದಿಕೊಂಡು ಡಾ। ದೇಶಪಾಂಡೆಯವರು ಈ ಎರಡು ಕೃತಿಗಳ ಬಗೆಗೆ ತಮ್ಮ ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಇದರಿಂದ ಈ ಎರಡು ಕೃತಿಗಳು ಮರಾಠಿ ಸಾಹಿತ್ಯದಲ್ಲಿ ಯಾವ ರೀತಿಯ ಅಭಿಪ್ರಾಯವನ್ನು ತಳೆದಿವೆ ಎಂಬುದನ್ನು ಕಂಡುಕೊಳ್ಳಲು ಸಹಾಯಕವಾಗಿವೆ. ಈ ಎರಡು ಕಾದಂಬರಿಗಳನ್ನು ಕೂಡ ಇಲ್ಲಿ ಸಮೀಕ್ಷಿಸುವ ಪ್ರಯತ್ನ ಮಾಡಲಾಗಿದೆ.

**ಸರಸಮ್ಮನ ಸಮಾಧಿ**

ಕಾರಂತರ ಮೊದಲ ಸಾಮಾಜಿಕ ಸಾಹಿತ್ಯಕ ಕೃತಿ ಇದು ಎಂದು ಗುರುತಿಸುತ್ತಾ ಕಾರಂತರ ದೃಷ್ಟಿಕೋನದ ವಿಶ್ಲೇಷಣೆ ಮಾಡಲಾಗಿದೆ: "....ಅವರ ದೃಷ್ಟಿಕೋನವು ಧಾರ್ಮಿಕ ಹಾಗೂ ಸಾಮಾಜಿಕ ಸಂಕೇತಗಳ ವಿರುದ್ಧ ಹೋರಾಡುವಂಥದ್ದೂ, ಕಲ್ಲಿನಂತೆ ಗಟ್ಟಿಗೊಂಡ ರೂಪಗಳ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳುವಂಥದೂ, ಬಾಳನ್ನು ಮುಕ್ತ ಹಾಗೂ ಅರ್ಥಪೂರ್ಣವನ್ನಾಗಿ ಮಾಡುವಂಥದು ಆಗಿದೆ. ಕಾರಂತರಿಗೆ ದಲಿತರು ಹಾಗೂ ಸ್ತ್ರೀಯರ ತುಳಿತಕ್ಕೆ ಒಳಗಾದ ಈ ವರ್ಗಗಳ ಬಗೆಗೆ ತುಂಬ ಆತ್ಮೀಯತೆ ಇದೆ...." (ಅದೇ ಪು. vi/ಅನುಬಂಧ).

ಸರಸಮ್ಮನ ಕಥೆಯ ಬಗೆಗೆ ವಿಶ್ಲೇಷಿಸುವ ವಿಮರ್ಶಕರು ಸರಸಮ್ಮನ ಕಥೆಯೆಂದರೆ, ಈ ದೇಶದಲ್ಲಿ ಶತಮಾನಗಳಿಂದ ಮಹಿಳೆಯ ಮೇಲೆ ನಡೆದುಬಂದ ಕಾಡು ಅತ್ಯಾಚಾರಗಳ ಒಂದು ಜ್ವಲಂತವಾದ ಉದಾಹರಣೆಯೇ ಆಗಿದೆ (ಅದೇ ಪು. ix) ಎಂದು ಹೇಳುತ್ತಾ ಪ್ರಸ್ತುತ ಕೃತಿಯಲ್ಲಿಯ ಕಥಾವಸ್ತುವಿನಲ್ಲಿ ಎದ್ದುಕಾಣುವ ಲೋಪವನ್ನು ಹೀಗೆ ಗುರುತಿಸುತ್ತಾರೆ: "....ಅದರಲ್ಲಿ ಇಂದು ಕಂಡುಬರುವ ಕೊರತೆಯೆಂದರೆ ಕಾರಂತರ ಪ್ರಗಲ್ಭವಾದ ಅವಸ್ಥೆಯಲ್ಲಿಯ ಕಾದಂಬರಿಗಳಲ್ಲಿ ಬಾಳು ತನ್ನೆಲ್ಲ ಬದಿಗಳಿಂದಲೂ ಎದ್ದುಬರುವಂತೆ ಇಲ್ಲಿ ಬಂದಿಲ್ಲ. ಬಾಳಿಗಿಂತಲೂ ಬಾಳಿನಲ್ಲಿಯ ಪ್ರಶ್ನೆ ಇಲ್ಲಿ ಎದ್ದುಬಂದಿದೆ. ಸಂಸ್ಮರಣೀಯವಾದ ವ್ಯಕ್ತಿ ರೇಖೆಗಳಿಗಿಂತ ಕಥೆಗೆ (plot) ಹೆಚ್ಚಿನ ಒತ್ತು ಕೊಡಲಾಗಿದೆ...." (ಅದೇ ಪು. ix) ಕಥೆಯಲ್ಲಿ ಮಾಡಬಾರದಷ್ಟು ಪ್ರಮಾಣದ ಪೂರ್ವನಿಯೋಜನೆಯಾದದ್ದು ಕಂಡುಬರುತ್ತದೆ ಎನ್ನುವುದಾಗಿಯೂ ಅಭಿಪ್ರಾಯಪಟ್ಟಿದ್ದಾರೆ.

**ಕುಡಿಯರ ಕೂಡು**

ದಕ್ಷಿಣ ಕನ್ನಡ ಜಿಲ್ಲೆಯ ಪಡುವಣದ ಘಟ್ಟಗಳಲ್ಲಿ ಸುತ್ತಲ್ಲ ಆಧುನಿಕ ಸಂಸ್ಕೃತಿಯಿಂದ

ದೂರ ನಡುಗಡ್ಡೆಯಾಗಿ ನಿಂತಿರುವ ತೀರ ಕಿರಿದಾದ ಬುಡಕಟ್ಟಿನ ಜನಾಂಗವೊಂದರ ವಿಲಕ್ಷಣವಾದ ಚಿತ್ರವನ್ನು ಈ ಕಾದಂಬರಿಯಲ್ಲಿ ಗುರುತಿಸಲಾಗಿದೆ. ಕಾದಂಬರಿಕಾರರಾಗಿ ಕಾರಂತರು ಹೇಗೆ ಇತರ ಕಾದಂಬರಿಕಾರರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ ಎಂಬುದನ್ನು ವಿಶ್ಲೇಷಿಸುತ್ತ ಕಾರಂತರು ಕನಸುಗಾರಿಕೆಯನ್ನೋ ಪಲಾಯನವಾದವನ್ನೋ ಅಥವಾ ಕಲ್ಪನಾವಿಲಾಸವನ್ನೋ ಕಟ್ಟಿಕೊಡುವ ಕಾದಂಬರಿಕಾರರ ಸಾಲಿನಲ್ಲಿ ನಿಲ್ಲುವ ಕಾದಂಬರಿಕಾರರಾಗಿರದೇ ಅವರ ಕಾದಂಬರಿಯ ಬೇರುಗಳು ಬಾಳಿನ ಚೈತನ್ಯವನ್ನರಿಯಲೆಂದು ವಾಸ್ತವದ ಆಳಕ್ಕಿಳಿಯುತ್ತವೆ ಎಂಬುದಾಗಿ ವಿಮರ್ಶಕರು ಅಭಿಪ್ರಾಯ ಪಟ್ಟಿರುತ್ತಾರೆ.

ಕಾರಂತರು ವಾಸ್ತವವಾದಿ ಕಾದಂಬರಿಕಾರರು ಎಂಬುದಕ್ಕೆ ಪ್ರಸ್ತುತ ಕಾದಂಬರಿಯ ಬರವಣಿಗೆಯ ಬಗೆಗೆ ಅವರು ಆಡಿದ ಮಾತುಗಳನ್ನು ಪ್ರಸ್ತಾಪಿಸಿದ್ದಾರೆ. 'ಕುಡಿಯರ ಕೂಸು' ಕಾದಂಬರಿಯ ವೈಶಿಷ್ಟ್ಯತೆಯನ್ನು ವಿಮರ್ಶಕರು ಗುರುತಿಸುವುದು ಹೀಗೆ: "...ಈ ನಾಡಿನಿಂದ ತುಸು ಅಂತರದಲ್ಲಿಯೇ ಔದ್ಯೋಗಿಕತೆ, ನಾಗರಿಕ ಹಾಗೂ ಆಧುನಿಕ ಸಂಸ್ಕೃತಿಯ ಗದ್ದಲಗಳಿಂದ ಕೂಡಿದ ಒಂದು ಜಗತ್ತು ಇದೆ. ಆದರೆ ಇಲ್ಲಿ ಮಾತ್ರ ಸಂಸ್ಕೃತಿಯ ತೊಟ್ಟಿಲು (Cradle of civilization) ಈಗಲೂ ಅದೇ ಅವಸ್ಥೆಯಲ್ಲಿ ತೂಗಾಡುತ್ತಿರುವುದು ಕಂಡುಬರುತ್ತದೆ. ಈಗೀಗ ಮಾತ್ರ ಹೊರಜಗತ್ತಿನಿಂದ ಬರುವ ಬೇರೆ ತರಹದ ಗಾಳಿಯು ಈ ಗಿರಿಕಂದರಗಳ ಮೇಲಿಂದ ಬೀಸತೊಡಗಿದೆ. ಈ ಕಾದಂಬರಿಯು ಇಂತಹ ಒಂದು ಸಂಕ್ರಮಣ ಕಾಲದ ದರ್ಶನವನ್ನು ಮಾಡಿಸುತ್ತದೆ....." (ಅದೇ ಪು. xiv) ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಮೂಲ ಸಂಸ್ಕೃತಿಯೊಂದರ ಮೌಲ್ಯಗಳು ಹೇಗೆ ಅಲ್ಲಾಡುವ ಪರಿಸ್ಥಿತಿಯನ್ನು ಅನುಭವಿಸುತ್ತವೆ ಎಂಬುದನ್ನು ಗುರುತಿಸಲಾಗಿದೆ.

ಕಾರಂತರು ಪ್ರಸ್ತುತ ಕಾದಂಬರಿಯಲ್ಲಿ ಭಿನ್ನವಾದ, ಚಿಕ್ಕದಾದ ಜಗತ್ತೊಂದನ್ನು ಓದುಗರ ಮುಂದೆ ತಂದು ನಿಲ್ಲಿಸುತ್ತಾರೆ. ಆ ಜಗತ್ತನ್ನು ವಿಮರ್ಶಕರು ಈ ರೀತಿಯಾಗಿ ಪರಿಚಯಿಸುತ್ತಾರೆ: "ಬುಡಕಟ್ಟಿನ ಸಂಸ್ಕೃತಿಯು ಪರಿಕಲ್ಪನೆಗಳಿಂದ ಆಳಲ್ಪಡುವ, ನಿಸರ್ಗದ ಮಡಿಲಲ್ಲಿ ವಾಸವಾಗಿರುವ ಹಾಗೂ ನಿಸರ್ಗದೊಂದಿಗೆ ಹೋರಾಡುತ್ತ ಅದರೊಂದಿಗೆ ಹೊಂದಿಕೊಳ್ಳುತ್ತ ಬಾಳುವ ಜನರಿಂದ ಕೂಡಿದ ಒಂದು ಚಿಕ್ಕದಾದ ಜಗತ್ತು ನಮ್ಮೆದುರು ರೂಪು ತಳೆಯುತ್ತದೆ. ಅದು ಎಂದಿಗಿಂತಲೂ ಬೇರೆಯಾದ ಅನುಭವವನ್ನು ನಮ್ಮಲ್ಲಿ ಉಂಟುಮಾಡುತ್ತದೆ...." (ಅದೇ ಪು. xiv).

ಹೀಗೆ ಮರಾಠಿ ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳ ವಿಮರ್ಶೆಯ ಅನುವಾದದ ಮೇಲೆ ಕಾರಂತರ ಕಾದಂಬರಿಗಳು ಮರಾಠಿ ವಲಯದ ಓದುಗರನ್ನು ಪ್ರಭಾವಿಸಿದ ರೀತಿಯನ್ನು ಅರಿಯಬಹುದಾಗಿದೆ. ಹಾಗೂ ಅನುವಾದ ಕಾರ್ಯದಲ್ಲಿ ಭಾಷೆಯ ಹಾಗೂ ಭಾಷಾಂತರದ ಮಿತಿಗಳಿಂದ ಹೇಗೆ ಒಂದು ಭಾಷೆಯಲ್ಲಿ ಸಾಕಷ್ಟು ಪ್ರಭಾವವನ್ನು ಬೀರಿದ ಕೃತಿ ಇನ್ನೊಂದು ಭಾಷೆಯಲ್ಲಿ ಅಷ್ಟೇ ಪ್ರಭಾವವನ್ನು ಬೀರಲಾರದು. ಮತ್ತು ಈ ಕಾರಣಗಳಿಂದಾಗಿಯೇ ಅನುವಾದದ ಓದು ಎಷ್ಟೋ ಅಪಾರ್ಥಗಳಿಗೆ ಅವಕಾಶ ಮಾಡಿಕೊಡುತ್ತದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಆದಾಗ್ಯೂ ಒಂದು ಭಾಷೆಯನ್ನಾಡುವ ಪ್ರದೇಶಕ್ಕೆ ಸೀಮಿತವಾದ ಉತ್ಕೃಷ್ಟ ಕೃತಿಗಳ ಓದು ಅನುವಾದದ ಮುಖೇನ ಇನ್ನೊಂದು ಭಾಷಿಕ ಪ್ರದೇಶವನ್ನು ತಲುಪುವುದು ಸಾಧ್ಯವಾಗುತ್ತದೆ. ತಕ್ಕಮಟ್ಟಿಗೆ ಇಲ್ಲಿನ ಪ್ರಾದೇಶಿಕತೆಯನ್ನು ಇನ್ನೊಂದು ಪ್ರದೇಶದಲ್ಲಿ ಪರಿಚಯಿಸಲು, ತುಲನೆ ಮಾಡಲು ಹಾಗೂ ಸಾಮ್ಯಗಳನ್ನು ಗುರುತಿಸಲು ಸಾಧ್ಯವಾಗುತ್ತದೆ ಎಂಬುದನ್ನು ಕೂಡ ಇದರಿಂದ ಅರಿತುಕೊಳ್ಳಬಹುದಾಗಿದೆ.

# ಅಧ್ಯಾಯ -೪

## ಇಂಗ್ಲಿಷಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಗಳ ಅವಲೋಕನ

ಭಾಷಾಂತರ ಎಂಬುದು ಎರಡು ಭಾಷೆಗಳನ್ನು ಆಡುವವರ ಮಧ್ಯೆ ಎರಡು ವಿಭಿನ್ನ ಸಂಸ್ಕೃತಿಗಳನ್ನು ಬೆಸೆಯುವ ಒಂದು ಪ್ರಯತ್ನ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಅನೇಕ ಚಾರಿತ್ರಿಕ ಘಟನೆಗಳ ಹಿಂದೆ ಭಾಷಾಂತರ ಒಂದು ಪ್ರಮುಖ ಅಸ್ತ್ರವಾಗಿ ಪರಿಣಮಿಸಿದ ಸಂದರ್ಭಗಳೂ ಉಂಟು. ನಮ್ಮ ಕನ್ನಡ ಸಾಹಿತ್ಯದ ಸಂದರ್ಭದಲ್ಲಿಯೂ ಭಾಷಾಂತರ ನೂತನವಾದ ವೈಚಾರಿಕ ದಿಕ್ಕನ್ನು ತೆರೆದು ತೋರಿಸಿದೆ. 'ಸಾಹಿತ್ಯದಲ್ಲಿ ಆಧುನಿಕತೆ' ಎಂಬುದು ಬೆಳೆದುಬಂದುದು ಭಾಷಾಂತರದ ಪ್ರಕ್ರಿಯೆಯ ಮೂಲಕವೇ ಎಂಬುದು ಗಮನಿಸಬೇಕಾದ ಸಂಗತಿ. ವಿಚಾರಗಳಲ್ಲಿ, ಅನುಭವಗಳಲ್ಲಿ ಸಾಹಿತ್ಯಿಕ ಪ್ರಭೇದಗಳು ಪ್ರವೇಶವಾದದ್ದು ಅನುವಾದಗಳ ಮೂಲಕವೇ. ಆಧುನಿಕ ಸಂದರ್ಭದಲ್ಲಿ ಭಾಷಾಂತರದ ಪ್ರಕ್ರಿಯೆಯು ಅನೇಕ ಆಲೊಚನೆಯ ಹಂತಗಳನ್ನು ದಾಟಿಬಂದುದನ್ನು ಗಮನಿಸಬಹುದು. ಅನೇಕಾನೇಕ ವರ್ಷಗಳಿಂದ ಭಾಷಾಂತರ ನಿರಂತರವಾಗಿ ನಡೆಯುತ್ತ ಬಂದಿದ್ದರೂ ಭಾಷಾಂತರದಲ್ಲಿ ನಿಷ್ಠತೆ ಮತ್ತು ಸ್ವಚ್ಛಂದತೆಯ ಪ್ರಶ್ನೆಗಳು ಇಂದಿಗೂ ನಮ್ಮನ್ನು ಕಾಡುತ್ತಿವೆ. ವೈಯಕ್ತಿಕವಾಗಿ ಭಾಷಾಂತರಕಾರರು ತಮ್ಮ ಭಾಷಾಂತರದ ಹಿಂದೆ ಹತ್ತುಹಲವು ಕಾರಣಗಳನ್ನು ನೀಡಿದರೂ ಭಾಷಾಂತರದಿಂದ ಭಾಷಾಂತರಕಾರನ ಸಮುದಾಯದ ಸಾಮಾಜಿಕ ಅಗತ್ಯಗಳನ್ನು ಪೂರೈಸಲು ಸಹಕಾರಿಯಾಗುತ್ತದೆ. ಭಾಷಾಂತರ ನಡೆಯುವ ಸ್ವೀಕಾರ ಮತ್ತು ಆಕರ ಭಾಷೆಗಳ ಮಧ್ಯದಲ್ಲಿನ ಭಾಷಾಂತರದ ರಚನಾಕ್ರಮವು ಭಾಷಾಂತರಕ್ಕಾಗಿ ಮಾಡಬೇಕಾದ ಕೃತಿಯ ಆಯ್ಕೆ, ಅದರ ಭಾಷಾಂತರ ವಿಧಾನ, ಶೈಲಿಗಳು ಹೇಗೆ ಸ್ವೀಕಾರ ಭಾಷೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಬೇಡಿಕೆಗಳಿಂದ ಹಾಗೂ ಆಕರಭಾಷೆಯ ಜೊತೆಗೆ ಅದಕ್ಕಿರುವ ಸಂಬಂಧಗಳಿಂದ ನಿರ್ಧರಿತವಾಗುತ್ತದೆ ಎನ್ನುವ ಸಂಗತಿಯನ್ನು ನಮ್ಮೆದುರು ತರುತ್ತದೆ.

ನಮ್ಮ ದೇಶದ ಸಂದರ್ಭದಲ್ಲಿ ವಸಾಹತುಶಾಹಿ ಹಾಗೂ ವಸಾಹತುಶಾಹಿ ಅನಂತರದ ಕಾಲದಲ್ಲಿ ನಡೆದ ಭಾಷಾಂತರವು ಅಂದಿನ ಚಾರಿತ್ರಿಕ ಸಂದರ್ಭದಲ್ಲಿರುವ ಸಮಾಜವನ್ನು ಪ್ರತಿನಿಧಿಸುತ್ತದೆ. ಭಾರತೀಯ ಭಾಷೆಗಳಿಂದ ಇಂಗ್ಲಿಷಗೆ ಭಾಷಾಂತರದ ಪ್ರಕ್ರಿಯೆಯನ್ನು ಅವಲೋಕಿಸಿದಾಗ ಆರಂಭದಲ್ಲಿ ಸಂಸ್ಕೃತದಿಂದ ಮಾತ್ರ ಭಾರತೀಯ ಕೃತಿಗಳು ಭಾಷಾಂತರವಾಗಿರುವುದನ್ನು ಕಾಣುತ್ತೇವೆ ಹಾಗೂ ಭಾಷಾಂತರ ಮಾಡಿದವರೂ ಕೂಡ ಬ್ರಿಟಿಷ್ ಸರಕಾರದ ಅಧಿಕಾರಿಗಳೆಂದೇ ಕಂಡುಬರುತ್ತದೆ. ಕಾಳಿದಾಸನ 'ಶಾಕುಂತಲ'ವನ್ನು

ಮನುವಿನ 'ಧರ್ಮಶಾಸ್ತ್ರ'ವನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದವರು ವಿಲಿಯಂ ಜೋನ್ಸ್. ಇದರಿಂದ ಪ್ರಾಚೀನ ಭಾರತೀಯ ಕೃತಿಗಳು ಹೊರಜಗತ್ತನ್ನು ಪ್ರವೇಶಿಸುವಂತಾಯಿತು. 'ಶಾಕುಂತಲ'ದಂತಹ ಅಪೂರ್ವವಾದ ನಾಟಕವೊಂದು ಭಾಷಾಂತರಗೊಂಡಿರುವುದು ಸಾಹಿತ್ಯದ ದೃಷ್ಟಿಯಿಂದ ಒಂದು ಮಹತ್ವದ ಘಟನೆಯಾಯಿತು. ಆದರೆ ಪ್ರಥಮದಲ್ಲಿಯೇ ಸಂಸ್ಕೃತದಲ್ಲಿದ್ದ ಕೃತಿಯೊಂದು ಭಾಷಾಂತರಗೊಂಡದ್ದರಿಂದ ಹಾಗೂ ಇತರ ಸಂಸ್ಕೃತ ಗ್ರಂಥಗಳ ಅನುವಾದದ ಪ್ರಭಾವದಿಂದಾಗಿ ಪಾಶ್ಚಾತ್ಯರಲ್ಲಿ ಭಾರತ ಎಂದರೆ ಪರ್ಯಾಯವಾಗಿ 'ಸಂಸ್ಕೃತ' ಎನ್ನುವಷ್ಟು ಪ್ರಭಾವಬೀರಿತು. ಅಂದಿನ ದಿನಗಳಲ್ಲಿ ಪಶ್ಚಿಮವು ಪೂರ್ವದ ಬಗ್ಗೆ ಅನೇಕ ತಪ್ಪು ಕಲ್ಪನೆಗಳನ್ನು ಹೊಂದಿದ ದಿನಗಳಾಗಿದ್ದವು. ಚಲನಶೀಲತೆಯನ್ನು ಕಳೆದುಕೊಂಡು ಮೂಢನಂಬಿಕೆ, ಅವೈಚಾರಿಕತೆಗಳಿಂದ ತುಂಬಿರುವ ಸಂಸ್ಕೃತಿಯ ನಾಡೆಂದು ಭಾವಿಸಿದ ಅಂದಿನ ದಿನಗಳಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ನಡೆದ ಭಾಷಾಂತರದ ಪ್ರಕ್ರಿಯೆ ಇಡಿಯ ವಾತಾವರಣವನ್ನು ಬದಲಾಯಿಸುವಲ್ಲಿ ಸಫಲವಾಯಿತು. ಪಾಶ್ಚಿಮಾತ್ಯರಲ್ಲಿ ಪಾರ್ವಾತ್ಯದ ಬಗೆಗೆ ಈ ರೀತಿಯ ಭಾವನೆಗಳಿದ್ದರೆ ಇಂಗ್ಲಿಷನಿಂದ ಭಾರತೀಯ ಭಾಷೆಗಳಿಗೆ ನಡೆದ ಅನುವಾದದಿಂದ ನಮ್ಮ ಸಮಾಜದಲ್ಲಿ ಹೊಸ ಬಗೆಯ ವಿಚಾರಗಳನ್ನು ಹುಟ್ಟುಹಾಕುವಲ್ಲಿ ಸಫಲವಾಯಿತು. ಮಾನವತವಾದ ಹಾಗೂ ವೈಚಾರಿಕ ದೃಷ್ಠಿಕೋನವು ಮುಖ್ಯವಾಗಿ ಇವು ನೀಡಿದ ಕೊಡುಗೆಗಳಾಗಿವೆ. "ಇಂಗ್ಲಿಷನಿಂದ ಭಾರತೀಯ ಭಾಷೆಗಳಿಗೆ ಬಂದ ಭಾಷಾಂತರಗಳು ಮಾನವತಾವಾದ ಹಾಗೂ ವೈಚಾರಿಕ ದೃಷ್ಟಿಕೋನಗಳನ್ನು ನಮ್ಮ ಸಮಾಜಕ್ಕೆ ತಂದುಕೊಟ್ಟವು." (ಕರೀ ಗೌಡ ಬೀಚನಹಳ್ಳಿ (ಸಂ.); ೧೯೯೯, ಪು. ೫೪.)

ವಸಾಹತು ಸಂದರ್ಭದ ಭಾಷಾಂತರದ ಪ್ರಕ್ರಿಯೆಗಳು ನಮಗೆ ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ನಡೆದುದು ಕಂಡುಬರುತ್ತದೆ. ವಿಶ್ವಸಾಹಿತ್ಯ ಕೃತಿಗಳು ಭಾರತೀಯ ಭಾಷೆಗಳಿಗೆ ಭಾಷಾಂತರಗೊಂಡುದು ಒಂದು ಪ್ರಕಾರವಾದರೆ ಎರಡನೆಯದ್ದು ಭಾರತೀಯ ಭಾಷೆಗಳಿಂದ ಜಗತ್ತಿನ ಇನ್ನಿತರ ಭಾಷೆಗಳಿಗೆ ಭಾಷಾಂತರಗೊಂಡಿರುವುದು. ವಸಾಹತುಶಾಹಿಯ ಅನಂತರದ ಅವಧಿಯಲ್ಲಿ ಭಾಷಾಂತರಕಾರರು ಇಂಗ್ಲಿಷ್-ಅಮೇರಿಕನ್ ಕೃತಿಗಳನ್ನು ಬಿಟ್ಟು ಬೇರೆ ಬೇರೆ ಭಾಷೆಗಳಿಂದ ಅನುವಾದಕ್ಕೆ ಆರಂಭ ಮಾಡಿರುವುದನ್ನು ಕಾಣಬಹುದಾಗಿದೆ. ಇದು ಇಂಗ್ಲಿಷ್-ಅಮೇರಿಕನ್ ಮಾದರಿಯನ್ನು ಹಾಗೂ ನಾಯಕತ್ವವನ್ನು ತೊರೆದು ಭಾಷಾಂತರಕ್ಕೆ ಹೊಸದಾದ ಸ್ಫೂರ್ತಿಯನ್ನು ಹುಡುಕುವ ಒಂದು ಪ್ರಯತ್ನವೆಂದು ಅಭಿಪ್ರಾಯಪಡಲಾಗಿದೆ. ೧೯ನೇ ಶತಮಾನದಲ್ಲಿ ಒಂದು ಖಾಸಾ ವಸಾಹತುಶಾಹಿ

ಸಾಹಿತ್ಯ ಚಟುವಟಿಕೆಯಾಗಿ ಗುರುತಿಸಲ್ಪಟ್ಟಿದ್ದ ಭಾಷಾಂತರದ ಚಟುವಟಿಕೆಯು ಆಧುನಿಕ ಭಾರತೀಯ ಸಂದರ್ಭದಲ್ಲಿ ಹೊಸದಾದ ಸಮರ್ಥನೆಯನ್ನು ಪಡೆಯುತ್ತಿದೆ. ಇದನ್ನು ವಸಾಹತುಶಾಹಿಯ ಪ್ರಭಾವವನ್ನು ದಾಟಲು ಪ್ರಯತ್ನಿಸುತ್ತಿರುವ ರಾಷ್ಟ್ರೀಯತೆಯ ಪ್ರಯತ್ನವೆಂದು ಹೇಳಬಹುದು– "ಹಿಂದಿಯಲ್ಲಿ ಶೇಕ್ಸ್‌ಪಿಯರನ ಹದಿನೈದು ನಾಟಕಗಳನ್ನು ಭಾಷಾಂತರಿಸಿರುವ ರಾಂಗೋರಾಘವರು ತಾವು ಅನುವಾದಮಾಡಿದ್ದು ಶೇಕ್ಸ್‌ಪಿಯರನ ಮೇಲಿನ ಪ್ರೀತಿಗಿಂತ ಹೆಚ್ಚಾಗಿ ಹಿಂದಿ ಭಾಷೆಯ ಮೇಲಿನ ಪ್ರೀತಿಗಾಗಿ" ಎಂದು ಹೇಳಿಕೊಂಡಿದ್ದಾರೆ. ಹೆಚ್ಚು ಹೆಚ್ಚು ಶೇಕ್ಸ್‌ಪಿಯರನ ಅನುವಾದಕರು ಮಾಡುತ್ತಿರುವುದು ವಸಾಹತುಶಾಹಿಯ ಪ್ರಭಾವವನ್ನು ದಾಟುವ ಪ್ರಯತ್ನ ಎನ್ನಬಹುದು. ಇದು ಕನ್ನಡದಲ್ಲಿಯೂ ಬಂದ ಎಚ್.ಎಸ್. ಶಿವಪ್ರಕಾಶರ "ಮ್ಯಾಕಬೆತ್'ದ ರೂಪಾಂತರವಾದ 'ಮಾರನಾಯಕನ ದೃಷ್ಟಾಂತದಂಥ ನಾಟಕಗಳಿಗೂ ಅನ್ವಯವಾಗುತ್ತದೆ" (ಅದೇ ಪು. ೫೬).

ಭಾಷಾಂತರದ ಪ್ರಕ್ರಿಯೆಯಿಂದಾಗಿ ಇನ್ನೊಂದು ಭಾಷೆಯಲ್ಲಿ ಅನ್ಯ ಸಂಸ್ಕೃತಿಗಳ ಸ್ವರೂಪಗಳು ಮೈದಳೆಯ ತೊಡಗಿದವು. ಇದರಿಂದ ಪರಭಾಷಾಕೃತಿಗಳ ಪ್ರಭಾವದಿಂದಾಗಿ ದೇಶಿಯ ಭಾಷೆಗಳ ಸಾಹಿತ್ಯಿಕ ಮೌಲ್ಯಗಳ ಮೇಲೂ ಪರಿಣಾಮ ಬೀರಿತು. "ಅನ್ಯಸಂಸ್ಕೃತಿಗಳ ಪ್ರತಿನಿಧಿ ಸ್ವರೂಪಗಳನ್ನು ರೂಪಿಸುವಲ್ಲಿ ಭಾಷಾಂತರಗಳು ಪ್ರಭಾವಶಾಲಿ ಪಾತ್ರವಹಿಸುತ್ತವೆ. ಕೆಲವೊಮ್ಮೆ ಭಾಷಾಂತರದ ತಂತ್ರಗಳು ಪರಭಾಷಾ ಕೃತಿಗಳ ಸ್ವರೂಪವನ್ನು ದೇಶೀಯ ಭಾಷೆಯ ಸಾಹಿತ್ಯಕ ಮೌಲ್ಯಗಳಿಗೆ ಅನುಗುಣವಾಗಿ ರೂಪಿಸಬಲ್ಲವು" (ಅದೇ ಪು. ೫೭).

ಕನ್ನಡದಲ್ಲಿ ಭಾಷಾಂತರದ ಆಧುನಿಕ ಯುಗ ಪ್ರಾರಂಭವಾದುದು ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ. ಸಂಸ್ಕೃತ ಹಾಗೂ ಇಂಗ್ಲಿಷ ಭಾಷೆಗಳ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸುವುದರ ಮೂಲಕ ಈ ಪ್ರಕ್ರಿಯೆ ಆರಂಭಗೊಂಡಿರುವುದನ್ನು ಕಾಣಬಹುದಾಗಿದೆ. ಸಂಸ್ಕೃತದಲ್ಲಿ ಕಾಳಿದಾಸ ಮಹಾಕವಿ ಹಾಗೂ ಭವಭೂತಿಯ ನಾಟಕಗಳನ್ನು ಇಂಗ್ಲಿಷನಲ್ಲಿರುವ ಶೇಕ್ಸ್‌ಪಿಯರನ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸುವುದರ ಮುಖೇನ ಕನ್ನಡದಲ್ಲಿ ಅನುವಾದದ ಆಧುನಿಕಯುಗ ಆರಂಭಗೊಂಡಿತು. ಇವು ಅನ್ಯಸಂಸ್ಕೃತಿಗಳ ಪ್ರತಿನಿಧಿತ್ವವನ್ನು ಕನ್ನಡದಲ್ಲಿ ತಂದುಕೊಟ್ಟವು.

"ಕನ್ನಡದಲ್ಲಿ ಭಾಷಾಂತರದ ಆಧುನಿಕಯುಗ ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಸಂಸ್ಕೃತ ಹಾಗೂ ಇಂಗ್ಲಿಷ್ ನಾಟಕಗಳ ಭಾಷಾಂತರದೊಂದಿಗೆ ಪ್ರಾರಂಭವಾಯಿತು. ಸಂಸ್ಕೃತದ ಕಾಳಿದಾಸ, ಭವಭೂತಿಯರ ನಾಟಕಗಳೊಂದಿಗೆ

ಇಂಗ್ಲಿಷ್‌ನಿಂದ ಶೇಕ್ಸ್‌ಪಿಯರನ ನಾಟಕಗಳು ಕನ್ನಡಕ್ಕೆ ಭಾಷಾಂತರವಾದವು. (ಅದೇ ಪು. ೬೧) ಈ ಮಾತುಗಳು ಕನ್ನಡದಲ್ಲಿ ಭಾಷಾಂತರದ ಹೊಸದಾದ ಪ್ರಕ್ರಿಯೆ ಆರಂಭಗೊಂಡಿರುವುದನ್ನು ಪುಷ್ಟೀಕರಿಸುತ್ತವೆ. ಹೀಗೆ ಕನ್ನಡದಲ್ಲಿ ಪ್ರಾರಂಭವಾದ ಭಾಷಾಂತರದ ಹೊಸದಾದ ಪ್ರಕ್ರಿಯೆಯು ಸಾಮಾಜಿಕ ಬದಲಾವಣೆಯಲ್ಲಿ ತನ್ನದೇ ಆದ ಪಾತ್ರವನ್ನು ವಹಿಸಿತು. ೨೦ನೆಯ ಶತಮಾನದ ಮೊದಲ ಭಾಗದಲ್ಲಿ ಕನ್ನಡದ ಅನುವಾದ ಕ್ಷೇತ್ರದಲ್ಲಿ ಕೇಳಿಬರುವ ಪ್ರಮುಖ ಹೆಸರು ಬಿ.ಎಂ.ಶ್ರೀ ಅವರದು. ಅವರ 'ಇಂಗ್ಲಿಷ್ ಗೀತಗಳು' ಈ ಕೃತಿಯ ಮೂಲಕ ಕನ್ನಡದಲ್ಲಿ ಹೊಸದಾದ ಕಾವ್ಯಪ್ರಕಾರವೊಂದರ ಆವಿಷ್ಕಾರವಾಯಿತು. ಈ ರೀತಿಯಲ್ಲಿ ನಡೆದ ಭಾಷಾಂತರಗಳು ನಮಗೆ ಎರಡು ಭಿನ್ನ ಸಂಸ್ಕೃತಿಗಳ ಪರಸ್ಪರ ವಿನಿಮಯದ ಪ್ರತೀಕವಾಗಿ ಗೋಚರಿಸುತ್ತವೆ.

ರಾಮಚಂದ್ರದೇವ ಅವರ ಪ್ರಕಾರ ಶೇಕ್ಸ್‌ಪಿಯರಿನ ನಾಟಕಗಳ ಭಾಷಾಂತರ ಪ್ರಕ್ರಿಯೆಯು ಬ್ರಿಟಿಷ್ ಸಾಹಿತ್ಯ ಸಂಸ್ಕೃತಿಯನ್ನು ಭಾರತೀಯ ಸಾಹಿತ್ಯ-ಸಂಸ್ಕೃತಿಯಲ್ಲಿ ಒಳಗೊಳ್ಳುವ ಪ್ರಯತ್ನದ ಅಂಗವಾಗಿದೆ. ಇದೇ ಅಭಿಪ್ರಾಯವನ್ನು ಭಾರತೀಯ ಭಾಷೆಗಳಿಂದ ಇಂಗ್ಲಿಷ ಭಾಷೆಗೆ ಭಾಷಾಂತರಗೊಂಡ ಕೃತಿಗಳ ಬಗೆಗೂ ಹೇಳಬಹುದಾಗಿದೆ. ಆದರೆ ಜಗತ್ತಿನ ಬೇರೆ ಬೇರೆ ಭಾಷೆಗಳಿಂದ ಕನ್ನಡಕ್ಕೆ ಭಾಷಾಂತರಗೊಂಡ ಪ್ರಮಾಣಕ್ಕೆ ಭಾರತೀಯ ಭಾಷೆಗಳಿಂದ ಇತರ ಬೇರೆ ಭಾಷೆಗಳಿಗೆ ಭಾಷಾಂತರಗೊಂಡ ಕೃತಿಗಳ ಪ್ರಮಾಣವನ್ನು ತುಲನೆ ಮಾಡಿದಾಗ ಈ ದಿಶೆಯಲ್ಲಿ ಇನ್ನೂ ಸಾಕಷ್ಟು ಪ್ರಯತ್ನಗಳು ಆಗಬೇಕಾಗಿದೆ ಎಂದೇ ಹೇಳಬೇಕಾಗುತ್ತದೆ. ಇದೇ ವಿಚಾರವನ್ನು ಸ್ಪಷ್ಟೀಕರಿಸುವುದಾದರೆ ಇಂಗ್ಲಿಷನಿಂದ ಕನ್ನಡಕ್ಕೆ ಬಂದ ಅನುವಾದಗಳ ಪ್ರಮಾಣಕ್ಕೆ ಹೋಲಿಸಿದಾಗ ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಗೊಂಡ ಕೃತಿಗಳ ಪ್ರಮಾಣ ಕಡಿಮೆಯಾಗಿರುವುದನ್ನು ಕಾಣುತ್ತೇವೆ.

ಇನ್ನೂ ಆಧುನಿಕತೆಯ ಸಂದರ್ಭವನ್ನು ವಿಶ್ಲೇಷಿಸುವುದಾದಲ್ಲಿ ಇನ್ನಿತರ ದೇಶಗಳಲ್ಲಿ ಸಾಮಾನ್ಯವಾಗಿ ಆಧುನಿಕತೆಯ ಪ್ರಕ್ರಿಯೆ ಪ್ರಾರಂಭವಾಗಿರುವುದು ಆ ದೇಶದ ಒಳಗಡೆಯಿಂದಲೇ ಹೊರತು ಇದು ಹೊರಗಡೆಯಿಂದ ಬಂದುದಲ್ಲ. ಈ ದೇಶಗಳಲ್ಲಿ 'ಆಧುನಿಕತೆ' ಎಂಬುದು ಸಹಜವಾಗಿಯೇ ಹುಟ್ಟಿಕೊಂಡ ಒಂದು ಐತಿಹಾಸಿಕವಾದ ಪ್ರಕ್ರಿಯೆ ಎನ್ನಬಹುದಾಗಿದೆ. ಫ್ರಾನ್ಸ್ ಅಥವಾ ಇಂಗ್ಲೆಂಡ್‌ಗಳಲ್ಲಿ ಹುಟ್ಟಿಕೊಂಡ ಆಧುನಿಕತೆಯ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಫ್ರಾನ್ಸ್‌ನಲ್ಲಿ ನಡೆದ ಫ್ರೆಂಚ್ ಮಹಾಕ್ರಾಂತಿಯಿಂದ ಸಮಾಜದಲ್ಲಿ ಹೊಸದಾದ ರಾಜಕೀಯ, ಆರ್ಥಿಕ, ವಿಜ್ಞಾನ, ಸಂಸ್ಕೃತಿಗಳು ಹುಟ್ಟಿಕೊಂಡವು. ಇವುಗಳನ್ನೊಳಗೊಂಡ ಈ ಆಧುನಿಕತೆ ಎಂಬುದು ಸಾಮಾಜಿಕ ವಿಕಾಸಶೀಲತೆಯ

ಒಂದು ಘಟ್ಟದಲ್ಲಿ ಹುಟ್ಟಿತು. ಈ ವಿಚಾರವನ್ನು ಟಿ.ಪಿ. ಅಶೋಕರ ಈ ಮಾತುಗಳು ಇನ್ನಷ್ಟು ಸ್ಪಷ್ಟಪಡಿಸುತ್ತವೆ– 'ಫ್ರಾನ್ಸ್‌ನ ವಾಸ್ತವತಾವಾದಿ ಪರಂಪರೆಯ ಹಿನ್ನಲೆಯಲ್ಲಿ ಕೈಗಾರಿಕಾಕ್ರಾಂತಿ ಇದೆ ಅಂದರೆ, ಹೊಸ ರಾಜಕೀಯ ಸಂಸ್ಕೃತಿ ಮತ್ತು ವಿಜ್ಞಾನ ಸಂಸ್ಕೃತಿಗಳಿಂದ ಬದಲಾದ ಹೊಸ ಆರ್ಥಿಕ ಸಂಸ್ಕೃತಿ ಈ ಎರಡು ವಾಸ್ತವತಾವಾದೀ ಪರಂಪರೆಗಳ ಹಿಂದೆ ಇತ್ತು. ಆ ಸಮಾಜಗಳ ಹೊಸ ಎಚ್ಚರ ಮತ್ತು ವಿಕಾಸಶೀಲತೆ ಒಳಗಿನಿಂದಲೇ ಮೂಡಿಬಂದುದು. ಹಾಗಾಗಿ ಆ ದೇಶಗಳಲ್ಲಿ ಆಧುನಿಕತೆಯೆಂಬುದು ಸಾಮಾಜಿಕ ವಿಕಾಸಶೀಲತೆಯ ಒಂದು ಒಂದು ಘಟ್ಟದಲ್ಲಿ ಹುಟ್ಟಿತು' (ಅಶೋಕ ಟಿ.ಪಿ.; ೧೯೯೬; ಪು. ೯೨).

ಆದರೆ ನಮ್ಮ ಭಾರತೀಯ ಸಂದರ್ಭದಲ್ಲಿ ಗಮನಿಸುವುದಾದರೆ ನಮಗೆ 'ಆಧುನಿಕತೆ' ಹೊರಗಿನಿಂದ ಬಂದದ್ದರಿಂದ ತುಂಬಾ ಸಂಕೀರ್ಣವಾದ ಪರಿಣಾಮಗಳನ್ನುಂಟುಮಾಡಿತು. ಇಂದಿಗೂ ಈ 'ಆಧುನಿಕತೆ' ಎಂಬುದು ವರವೋ ಶಾಪವೋ ಎಂಬ ದ್ವಂದ್ವ ನಮ್ಮನ್ನು ಕಾಡುತ್ತಿದೆ. ವಾಸ್ತವವಾದಿ ಪರಂಪರೆಯ ಉಗಮ ಭಾರತದಲ್ಲಿ ನಡೆದದ್ದು ಹೊಸ ಅಗತ್ಯಗಳನ್ನು ನಿರ್ವಹಿಸುವ ಐತಿಹಾಸಿಕ ಅನಿವಾರ್ಯತೆಯಿಂದಾಗಿಯೇ ಹೊರತು ನಮ್ಮ ಅನಿವಾರ್ಯತೆಯಿಂದಲ್ಲ– "ನಮ್ಮ ವಾಸ್ತವತಾವಾದೀ ಪ್ರೇರಣೆಗಳಿಗೆ ಮೂಲ ಈ ಆಧುನಿಕತೆಯ ಪ್ರವೇಶದಿಂದಾಗಿ ಹುಟ್ಟಿದ ಹೊಸ ಪರಿಸ್ಥಿತಿಗಳನ್ನು ನಮಗೆ ಸ್ಪಷ್ಟಪಡಿಸಿಕೊಳ್ಳುವ ಮಾನಸಿಕ ಅನಿವಾರ್ಯತೆ ವಸಾಹತುಶಾಹೀ ತಂತ್ರಗಾರಿಕೆ –ಸುಧಾರಣೆ ಮತ್ತು ಆಕ್ರಮಣಗಳ ಮೂಲಕ ಪ್ರವೇಶವಾದ 'ಆಧುನಿಕತೆ' ನಮ್ಮ ಸಾಮಾಜಿಕ ಸಂರಚನೆಗಳ ಮೇಲೆ, ನಮ್ಮ ಪರಂಪರಾಗತ ಮೌಲ್ಯಗಳ ಮೇಲೆ ಉಂಟುಮಾಡಿದ ಆಘಾತದ ಸ್ವರೂಪ ಕೂಡಾ ಸಂಕೀರ್ಣವಾಗಿದೆ. ಇತಿಹಾಸದುದ್ದಕ್ಕೂ ಪರಕೀಯರ ಆಕ್ರಮಣಕ್ಕೆ ತುತ್ತಾಗುತ್ತಲೇ ಬಂದಿರುವ ಭಾರತೀಯ ಸಮಾಜದ ಮೇಲೆ ಇತರ ಸಂಸ್ಕೃತಿಗಳ ಆಕ್ರಮಣದಿಂದಾಗಿ ಇಲ್ಲಿನ ಹಿಂದೂ ಸಂಸ್ಕೃತಿಯು ಇದರ ಪ್ರಭಾವಕ್ಕೆ ಒಳಪಡುವಂತಾದ ಪರಿಣಾಮ ಉಂಟಾಯಿತು. ಪರಕೀಯ ಸಂಸ್ಕೃತಿಯ ಪರಿಣಾಮವನ್ನು ಎದುರಿಸುವಲ್ಲಿ ಹಿಂದು ಸಮಾಜದಲ್ಲಿದ್ದ ಬಹುಮುಖಿ ಸಂಸ್ಕೃತಿಯು ಬಹುರೂಪಿಯಾದ ಪ್ರಕ್ರಿಯೆಯನ್ನು ವ್ಯಕ್ತಪಡಿಸಿದ ಸಂದರ್ಭವದು– "ವಸಾಹತುಶಾಹಿ ಆಡಳಿತದ ಹಿಂದೆ ಕೈಗಾರಿಕ ಕ್ರಾಂತಿ ಇತ್ತು. ಹೊಸ ವೈಜ್ಞಾನಿಕ ಸಂಸ್ಕೃತಿ ಇತ್ತು. ಇವುಗಳಿಂದ ಪುಷ್ಟಿಗೊಂಡ ಸಾಮ್ರಾಜ್ಯಶಾಹೀ ಆಕ್ರಮಣಶೀಲತೆ ಇತ್ತು. ಹೀಗಾಗಿ ಭಾರತೀಯ ಸಮಾಜ ಮೊಟ್ಟಮೊದಲ ಬಾರಿಗೆ ಹೊಸದೊಂದು ವಾಸ್ತವಕ್ಕೆ ಅನಿವಾರ್ಯವಾಗಿ ತೆರೆದುಕೊಳ್ಳಲೇ ಬೇಕಾಯಿತು. ಆಫ್ರಿಕಾದಲ್ಲಾದದ್ದೂ ಅದೇ" (ಅದೇ ಪು. ೯೩). ಹೀಗಾಗಿ

ವಸಾಹತುಶಾಹಿ ವ್ಯವಸ್ಥೆ ಭಾರತೀಯ ಸಮಾಜದಲ್ಲಿ ತಂದ ಬದಲಾವಣೆಗಳಿಗೆ ಭಾರತದ ಸಮಾಜದ ಸವರ್ಣೀಯರು, ದಲಿತರು ಪ್ರತಿಕ್ರಿಯಿಸಿದ ರೀತಿ ಬೇರೆ ಬೇರೆಯಾಗಿದ್ದವು. ಈ ರೀತಿಯ ಭಿನ್ನ ಪ್ರತಿಕ್ರಿಯೆಗಳನ್ನು ಸಾಹಿತ್ಯವಲಯದಲ್ಲಿ ಸಾಹಿತಿಗಳು ಸಮಗ್ರವಾಗಿ ಗ್ರಹಿಸಬೇಕಾದ ಅನಿವಾರ್ಯತೆ ಉದ್ಭವಿಸಿತು. ವಿಶೇಷವಾಗಿ ವಾಸ್ತವವಾದಿ ನೆಲೆಯಲ್ಲಿ ಕೃತಿರಚನೆಯಲ್ಲಿ ತೊಡಗಿದವರು ಶಿವರಾಮ ಕಾರಂತರಂತಹ ವಾಸ್ತವವಾದಿ ಕಾದಂಬರಿಕಾರರಿಗೆ ಇದೊಂದು ಸವಾಲಾಗಿ ಪರಿಣಮಿಸಿತು. "ರಾಜಾರಾಂ ಮೋಹನ್‌ರಾಯ್ ಅವರ ಸುಧಾರಣಾಪರ ಚಳುವಳಿ, ಗಾಂಧೀಜಿಯವರ ಸಾಮಾಜಿಕ-ರಾಜಕೀಯ ಚಳುವಳಿ, ಅಂಬೇಡ್ಕರ್ ಅವರ ದಲಿತ ಚಳವಳಿ –ಇವೆಲ್ಲವುಗಳನ್ನು ಹೊಸ ಇತಿಹಾಸ ಒಟ್ಟಿಗೇ ಒಳಗೊಂಡಿತ್ತು. ಈ ಮೂರು ರೀತಿಯ ಪ್ರಕ್ರಿಯೆಗಳಿಗೆ ವಾಸ್ತವವಾದೀ ಕಾದಂಬರಿಕಾರ ಏಕಕಾಲದಲ್ಲಿ ಸ್ಪಂದಿಸಬೇಕಾಗಿತ್ತು...." (ಅದೇ ಪು. ೯೪). ಶಿವರಾಮ ಕಾರಂತರಿಗೆ ಎದುರಿದ್ದ ಸಮಾಜದ ಗ್ರಹಿಕೆ ಈ ರೀತಿಯದಾಗಿತ್ತು. ಇಂತಹದ್ದೊಂದು ಸಾಮಾಜಿಕ ಪರಿಸ್ಥಿತಿಯಲ್ಲಿ ಕಾದಂಬರಿಯ ರಚನೆಯಲ್ಲಿ ತೊಡಗಿದ ಕಾರಂತರು ಈ ವಸಾಹತುಶಾಹಿ ಸಂಸ್ಕೃತಿಯು ನಮ್ಮ ದೇಶೀ ಸಂಸ್ಕೃತಿಗಳ ಮೇಲೆ ಬೀರಿದ ಪರಣಾಮವನ್ನು ನಮ್ಮ ಸಮಾಜದಲ್ಲಿ ವ್ಯಕ್ತವಾದ ಭಿನ್ನ ಭಿನ್ನ ಸ್ತರದ ಭಿನ್ನವಾದ ಪ್ರತಿಕ್ರಿಯೆಗಳನ್ನು ತಮ್ಮ ಕೃತಿಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದರು. ಇದು ಒಂದು ರೀತಿಯಲ್ಲಿ ದೇಶೀ ಪ್ರತಿಕ್ರಿಯೆಯನ್ನು ವಿದೇಶಿಯರಿಗೆ, ನಮ್ಮನಾಳಿದ ಬ್ರಿಟಿಷರಿಗೆ ತನ್ಮೂಲಕ ಜಗತ್ತಿಗೆ ಕಾದಂಬರಿಗಳ ಮೂಲಕ ಪ್ರತಿಕ್ರಿಯಿಸಿದ ರೀತಿ ಎಂದೇ ಪರಿಗಣಿಸಬೇಕಾಗುತ್ತದೆ.

ಈ ನೆಲೆಯಲ್ಲಿ ಹುಟ್ಟಿಕೊಂಡ ಕಾರಂತರ ಕಾದಂಬರಿಗಳಿಗೆ ಭಾರತೀಯ ಸಾಹಿತ್ಯದಲ್ಲಿ ಪ್ರಮುಖಪಾತ್ರವಿದೆ. ಬಹುಮುಖ್ಯವಾಗಿ ದೇಶೀ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಲು ಇಂತಹ ಕಾದಂಬರಿಗಳು ಕನ್ನಡ ಭಾಷೆಯಲ್ಲಿಯೇ ಉಳಿದುಹೋದಲ್ಲಿ ಅವು ವ್ಯಕ್ತಪಡಿಸುವ ವಿಚಾರಗಳು ಇಲ್ಲಿಯೇ ಉಳಿದು ಹೋಗುತ್ತಿದ್ದವು. ದೇಶೀ ಸಂಸ್ಕೃತಿಗಳು ನಮ್ಮ ಸಾಮಾಜಿಕ ಬದಲಾವಣೆಗೆ ಕಾರಣೀಭೂತವಾದ ವಸಾಹತುಶಾಹೀ ವ್ಯವಸ್ಥೆಯಿಂದ ಭಾರತೀಯ ಸಮಾಜದಲ್ಲಿ ಆದ ಬದಲಾಣೆಗಳನ್ನು ಚಿತ್ರಿಸುವ ಇಂತಹ ಕಾದಂಬರಿಗಳು ಇಂಗ್ಲಿಷ್ ಸಾಹಿತ್ಯಕ್ಕೆ ಅನುವಾದಗೊಂಡಾಗ ಒಂದು ರೀತಿಯಲ್ಲಿ ಇವು ಇಲ್ಲಿನ ದೇಶೀ ವಿಚಾರಗಳನ್ನು ಇಲ್ಲಿನ ವಾಸ್ತವಿಕ ಚಿತ್ರಣವನ್ನು ಸಾಮಾಜಿಕ ಬದಲಾವಣೆಯ ಬಗೆಯನ್ನು ಪ್ರತಿನಿಧಿಸುವ ಕೃತಿಗಳಾಗಿ ಮೂಡಿಬಂದವು.

ಈ ನಿಟ್ಟಿನಲ್ಲಿ ಆಧುನಿಕ ಭಾರತೀಯ ಭಾಷೆಗಳಿಂದ ಇಂಗ್ಲಿಷಗೆ ಅನುವಾದಗೊಂಡ

ಸಾಹಿತ್ಯಕೃತಿಗಳಲ್ಲಿ ಕಾರಂತರ ಕಾದಂಬರಿಗಳಿಗೆ ವಿಶೇಷವಾದ ಸ್ಥಾನವಿದೆ. ವಾಸ್ತವಿಕ ಲೋಕವನ್ನು ತೆರೆದಿಡುವ ಇಂತಹ ಕೃತಿಗಳು ಭಾರತೀಯ ಸಾಹಿತ್ಯಕ್ಷೇತ್ರದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿವೆ. ಇಂತಹದ್ದೊಂದು ಸನ್ನಿವೇಶದಲ್ಲಿ ಹುಟ್ಟಿಕೊಂಡು ಐತಿಹಾಸಿಕವಾದ ಮಹತ್ವವನ್ನು ಪಡೆದುಕೊಂಡ ಕಾರಂತರ ಯಾವೆಲ್ಲ ಕಾದಂಬರಿಗಳು ಇಂಗ್ಲಿಷಗೆ ಅನುವಾದಗೊಂಡಿವೆ ಎಂಬುದನ್ನು ಪರಿಚಯಿಸುವ ಉದ್ದೇಶವನ್ನು ಈ ಅಧ್ಯಾಯದಲ್ಲಿ ಇಟ್ಟುಕೊಳ್ಳಲಾಗಿದೆ.

ಇಂಗ್ಲಿಷ ಭಾಷೆಗೆ ಅನುವಾದಗೊಂಡ ಕಾರಂತರ ಒಟ್ಟು ಕಾದಂಬರಿಗಳು -ಆರು. ಸಾಹಿತ್ಯದ ಬಹುತೇಕ ಎಲ್ಲಾ ಪ್ರಕಾರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದ ಕಾರಂತರು ಬಹು ಮುಖ್ಯವಾಗಿ ಗುರುತಿಸಿಕೊಂಡದ್ದು ಕಾದಂಬರಿ ಕ್ಷೇತ್ರದಲ್ಲಿ. ಕನ್ನಡದಲ್ಲಿ ಸುಮಾರು ನಲ್ವತ್ತೈದು ಕಾದಂಬರಿಗಳನ್ನು ರಚಿಸಿದ ಕಾರಂತರ ಕೇವಲ ಆರು ಕಾದಂಬರಿಗಳು ಮಾತ್ರ ಇಂಗ್ಲಿಷ ಭಾಷೆಗೆ ಅನುವಾದಗೊಂಡಿರುವುದನ್ನು ಗಮನಿಸಿದಾಗ ಇಂಗ್ಲಿಷನಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿಗಳ ಪ್ರಮಾಣ ಕಡಿಮೆ ಎನಿಸುತ್ತದೆ. ಇಲ್ಲಿಯ ವಾಸ್ತವಿಕ ಚಿತ್ರಣವನ್ನು ಕಟ್ಟಿಕೊಡುವ ಕೃತಿಗಳಾಗಿ ಹೊರಬಂದ ಇಂತಹ ಮಹತ್ವದ ಕೃತಿಗಳು ಯಾಕೆ ಅಷ್ಟೊಂದು ಪ್ರಮಾಣದಲ್ಲಿ ಅನುವಾದಗೊಂಡಿಲ್ಲ ಎಂಬ ವಿಚಾರ ಚರ್ಚೆಗೆ ಒಳಪಡುತ್ತದೆ. ಬಹುಶಃ ಅನುವಾದದ ಮಿತಿಯು ಕಾರಂತರು ಸೃಷ್ಟಿಸಿದ ಪ್ರಾದೇಶಿಕತೆಯನ್ನು ಇಂಗ್ಲಿಷನಂತಹ ಭಾಷೆಯಲ್ಲಿ ಮರುಸೃಷ್ಟಿ ಮಾಡುವುದು ಕಷ್ಟಕರವಾಗಿರಬೇಕು. ಒಂದು ಪ್ರದೇಶದ ಸಂಸ್ಕೃತಿಯನ್ನು ಇನ್ನೊಂದು ಭಿನ್ನವಾದ ಸಂಸ್ಕೃತಿಯಲ್ಲಿ ಪರಿಚಯಿಸುವುದು ಕಷ್ಟಸಾಧ್ಯವಾದ ವಿಚಾರವೇ ಸರಿ.

ಇಂಗ್ಲಿಷಿಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಗಳ ಒಂದು ಸ್ಥೂಲವಾದ ಚಿತ್ರಣವನ್ನು ನೀಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಅಧ್ಯಯನಕ್ಕೆ ಒಳಪಡಿಸಿರುವ ಕಾರಂತರ ಕಾದಂಬರಿಗಳು ಕನ್ನಡ ಸಾಹಿತ್ಯಲೋಕಕ್ಕೆ ಪಾದಾರ್ಪಣೆ ಮಾಡಿದ ಕಾಲಾನುಕ್ರಮಗಳು ಈ ರೀತಿ ಇದೆ:

| ಕಾದಂಬರಿಗಳ ಶೀರ್ಷಿಕೆ | ಪ್ರಕಟಣೆಗೊಂಡ ವರ್ಷ |
|---|---|
| ೧. ಚೋಮನದುಡಿ | ೧೯೩೩ |
| ೨. ಸರಸಮ್ಮನ ಸಮಾಧಿ | ೧೯೩೭ |
| ೩. ಮರಳಿಮಣ್ಣಿಗೆ | ೧೯೪೧ |

೪. ಕುಡಿಯರ ಕೂಡು ೧೯೫೧

೫. ಮೂಕಜ್ಜಿಯ ಕನಸುಗಳು ೧೯೬೮

(೧೯೭೮ರಲ್ಲಿ ಜ್ಞಾನಪೀಠಪ್ರಶಸ್ತಿ ಬಂದ ಕೃತಿ)

೬. ಮೈಮನಗಳ ಸುಳಿಯಲ್ಲಿ ೧೯೭೦

ಈ ಮೇಲಿನಂತೆ ಕಾಲಾನುಕ್ರಮಣಿಕೆ ಹೊಂದಿರುವ ಕೃತಿಗಳು ಇಂಗ್ಲಿಷ ಭಾಷೆಗೆ ಅನುವಾದಗೊಂಡಿರುವ ವರ್ಷಗಳನ್ನು ಗಮನಿಸಬಹುದಾಗಿದೆ.

| ಕಾದಂಬರಿಯ ಶೀರ್ಷಿಕೆ | ಪ್ರಕಟನೆಗೊಂಡ ವರ್ಷ |
|---|---|
| ೧. ಮರಳಿಮಣ್ಣಿಗೆ | ೧೯೫೫ (ಎಸ್.ಎನ್.ಮೂರ್ತಿ) |
| ಮರಳಿಮಣ್ಣಿಗೆ | ೨೦೦೨ ಪದ್ಮಾರಾಮಚಂದ್ರರಾವ್ |
| ೨. ಚೋಮನದುಡಿ | ೧೯೭೮ |
| ೩. ಮೂಕಜ್ಜಿಯ ಕನಸುಗಳು | ೧೯೭೯ |
| ೪. ಕುಡಿಯರ ಕೂಸು | ೧೯೭೯ |
| ೫. ಸರಸಮ್ಮನ ಸಮಾಧಿ | ೧೯೮೪ |
| ೬. ಮೈಮನಗಳ ಸುಳಿಯಲ್ಲಿ | ೧೯೯೭. |

**೧. ಚೋಮನದುಡಿ**

೧೯೩೮ರಲ್ಲಿ ಪ್ರಕಟಗೊಂಡ ಕಾರಂತರ 'ಚೋಮನದುಡಿ' ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಬಿಂಬಿಸುವ ಕೃತಿಯಾಗಿದೆ. ಶತಶತಮಾನಗಳಿಂದ ಶೋಷಣೆಗೆ ಒಳಗಾಗಿರುವ ದಲಿತರ ಬದುಕಿನ ನೋವು. ನಿರಾಶೆ, ಹತಾಶೆಗಳನ್ನು ಕಟ್ಟಿಕೊಡುವ ಕಾದಂಬರಿ ಇದಾಗಿದೆ. ಸಾಮಾಜಿಕವಾದ ಸ್ಥಾನಮಾನಗಳಿಂದ ವಂಚಿತನಾದ, ಯಾಜಮಾನ್ಯ ಪದ್ಧತಿಯಲ್ಲಿ ಊಳಿಗ ಮಾಡಿಕೊಂಡೇ ಬದುಕನ್ನು ಸವೆಸಬೇಕಾದ ದುರಂತಮಯ ಸನ್ನಿವೇಶದಲ್ಲಿ ಬದುಕುವ ಚೋಮ ಅಂದಿನ ಎಲ್ಲ ದಲಿತವರ್ಗದ ಪ್ರತಿನಿಧಿಯಾಗಿ ನಿಲ್ಲುತ್ತಾನೆ. ಬದುಕಿನಲ್ಲಿ ಬಿಡುಗಡೆಯನ್ನು ಬಯಸಿ ಸ್ವಂತದ್ದಾದ ಉಳುಮೆ ಮಾಡಬೇಕೆಂಬ ಚೋಮನ ಕನಸು ಕೊನೆಗೂ ಈಡೇರದೇ ಕೊನೆಯಲ್ಲಿ ದುರಂತಮಯ ಸನ್ನಿವೇಶದಲ್ಲಿಯೇ ಮುಕ್ತಾಯವಾಗುವ ಕಾದಂಬರಿ ಇದಾಗಿದೆ. ಸಮಾಜದಲ್ಲಿ ಬೇರುಬಿಟ್ಟಿದ್ದ ಅನಿಷ್ಟಪದ್ಧತಿಯಿಂದಾಗಿ ಹೊಲೆಯನಾಗಿ

ಹುಟ್ಟಿದ ಚೋಮ ಮತ್ತು ಅವನ ಸಂಸಾರ ಜೀತದಾಳುಗಳಾಗಿ ದುಡಿದೇ ಬದುಕನ್ನು ಸವೆಸುವ ಕನಸುಗಳೇನಿದ್ದರೂ ಅವುಗಳನ್ನು ಈಡೇರಿಸಿಕೊಳ್ಳಲಾಗದ ನಿರಾಶೆಯಲ್ಲೇ ಬದುಕನ್ನು ಕೊನೆಗಾಣಿಸುವ ಚಿತ್ರ ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಹೆಂಡತಿಯನ್ನು ಕಳೆದುಕೊಂಡು ನಾಲ್ಕು ಗಂಡು ಹಾಗೂ ಒಬ್ಬಳು ಹೆಣ್ಣುಮಗಳು ಇವರನ್ನೊಳಗೊಂಡ ಚೋಮನ ಸಂಸಾರದ ವಾಸ್ತವ್ಯ ಮುರುಕು ಗುಡಿಸಲೊಂದರಲ್ಲಿ. ಚೋಮನ ಸಂಸಾರಕ್ಕೆ ಅಂಟಿಕೊಂಡ ಕರಿಬಾಡು ನಾಯಿ, ಅಡವಿಯಲ್ಲಿ ಸಿಕ್ಕಿದ ಎರಡು ಎತ್ತುಕರುಗಳು ಇವುಗಳ ಜೊತೆಗೆ ಚೋಮನ ಆರಾಧ್ಯದೈವ –ಪಂಜುರ್ಲಿಭೂತ, ಚೋಮ ಪ್ರತಿನಿತ್ಯ ಜೀತದಾಳಾಗಿ ದುಡಿಯುವ ಮನೆಯ ದಣಿ ಸಂಕಪ್ಪಯ್ಯ, ಚೋಮನ ಕುಡಿತದ ಚಪಲ ತೀರಿಸುವ ಹೆಂಡದಂಗಡಿಯ ಬಿರುಮ, ಚೋಮನ ಎದೆಯ ತುಡಿತದ–ಮಿಡಿತದ ನೋವು ನಿರಾಶೆಗಳ ಪ್ರತಿನಿಧಿಯಾದ ದುಡಿ –ಅದರ ಮೂಲಕ ಹೊರಹೊಮ್ಮುವ 'ಢಮಢಮ ಢಕಢಕ್ಕ' ನಾದ –ದುಡಿಯ ಈ ಬಡಿತಕ್ಕೆ ಮಗಳು ಬೆಳ್ಳಿಯ 'ಲೇಲೇಲೇಲೇ, ಲೇಲೇಲೇಲೇ' ಹಾಡು ಇವಿಷ್ಟು ಚೋಮನ ಸಂಪರ್ಕದಲ್ಲಿ ಬರುವ ಪರಿಸರ.

ಕೇವಲ ೩೦ ಪುಟಗಳನ್ನು ಹೊಂದಿರುವ ಕಾದಂಬರಿಯಲ್ಲಿ ಕಾರಂತರ ಸರ್ವತೋಮುಖತೆಯ ದರ್ಶನವಾಗುತ್ತದೆ. ಗ್ರಾಮಜೀವನದ ಅನುಭವ, ಹಲವು ಹೊಲೆಯರ ಮನೆಗಳನ್ನು ಕಂಡು ಕೇವಲ ಐದು ದಿನಗಳಲ್ಲಿ ಬರೆದ ಕಾದಂಬರಿ ಇದು ಎಂದು ಕಾರಂತರೇ ಹೇಳಿಕೊಂಡಿದ್ದಾರೆ. ತುಂಡುಹೊಲವನ್ನು ಬೇಸಾಯ ಮಾಡಬೇಕೆಂಬ ಕನಸನ್ನು ಕಟ್ಟಿಕೊಂಡು ಅದನ್ನು ನನಸಾಗಿಸುವ ನಿಟ್ಟಿನಲ್ಲಿಯೇ ಬದುಕಿನ ಪೂರ್ತಿ ಧಣಿಯ ಮನೆಯ ಜೀತದಲ್ಲೇ ಕಳೆಯುವ ಚೋಮ ಮತ್ತು ಅವನ ಸಂಸಾರದ ಕನಸು ಕೊನೆಗೂ ಈಡೇರಲಾರದು. ಕಾಫಿತೋಟದ ಸಾಲದ ತೀರುವಳಿಗಾಗಿ ಮಕ್ಕಳಾದ ಚನಿಯ, ಗುರುವರನ್ನು ಕಳುಹಿಸುವ ನಿರ್ಧಾರ ಚೋಮನದೇ ಹೊರತು ಬೇಸಾಯದ ಕನಸನ್ನು ನನಸಾಗಿಸಲು ಅಡವಿಯಲ್ಲಿ ಸಿಕ್ಕಿದ ಎತ್ತುಗಳನ್ನು ಮಾರುವುದಲ್ಲ. ಸಂಪ್ರದಾಯಕ್ಕೆ ಬದ್ಧರಾದ ಸಂಕಪ್ಪಯ್ಯ ವಿಶೇಷವಾದ ಅವರ ತಾಯಿಯ ವಿರೋಧವೇ ಚೋಮನನ್ನು ಬೇಸಾಯಗಾರನಾಗಿಸುವಲ್ಲಿ ಉಂಟಾದ ವಿರೋಧ ಯಜಮಾನ ಪದ್ಧತಿಯಿಂದಾಗಿ ಜೀತಕ್ಕೆ ಬದುಕನ್ನು ಮೀಸಲಾಗಿಟ್ಟ ಚೋಮ ಮತ್ತು ಅವನ ಕುಟುಂಬ ಶೋಷಣೆಯ ಸುಳಿಗೆ ಸಿಕ್ಕು ಇಡೀ ಕುಟುಂಬ ಹರಿದು ಹಂಚಿ ಹೋಗುತ್ತದೆ. ಸಂಕಪ್ಪಯ್ಯನ ಮನೆಯ ಜೀತ, ಕಾಫಿತೋಟದ ಸಾಲ ಇಂತಹ ಚೋಮನ ಸಂಸಾರವನ್ನು ನಲುಗುವಂತೆ ಮಾಡುವ ಸಂಗತಿಗಳು ಹೃದಯವಿದ್ರಾವಕವಾಗಿ ಮೂಡಿಬಂದಿದೆ. ಬೆಳ್ಳಿ ತನ್ನ ಬದುಕನ್ನು ಮಿಂಗೇಲ,

ಮನ್ವೇಲರ ಕಾಮದಾಹಕ್ಕೆ ಸಮರ್ಪಣೆ ಮಾಡಿದರೆ, ಗುರುವ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳುತ್ತಾನೆ. ಚನಿಯ ಜ್ವರದ ಬಾಧೆ ತಾಳಲಾರದೇ ಅಸುನೀಗಿದರೆ, ನೀಲ ಹೊಲೆಯನಾದ್ದರಿಂದ ರಕ್ಷಿಸುವವರಿಲ್ಲದೇ ನೀರಿನಲ್ಲಿ ಮುಳುಗಿ ಸಾಯಬೇಕಾದ ಪ್ರಸಂಗ ಬರುತ್ತದೆ. ಒಂದು ಹಂತದಲ್ಲಿ ನಿರಾಸೆಗೊಂಡ ಚೋಮನ ಮನಸ್ಸಿನಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಿಯಾದರೂ ಬೇಸಾಯಗಾರನಾಗಬೇಕೆಂಬ ಮನಸ್ಸು ಮಾಡಿದರೂ ಪರಂಪರಾಗತವಾಗಿ ಬಂದ ರೂಢಿ, ಸಂಪ್ರದಾಯ, ಶೋಷಣೆಯ ಬದುಕನ್ನೇ ಸವೆಸುತ್ತಿದ್ದುದು ತಾನು ನೆಚ್ಚಿದ ದೈವ ಪಂಜುರ್ಲಿ ಭೂತಕ್ಕೆ ಹೆದರಿ ಈ ಕಾರಣದಿಂದಲೇ ಬೇಸಾಯಗಾರನಾಗಬೇಕೆಂಬ ಕನಸನ್ನೇ ತೊರೆಯುತ್ತಾನೆ.

ಕ್ರೈಸ್ತಧರ್ಮ ಹೊಲೆಯರನ್ನು ಮತಾಂತರಕ್ಕೆ ಪ್ರಚೋದಿಸುವ ಸೂಕ್ಷ್ಮ ವಿಚಾರವೂ ಕಾದಂಬರಿಯಲ್ಲಿ ಪ್ರಸ್ತಾಪಿತವಾಗಿರುವುದರ ಜೊತೆಗೆ ಸಮಾಜದಲ್ಲಿನ ಅನಿಷ್ಟಪದ್ಧತಿಯಿಂದಾಗಿ ಹೇಗೆ ಹೊಲೆಯರ ಬದುಕಿನ ಕನಸುಗಳು ಕಮರಿಹೋಗಿವೆ ಎಂಬುದನ್ನು ಓದುಗರಿಗೆ ಮನಮುಟ್ಟಿಸುವ ಕಾರಂತರ ಪ್ರಯತ್ನ 'ಚೋಮನದುಡಿ' ಕಾದಂಬರಿಯಲ್ಲಿ ಸಾಬೀತಾಗಿದೆ. ದುಡಿಯೊಂದೇ ಚೋಮನ ಸಂಗಾತಿಯಾಗಿ ಕೊನೆಯ ಕ್ಷಣದವರೆಗೂ ಇರುವುದು. ತನ್ನೆಲ್ಲ ಆಕ್ರೋಶ, ಹತಾಶೆ, ನಿರಾಶೆ ಬದುಕಿನ ವಿಶಾದವನ್ನು ದುಡಿಯ ಮೂಲಕವೇ ವ್ಯಕ್ತಪಡಿಸುವ ಚೋಮ ಇನ್ನೇನನ್ನೂ ಮಾಡಲಾರದವನಾಗುತ್ತಾನೆ. ಒಟ್ಟಿನಲ್ಲಿ ಕಾದಂಬರಿ ಶೋಷಣೆಗೆ ತುತ್ತಾಗಿ ಬದುಕು ಜರ್ಜರಿತವಾದ ಹೊಲೆಯನೊಬ್ಬನ ಬದುಕಿನ ದುರಂತವನ್ನು ಚಿತ್ರಿಸುವಲ್ಲಿ ಅತ್ಯಂತ ಯಶಸ್ವಿಯಾಗಿದೆ. ಕಾದಂಬರಿಯ ಯಶಸ್ಸನ್ನು ಗುರತಿಸುತ್ತ ವಸಾಹತುಶಾಹಿಯ ಪ್ರಭಾವವೂ ಹೇಗೆ ಗ್ರಾಮೀಣ ಬದುಕಿನ ಪರಂಪರಾಗತ ಮೌಲ್ಯಗಳ ಮೇಲೆ ಪರಿಣಾಮ ಬೀರಿತು ಎಂಬುದನ್ನು ಟಿ.ಪಿ. ಅಶೋಕರು ಈ ಕಾದಂಬರಿಯಲ್ಲಿ ಗುರುತಿಸಿದ್ದಾರೆ: "ಈ ಹಿನ್ನೆಲೆಯಲ್ಲಿ 1932ರಲ್ಲಿ ಮೊದಲು ಪ್ರಕಟವಾದ ಕಾರಂತರ 'ಚೋಮನದುಡಿ'ಯ ಯಶಸ್ಸು ಅಸಾಧಾರಣವಾದದ್ದು. ಅಸ್ಪೃಶ್ಯಜಾತಿಗೆ ಸೇರಿದವನೊಬ್ಬನಿಗೆ ಭೂಮಿಯ ಒಡೆತನದ ಆಸೆ ಹುಟ್ಟಿದ್ದು, ಅದರಿಂದ ಎದ್ದ ಪ್ರಶ್ನೆಗಳು ಭಾರತೀಯ ಜಾತಿವ್ಯವಸ್ಥೆಯ ಸಂದರ್ಭದಲ್ಲಿ ಪರಂಪರಾಗತ ಮೌಲ್ಯಗಳಿಗೆ ಮಾತ್ರ ಮುಖಾಮುಖಿಯಾಗದೆ, ವಸಾಹತುಶಾಹಿ ಮೌಲ್ಯಗಳಿಗೂ ಒಂದು ಮಟ್ಟದಲ್ಇಲ ಮುಖಾಮುಖಿಯಾಗುವುದು ಈ ಕೃತಿಯ ವೈಶಿಷ್ಟ್ಯವಾಗಿದೆ" (ಅದೇ ಪು. ೯೫).

ಕಾರಂತರು 'ಚೋಮನದುಡಿ'ಯ ಮುಖಾಂತರ ಸಾರ್ವತ್ರಿಕವಾದ ಮೌಲ್ಯವನ್ನು ಸಾರುವ ಪ್ರಯತ್ನವನ್ನು ಮಾಡಿದ್ದಾರೆ. ಚೋಮ ಕೇವಲ ಒಂದು ಪ್ರದೇಶಕ್ಕೆ ಸೀಮಿತವಾದ

ಪಾತ್ರವಾಗಿರದೆ ಆತನ ಪಾತ್ರಕ್ಕೆ ಸಾರ್ವತ್ರಿಕವಾದ ಮೌಲ್ಯವಿರುವುದನ್ನು ಕಾಣಬಹುದಾಗಿದೆ. ಹೊಲೆಯರ ಸ್ಥಾನಮಾನವನ್ನು ಸಮಾಜದ ಕಟ್ಟುಪಾಡುಗಳಿಗೆ ಒಳಪಟ್ಟು ಹೇಗೆ ಚೋಮನಂತವರ ಕನಸುಗಳು ಮಣ್ಣುಪಾಲಾಗುತ್ತವೆ ಎಂಬುದನ್ನು ಜಾಗತಿಕ ಮಟ್ಟದಲ್ಲಿನ ಎಲ್ಲ ಹೊಲೆಯ ಜನಾಂಗಕ್ಕೆ ಅನ್ವಯಿಸಿ ನೋಡಬಹುದಾಗಿದೆ ವಿಮರ್ಶಕರ ಅಭಿಪ್ರಾಯವು ಈ ವಿಚಾರವನ್ನು ಪುಷ್ಟೀಕರಿಸುತ್ತದೆ. "ಕಾರಂತರ ಕಾದಂಬರಿಗಳಲ್ಲಿ ಬರುವ ಪಾತ್ರಗಳಲ್ಲಿ 'ಚೋಮ'ನಿಗೆ ಒಂದು ವಿಶೇಷವಾದ ಸ್ಥಾನವಿದೆ. ಚೋಮ ಒಬ್ಬ ಸಾರ್ವತ್ರಿಕವ್ಯಕ್ತಿ (Universal character). ಪರಿಸ್ಥಿತಿಯನ್ನು ಬದಲಿಸಿ ಭಾರತದ ಹಿನ್ನೆಲೆಯನ್ನು ಬಿಟ್ಟು ಬೇರೆ ಯಾವ ದೇಶದಲ್ಲಿಯೂದರೂ ಚೋಮನನ್ನು ಇಟ್ಟು ನೋಡಿ; ಅವನ ಸರ್ವಸಮನ್ವಯ ಮೌಲ್ಯ(Universal values)ಗಳು ಗಮನಕ್ಕೆ ಬರುವುದು. ಚೋಮನಿಗೆ ದುರಾಸೆ ಇದೆಯೇ? ಸುಳ್ಳು ಕಪಟಗಳು ಅವನಲ್ಲಿ ಕಾಣುತ್ತವೆಯೇ? ಧಣಿಗಳ ಮೇಲೆ ಕೋಪವೇ? ಅಥವಾ ಧಣಿಗಳ ತಾಯಿಯ ಮೇಲೆ ಕೋಪವೇ? ಈ ಎಲ್ಲ ಪ್ರಶ್ನೆಗಳಿಗೂ ದೊರೆಯುವ ನಕಾರ ಉತ್ತರಗಳು ಅವನ ಸಹೃದಯತೆಯನ್ನು, ಅವನ ನಿಷ್ಕಪಟ ಜೀವನವನ್ನು ವ್ಯಕ್ತಪಡಿಸುತ್ತದೆ. ತಂದೆಯ ಪಾತ್ರದಲ್ಲಿ ಅವನ ಆಸೆ, ಆಕಾಂಕ್ಷೆ, ನೋವು ಮತ್ತು ವಾತ್ಸಲ್ಯ, ಹೊಲೆಯ ಜೀವನದ ಮೂಲಭೂತವಾದ ರೂಢಿಗಳು ಮತ್ತು ಭಾವನೆಗಳು ಬಹಳ ಸ್ವಾರಸ್ಯವಾಗಿ ಮನಮುಟ್ಟುವಂತೆ ಮೂಡಿಬಂದಿದೆ. ಮಗ ನೀಲನು ನೀರಲ್ಲಿ ಮುಳುಗಿ ಸತ್ತಾಗಲೂ ಕೂಡ ತನ್ನ ಹಣೆಬರಹವನ್ನು ಹಳಿಯುತ್ತಾನೆ ಹೊರತು, ಯಾರನ್ನೂ ದೂಷಿಸುವುದಿಲ್ಲ. ಕಾರಂತರು ಈ ಕಾದಂಬರಿಯಲ್ಲಿ ಗಾಂಧೀಜಿಯವರ ಹರಿಜನ ಚಳವಳಿಯಿಂದ ಉತ್ತೇಜಿತರಾಗಿರಬಹುದೆಂಬ ಅನುಮಾನವೂ ಓದುಗರಲ್ಲಿ ಬರಬಹುದು....." (ನಾಗ ಐತಾಳ (ಸಂ.); ೨೦೦೦; ಪು. ೧೨೭).

'ಚೋಮನದುಡಿ'ಯಲ್ಲಿ ಕಾರಂತರು ಆಧುನಿಕತೆಯ ಪ್ರಭಾವವನ್ನು ಪರಿಚಯಿಸುತ್ತಾರೆ. ಸಾಮಾಜಿಕ ಮೌಲ್ಯಗಳು ಬದಲಾವಣೆಯ ಹಾದಿಯನ್ನು ಹಿಡಿಯುವುದನ್ನು ಕಾಣಬಹುದಾಗಿದೆ. ವಸಾಹತುಶಾಹಿ ಮೌಲ್ಯಗಳಿಗೆ ಈ ಕೃತಿಯನ್ನು ಕಾರಂತರು ಮುಖಾಮುಖಿಯಾಗಿಸುವುದನ್ನು ಗುರುತಿಸಬಹುದಾಗಿದೆ. ಕರುಣಾಕರ ಶೆಟ್ಟಿಯವರು ಇದೇ ವಿಚಾರವನ್ನು ಎತ್ತಿ ಹಿಡಿಯುತ್ತಾರೆ. "......ಅಸ್ಪೃಶ್ಯಜಾತಿಗೆ ಸೇರಿದವನಿಗೆ ಭೂಮಿಯ ಒಡೆತನದ ಆಸೆ ಹುಟ್ಟಿ –ಇದರಿಂದಾಗಿ ಅವನ ಬಾಳಲ್ಲಿ ಅವನನ್ನು ನಂಬಿಕೊಂಡು ಬಂದವರ ಬಾಳಲ್ಲಿ, ಅವನ ಬಾಳಿನ ಸುತ್ತಮುತ್ತ ಬರುವವರ ಬಾಳಲ್ಲಿ ಎದುರಾಗುವ ಪ್ರಶ್ನೆಗಳು ಭಾರತೀಯ ಹಳೆ ವ್ಯವಸ್ಥೆಯ ಸಂದರ್ಭದಲ್ಲಿ ಅವುಗಳಿ ಮಾತ್ರ ಎದುರುಗಡೆ

ವಸಾಹತುಶಾಹಿ ಮೌಲ್ಯಗಳಿಗೆ ಒಂದು ಮಟ್ಟದಲ್ಲಿ ಮುಖಾಮುಖಿಯಾಗುವುದು ಈ ಕೃತಿಯ ಔಚಿತ್ಯವೆನ್ನಬಹುದು". (ಕರುಣಾಕರ ಶೆಟ್ಟಿ ಎಸ್.; ೨೦೦೩; ಪು. ೧೬೭-೧೬೮)

ಆದರೆ ಚೋಮನ ಕಾಲದಲ್ಲಿ ಭಾರತೀಯ ಸಮಾಜ ಒಂದು ಹೊಸ ಮೌಲ್ಯ ವ್ಯವಸ್ಥೆಯ ಆಗಮನವನ್ನು ಎದುರು ನೋಡುವುದು ನಮ್ಮ ಅರಿವಿಗೆ ಬರುತ್ತದೆ. ಹೀಗೆ 'ಚೋಮನದುಡಿ' ಕಾದಂಬರಿ ಕೇವಲ ಪ್ರಾದೇಶಿಕತೆಯನ್ನು ಬಿಂಬಿಸದೆ ಜಾಗತಿಕ ಮೌಲ್ಯಗಳನ್ನು ಹೊಂದಿದ ಕಾದಂಬರಿಯಾಗಿದೆ ಎಂಬುದನ್ನು ಗಮನಿಸಬಹುದಾಗಿದೆ.

**೨ ಸರಸಮ್ಮನ ಸಮಾಧಿ**

೧೯೨೮ರಲ್ಲಿ ಪ್ರಕಟವಾದ ಕಿರುಕಾದಂಬರಿಯಾದ 'ಸರಮ್ಮನ ಸಮಾಧಿ'ಯು ಕಾರಂತರ ಮೊದಲ ಸಾಮಾಜಿಕ ಸಾಹಿತ್ಯಕೃತಿಯಾಗಿದೆ. ಸಾಮಾಜಿಕ ಸಮಾನತೆಯಿಂದ ದೂರ ಉಳಿದಿರುವ, ಶೋಷಣೆಗೆ ತುತ್ತಾಗಿರುವ ದಲಿತರ ಬಗೆಗೆ ಇರುವ ಅನುಕಂಪ ಕಾರಂತರಿಗೆ ಸಮಾಜದಲ್ಲಿ ತುಳಿತಕ್ಕೆ, ಶೋಷಣೆಗೆ ತುತ್ತಾಗಿರುವ ಮಹಿಳೆಯ ಬಗೆಗೂ ಇದೆ. ಹಲವಾರು ವರ್ಷಗಳಲ್ಲಿ ಸಮಾಜದಲ್ಲಿ ಜಡ್ಡುಗಟ್ಟಿದ ಮೂಢನಂಬಿಕೆಗಳು, ಸಂಪ್ರದಾಯಗಳು ಎಷ್ಟೋ ಮಹಿಳೆಯರ ಸ್ವಾತಂತ್ರ್ಯವನ್ನು, ಸಂತೋಷವನ್ನು ಕಸಿದುಕೊಂಡು ಅವರ ಬಾಳನ್ನು ನರಕಸದೃಶ ಮಾಡಿರುವುದರ ಕುರಿತು ಕಾರಂತರಿಗೆ ಸಾಮಾಜಿಕ ಅರಿವು ಇದೆ. ಇಂತಹದ್ದೊಂದು ಸಮಾಜವನ್ನು ಕಾಡುವ ಮೂಲಭೂತವಾದ ಸಾಮಾಜಿಕ ಸಮಸ್ಯೆಯನ್ನೇ ಈ ಕಾದಂಬರಿಯಲ್ಲಿ ವಸ್ತುವನ್ನಾಗಿಸಿಕೊಂಡಿದ್ದಾರೆ. ವಿವಿಧ ಪರಿಸ್ಥಿತಿಗಳಲ್ಲಿ ಒಟ್ಟಾರೆ ತುಳಿತಕ್ಕೆ ಒಳಗಾದ ಮಹಿಳೆಯರ ಚಿತ್ರಣವೂ ಕಾದಂಬರಿಯುದ್ದಕ್ಕೂ ಕಂಡುಬರುತ್ತದೆ.

ವಿವಿಧ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಂಡ 'ಸರಸಮ್ಮನ ಸಮಾಧಿಯಲ್ಲಿ ಮುಖ್ಯವಾಗಿ ಮಹಿಳೆಯರ ಬದುಕಿನ ಹತಾಶಸ್ಥಿತಿಯನ್ನು ಅವರ ನೋವು ನಿರಾಶೆಗಳನ್ನು ಚಿತ್ರಿಸುವಲ್ಲಿ ಕಾರಂತರು ಯಶಸ್ವಿಯಾಗಿದ್ದಾರೆ. ಜಾನಕಿಗೆ ಮಗಳ ಮದುವೆಮಾಡಿ ಮುಗಿಸುವ ಅವಸರವಾದರೆ ಅವಳ ಗಂಡ ತಿಮ್ಮಪ್ಪಯ್ಯ ಹೊಣೆಗೇಡಿಯಾಗಿ, ಸ್ವಾರ್ಥಿಯಾಗಿ ಹೆಂಡತಿಯನ್ನು ಅಬ್ಬರಿಸುತ್ತ ಕಾಲಕಳೆಯುವ ಅಣ್ಣಪ್ಪಯ್ಯ ಹಾಗೂ ಸುನಾಲಿನಿ ಇವರ ದಾಂಪತ್ಯದಲ್ಲಿ ಗಂಡಹೆಂಡಿರ ಮಧ್ಯೆ ವಿರಸಮೂಡಿ ಹೆಂಡತಿಯ ಮನಸ್ಸನ್ನು ಅರಿಯುವ, ಅವಳ ಇಷ್ಟಕಷ್ಟಗಳನ್ನು ಒಂದಿಷ್ಟು ಗಮನಿಸದಿರುವ ಗಂಡ, ಹೆಂಡತಿ ಅಕ್ಷರಸ್ಥಳಾಗಿರುವುದರಿಂದ

ಒಳಗೊಳಗೆ ನಿರಕ್ಷಸ್ಥನಾದ ತನ್ನ ಬಗೆಗೆ ಕೀಳರಿಮೆ ಇಟ್ಟುಕೊಂಡೇ ಅವಳನ್ನು ತಾತ್ಸಾರದಿಂದ ಕಾಣುವ ಅಣ್ಣಪ್ಪಯ್ಯ, ತನ್ನ ತಾಯಿ ಹೇಳಿದಂತೆ ಕುಣಿಯುವ ಮಗ, ತಾಯಿ ಮಗ ಇಬ್ಬರೂ ಸೇರಿ ಸುನಾಲಿಯ ಸಂತೋಷವನ್ನು ಕಸಿದುಕೊಳ್ಳುತ್ತಾರೆ. ಒಟ್ಟಾರೆ ಅವಳಿಗೆ ಇತ್ತ ಗಂಡನ ಮನೆಯಲ್ಲೂ ಸಂತೃಪ್ತಿ ಇಲ್ಲದೇ, ತಂದೆಯ ಮನೆಗೆ ತನ್ನ ದುಃಖವನ್ನು ಹೊತ್ತೊಯ್ಯಲಾರದೇ ಸರಸಮ್ಮನ ಮೊರೆಹೋಗುವ ಪ್ರಸಂಗ ಬರುತ್ತದೆ. ಹಣದ ದಾಹ ಹಿಡಿದ ಅಣ್ಣಪ್ಪಯ್ಯನಿಗೆ ಓದು ಕಲಿತ ಹೆಣ್ಣಿನೊಂದಿಗೆ ಬಾಳ್ವೆ ನಡೆಸುವುದು ಸಾಧ್ಯವಿಲ್ಲದ ಮಾತು. ಭಾಗೀರಥಿ, ಹಿರಣ್ಣಯ್ಯರಲ್ಲಿ ಭಾಗೀರಥಿಯು ಸ್ವಾಭಿಮಾನಿಯಾಗಿ, ಸ್ವಾತಂತ್ರ್ಯವನ್ನು ಬಯಸುವವಳಾದರೆ ಅವಳ ಗಂಡ ಹಿರಣ್ಣಯ್ಯ ತಂದೆಯೆದುರು ಹೆಂಡತಿಯ ಸ್ಥಾನಮಾನವನ್ನು ಕಾಪಾಡಿಕೊಳ್ಳಲಾಗದವನೂ, ಪರಾವಲಂಬಿಯೂ ಆಗಿ ಚಿತ್ರಿತನಾಗಿದ್ದಾನೆ. ಜಾನಕಿಯ ಮಗಳು ನಾಗವೇಣಿ ಹಳ್ಳಿಯ ಮುಗ್ಧತೆಯನ್ನು ಮೈಗೂಡಿಸಿಕೊಂಡು ಬೆಳೆದ ನಗರದ ಸಂಸ್ಕೃತಿಯನ್ನೆ ಅಪ್ಪಿಕೊಂಡು ರೋಮ್ಯಾಂಟಿಕ್ ಕಲ್ಪನೆಗಳಲ್ಲೇ ಮುಳುಗಿದ್ದ ಇಂಗ್ಲಿಷ್ ಕಲಿತ ಸೀತಾರಾಮರ ಮದುವೆಯು ಅಸ್ತವ್ಯಸ್ತ ಸಂಸಾರದ ಚಿತ್ರಣವನ್ನು ಕೊಡುತ್ತದೆ. ಕಾದಂಬರಿಯಲ್ಲಿ ಬರುವ ಚಂದ್ರಯ್ಯ ಕಾದಂಬರಿಯ ತುಂಬಾ ಅಲೆದಾಡುತ್ತ, ಪ್ರೇತದೊಂದಿಗೆ ಸಂಭಾಷಣೆ ನಡೆಸುತ್ತ ವಿವಾಹಿತ ಹೆಣ್ಣುಗಳತ್ತ ಆಕರ್ಷಿತನಾಗುತ್ತ ಅಂತ್ಯದಲ್ಲಿಯೂ ಸಮಾಧಾನವನ್ನು ಹುಡುಕುತ್ತಲೇ ಅತೃಪ್ತಿಯಿಂದಲೇ ಬದುಕು ಸಾಗಿಸಿದವ. ಹೀಗೆ ವಿಭಿನ್ನ ಮನೋವೃತ್ತಿಗಳನ್ನು ಪ್ರದರ್ಶಿಸುವ ಪಾತ್ರಗಳು ಬದುಕಿನಲ್ಲಿ ವಿಫಲತೆಯನ್ನು ಅನುಭವಿಸುತ್ತವೆ. ಈ ಎಲ್ಲ ಪಾತ್ರಗಳು ತಮ್ಮ ಮನೋಕ್ಲೇಶವನ್ನು ಪರಿಹರಿಸಿಕೊಳ್ಳುವುದಕ್ಕೆ ಸರಸಮ್ಮನ ಸಮಾಧಿಯತ್ತಲೇ ಬರುವುದು. ತಮ್ಮ ಬದುಕಿನ ದುಃಖದುಮ್ಮಾನಗಳನ್ನು ಕಳೆಯುವುದು ಸರಸಮ್ಮನಿಗೆ ಮಾತ್ರ ಸಾಧ್ಯ ಎಂಬ ನಂಬಿಕೆ ಗಟ್ಟಿಯಾಗಿ ಬೆಳೆದುನಿಂತಿದೆ. ಕೊನೆಯಲ್ಲಿ ಪರಿಸ್ಥಿತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಲೇ ಈ ಪಾತ್ರಗಳು ಸಾಗುತ್ತವೆ.

ಗಂಡನ ಎಲ್ಲ ಅನಾನುಕೂಲತೆಗಳನ್ನು ನುಂಗಿಕೊಂಡೇ, ಮಗಳಿಗೆ ಅಸಲಿ ಎಂದು ಖೊಟ್ಟ ಬಂಗಾರದ ಒಡವೆಗಳನ್ನು ತಂದರೂ, ಮಗಳು ಜಾನಕಿಯನ್ನು, ಇಬ್ಬರು ಹೆಂಡಿರನ್ನು ಕಳೆದುಕೊಂಡ, ವಯಸ್ಸಿನಲ್ಲಿ ಅಜಗಜಾಂತರವಿರುವ ಗಂಡಿಗೆ ಕೊಡಲು ಜಾನಕಿ ಒಪ್ಪಿಕೊಂಡು ತನ್ನ ಗಂಡನೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾಳೆ. ಆರಂಭದಲ್ಲಿ ಅನ್ಯಾಯ, ಶೋಷಣೆಯ ವಿರುದ್ಧ ಧ್ವನಿ ಎತ್ತುವ ಸುನಾಲಿನಿ ಅನಂತರದಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಅನಂತರ ಚಂದ್ರಯ್ಯನಿಂದ ಪ್ರೇರಿತಳಾಗಿ ತಂದೆಮನೆಗೆ ಹೋಗಲು ಒಪ್ಪುತ್ತಾಳೆ. ಹಿರಣಯ್ಯನ ಹೇಡಿತನವನ್ನು ಧಿಕ್ಕರಿಸುವ ಭಾಗೀರಥಿಗೆ ಚಂದ್ರಯ್ಯನೊಂದಿಗೆ ಬೆರೆಯುವ ಭಾವನೆ

ಉತ್ಕಟವಾಗಿದ್ದರೂ ಕೊನೆಯಲ್ಲಿ ಹಿರಣಯ್ಯನ ಜೊತೆಯಲ್ಲೇ ಉಳಿಯುವ ನಿರ್ಧಾರ ಮಾಡುತ್ತಾಳೆ.

ಊರಜನತೆ ಸರಸಮ್ಮನನ್ನು ಮಹಾಪತಿವ್ರತೆ ಎಂದು ಭಾವಿಸಿ ಬದುಕಿದ್ದರೂ ಕಾದಂಬರಿಯ ಕೊನೆಯಲ್ಲಿ ಸರಸಮ್ಮನು ಶೋಷಣೆಗೆ ತುತ್ತಾಗಿ ಅತೃಪ್ತ ಜೀವನವನ್ನು ಸವೆಸಿಯೇ ಗಂಡನಿಗೆ ಬೇಡದವಳಾಗಿ, ಬೇರೆ ಗಂಡನ ಬಯಸಿದ್ದವಳಾಗಿಯೂ ಗಂಡ ಸತ್ತಾಗ ಬಲಾತ್ಕಾರಪೂರ್ವಕವಾಗಿ ಅವಳನ್ನು ಗಂಡನ ಚಿತೆ ಏರುವಂತೆ ಮಾಡಿದ ಸತ್ಯವನ್ನು ಚಂದ್ರಯ್ಯನಲ್ಲಿ ಸರಸಮ್ಮನ ಪ್ರೇತ ಹೇಳುವಲ್ಲಿ –ಒಟ್ಟಾರೆಯಾಗಿ ಮಹಿಳೆಯರ ಅಂದಿನ ವಿಷಮವಾದ ಸಾಮಾಜಿಕ ಪರಿಸ್ಥಿತಿಯನ್ನು ಎದುರಿಸಲಾಗದೇ ಹೇಗೆ ಪರಿಸ್ಥಿತಿಯ ಕೈಗೊಂಬೆಗಳಾಗಿದ್ದಾರೆ ಎಂಬುದನ್ನು ಎತ್ತಿತೋರಿಸುತ್ತದೆ.

ಹೀಗೆ ಕಾದಂಬರಿಯುದ್ದಕ್ಕೂ ಕಾರಂತರು ಶೋಷಣೆಗೊಳಗಾದ ಮಹಿಳೆಯರನ್ನು, ಮೂಢನಂಬಿಕೆಗಳಿಂದ ತುಂಬಿಹೋಗಿದ್ದ ಸಮಾಜದ ಚಿತ್ರಣವನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

**೩. ಮರಳಿಮಣ್ಣಿಗೆ:**

'ಮರಳಿಮಣ್ಣಿಗೆ' ಮೂರು ಪೀಳಿಗೆಗಳ ಕಥೆ. "1850ರ ಸುಮಾರಿಗೆ ತೊಡಗುವ ಈ ಕಥೆಯು 1940ರಲ್ಲಿ ಮುಗಿಯುತ್ತದೆ" ಎಂದು ಸ್ವತಃ ಕಾದಂಬರಿಕಾರರೇ ತಿಳಿಸಿದ್ದಾರೆ. ಮೂರು ತಲೆಮಾರುಗಳ ಚಿತ್ರಣವನ್ನು ನೀಡುವ ಈ ಕಾದಂಬರಿ ಮೂರು ತಲೆಮಾರುಗಳಲ್ಲಿರುವ ಭಿನ್ನತೆಯನ್ನು ಎತ್ತಿ ತೋರಿಸುತ್ತದೆ. ಭಾರತೀಯ ಸಮಾಜದಲ್ಲಿ ಆದ ಬದಲಾವಣೆಯ ಮೂರು ಹಂತಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಸುಮಾರು ಒಂದು ಶತಮಾನದಷ್ಟು ಅವಧಿಯಲ್ಲಿ ಬದುಕಿನಲ್ಲಿ ಕಂಡ ಬದಲಾವಣೆಗಳನ್ನು ಮೂರು ತಲೆಮಾರುಗಳನ್ನು ಸೃಷ್ಟಿಸಿ ಆ ಮೂಲಕ ಸಾದರಪಡಿಸುವುದನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಇಂದಿನ ಉಡುಪಿ ಜಿಲ್ಲೆಯ ಒಂದು ಹಳ್ಳಿಯ ಬದುಕಿನ ಬ್ರಾಹ್ಮಣ ಕೂಟವೊಂದರಲ್ಲಿ ಆದ ಸ್ಥಿತ್ಯಂತರಗಳನ್ನು ಕಟ್ಟಿಕೊಡುವ ಕಾದಂಬರಿ 'ಮರಳಿಮಣ್ಣಿಗೆ' ಆಗಿದೆ.

ಕಾದಂಬರಿಯು ಮೂರು ತಲೆಮಾರುಗಳ ಚಿತ್ರಣವನ್ನು ಕಟ್ಟಿಕೊಡುತ್ತದೆ. ಮೊದಲ ತಲೆಮಾರು ನಿರ್ದಿಷ್ಟವಾದ ಮೌಲ್ಯಗಳನ್ನು ಹೊಂದಿರುವ ಪರಂಪರೆ, ಸಂಪ್ರದಾಯ, ಪ್ರಕೃತಿಯ ಸಾನ್ನಿಧ್ಯ ಹಾಗೂ ಸ್ವಾಮಿತ್ವದಲ್ಲಿ ಬದುಕನ್ನು ನಿರ್ವಹಿಸಿಕೊಂಡು ಹೋಗುವ

ಸಾಮಾಜಿಕ ಬದುಕನ್ನು ನಿರ್ದಿಷ್ಟವಾದ ಆರ್ಥಿಕವಾದ ವ್ಯವಸ್ಥೆಯೊಂದಿಗಿನ ಸಂದರ್ಭವನ್ನು ಕಾಣಬಹುದಾಗಿದೆ. ರಾಮ ಐತಾಳರು ಈ ತಲೆಮಾರಿನ ಪ್ರತಿನಿಧಿಯಾಗುತ್ತಾರೆ. ಪರಂಪರೆ, ಪೌರೋಹಿತ್ಯ ಕೃಷಿ ಈ ಮುಖೇನವಾಗಿಯೇ ಬದುಕನ್ನು ನಿರ್ವಹಿಸುವ ರಾಮ ಐತಾಳರು ಸಾಂಪ್ರದಾಯಿಕವಾದ ಗ್ರಾಮೀಣ ಬದುಕನ್ನು ನೆಚ್ಚಿಕೊಂಡವರು. ಈ ತಲೆಮಾರಿನಲ್ಲಿ ಚಿತ್ರಿತವಾದ ಹೆಂಗಸರ ಬದುಕು ಕೂಡ ಒಂದೇ ಗತಿಯಲ್ಲಿ ಸಾಗುವಂತಹದ್ದು. ಜೊತೆಗೆ ಕುಟುಂಬದ ಚೌಕಟ್ಟಿನ ಒಳಗಡೆಯೇ ಸ್ಥಾಪಿತವಾದ ಬದುಕಿನಲ್ಲಿ ಕೃಷಿ ಕೆಲಸದಲ್ಲಿ ತೊಡಗಿಕೊಂಡು ಆಗಾಗ ನಡೆಯುವ ಮದುವೆ ಮುಂಜಿ, ಜಗಳ, ಗೊಂದಲ –ಹೀಗೆ ಏಕತಾನದ ಬದುಕು ಇವರದು. ಮೊದಲ ತಲೆಮಾರಿನ ಮಹಿಳೆಯರ ಪ್ರತಿನಿಧಿಗಳಾಗಿ ಪಾರೋತಿ–ಸರಸೋತಿಯರ ಜೀವನಕ್ರಮ ನಿದರ್ಶನವಾಗಿದೆ. ರಾಮ ಐತಾಳ ಹಾಗೂ ಇವರ ನೆರೆಮನೆಯ ಶೀನಮಯ್ಯ ಐತಾಳರು ಮೊದಲ ತಲೆಮಾರಿನಲ್ಲಿ ಗ್ರಾಮೀಣ ಬದುಕಿನ ಪರಿಸರದಲ್ಲಿ ಬದುಕುತ್ತಿದ್ದರೂ ಬದುಕಿನಲ್ಲಿ ಬದಲಾವಣೆಯನ್ನು ಬಯಸುವವರೇ ಆಗಿದ್ದರು. ತಮ್ಮ ವೈದಿಕ ಭಾಷೆ, ಸಂಸ್ಕೃತಿಯನ್ನು ಬಿಟ್ಟು ಮ್ಲೇಚ್ಛಭಾಷೆ ಇಂಗ್ಲಿಷನ್ನು ಕಲಿತು ಸರ್ಕಾರಿ ನೌಕರಿಯನ್ನು ಪಡೆದು ಬದುಕಿನ ದಿಕ್ಕು ಬದಲಾಗಲಿ ಎಂಬ ಹಂಬಲ ರಾಮ ಐತಾಳರದಾದರೆ ಪಟ್ಟಣದಲ್ಲಿ ಹೋಟೆಲು ಪ್ರಾರಂಭಿಸಿ ಹೋಟೆಲು ಮಾಲಕರಾಗಿ ಹಣಸಂಗ್ರಹಿಸಲಿ ಎಂಬ ಇರಾದೆಯನ್ನು ಹೊತ್ತವರು ಸೀನಮಯ್ಯ ಐತಾಳರು.

ಎರಡನೆಯ ತಲೆಮಾರಿನಲ್ಲಿ ಮೊದಲ ತಲೆಮಾರಿನಲ್ಲಿ ಬಲವಾಗಿ ಬೇರುಬಿಟ್ಟಿದ್ದ ಪರಂಪರಾಗತ ಮೌಲ್ಯಗಳು ಬದಲಾವಣೆಗೆ ಅಲುಗಾಡುವುದನ್ನು ಕಾಣಬಹುದಾಗಿದೆ. ಶಾಶ್ವತ ಮೌಲ್ಯಗಳು ತಮ್ಮ ನೆಲೆಯನ್ನು ಕಳೆದುಕೊಂಡು ಒಂದು ರೀತಿಯಲ್ಲಿ ಹೊಯ್ದಾಟದ ಸ್ಥಿತಿಯನ್ನು ತಲುಪಿ, ಬದುಕು ಅತಂತ್ರತೆಯನ್ನು ಅನುಭವಿಸುವ ಚಿತ್ರಣವಿದೆ. ಹಳ್ಳಿಯ ಬದುಕನ್ನು ಬಿಟ್ಟು ಹಿರಿಯರು ಪಡುವ ಬದುಕಿನ ಬವಣೆಯಿಂದ ಬಿಡಿಸಿಕೊಂಡು ಸ್ವತಂತ್ರವಾದ ಬದುಕನ್ನು ಸಂಪಾದಿಸಿಕೊಂಡು ಆಧುನಿಕತೆಗೆ ಮನಸ್ಸುಮಾಡಿ ಆ ನಿಟ್ಟಿನಲ್ಲಿ ಕ್ರಮಿಸಿ ಕೊನೆಯಲ್ಲಿ ಸ್ವೇಚ್ಛಾಚಾರದ ಬದುಕಿಗೆ ತನ್ನನ್ನು ಒಡ್ಡಿಕೊಂಡು ನೆಲೆತಪ್ಪಿದ ಬದುಕಿನ ಎರಡನೇ ತಲೆಮಾರಿನ ಪ್ರತಿನಿಧಿಯಾಗಿ ನಮಗೆ ರಾಮ ಐತಾಳರ ಮಗ ಲಚ್ಚ ಕಾಣಿಸಿಕೊಳ್ಳುತ್ತಾನೆ. "ಗ್ರಾಮೀಣ ಸಂಸ್ಕೃತಿಯ ಮೌಲ್ಯಕ್ರಮದ ಬಿಗಿ ಹಿಡಿತದಿಂದ ತಪ್ಪಿಸಿಕೊಂಡ ಅವನ ಜೀವನ ಹೊಣೆಗಾರಿಕೆಯನ್ನು ಮರೆತು ತಗ್ಗಿದಲ್ಲೆಲ್ಲ ಹರಿಯತೊಡಗಿ ಐಂದ್ರಿಯಿಕ ಸುಖ ಅವನ ಪ್ರಕೃತಿಧರ್ಮವಾಗುತ್ತದೆ. ಸಣ್ಣವನಿದ್ದಾಗ ಬಾಯಿಚಪಲ,

ದೊಡ್ಡವನಾದಾಗ ಹಣದ ಚಪಲ, ಕಾಮುಕಜೀವನ ಅವನ ಜೀವನದ ಗತಿಯನ್ನು ನಿರ್ಧರಿಸಿ ಆತ ತನಗೂ ತಿಳಿಯದಂತೆ ಹೊಸ ಮೌಲ್ಯಗಳನ್ನು ಪ್ರತಿನಿಧಿಸಿ ಅವಳ ಬಾಳ ಸುತ್ತ ಹೊಸಬಿಕ್ಕಟ್ಟು ಹುಟ್ಟಿಕೊಳ್ಳುವುದಕ್ಕೆ ಕಾರಣನಾಗುತ್ತಾನೆ. ಇಲ್ಲಿ ನಾಗವೇಣಿ ಪ್ರಕೃತಿಯ ಒತ್ತಡಗಳನ್ನು ಅಲ್ಲಗಳೆಯದೆ ಸಂಸ್ಕೃತಿಯನ್ನು ಸಾಧಿಸುತ್ತಾಳೆ. ಕಾದಂಬರಿಯ ವಸ್ತು ಮತ್ತು ಉದ್ದೇಶವನ್ನು ಕುರಿತು ಕರುಣಾಕರ ಶೆಟ್ಟಿಯವರ ಅಭಿಪ್ರಾಯ ಈ ರೀತಿಯಾಗಿದೆ.

"ಇದರ ಕೊನೆಯ ಭಾಗದಲ್ಲಿ ಕಂಡುಬರುವ ಸಾಮಾಜಿಕ ಅವಸ್ಥೆ ಕಾರಂತರ ಜೀವನದರ್ಶನದ ಒಂದು ಅವಿಭಾಜ್ಯ ಅಂಗವೆನ್ನಬಹುದು. ಸಾಂಪ್ರದಾಯಿಕ ಮೌಲ್ಯಗಳನ್ನು ಕಳೆದುಕೊಂಡ ಸಮಾಜ ಸಾಂಕ್ರಾಮಿಕ ಅವಸ್ಥೆಯನ್ನು ದಾಟಿ ಆಧುನಿಕತೆಯನ್ನು ಪಡೆಯುವ ಪರಿಯು ಈ ಭಾಗದ ಮಾರ್ಮಿಕ ಚಿತ್ರಣವಾಗಿದೆ. ತುಂಬು ಎಚ್ಚರದಲ್ಲಿ ತನ್ನ ಜೀವನವನ್ನು ರೂಪಿಸುವ ನಾಗವೇಣಿ ಅವಳ ಶುದ್ಧವಾದ ಅತ್ಮಸಾಕ್ಷಿಯಲ್ಲಿ ಬೆಳೆದುಬಂದ ರಾಮ ಈ ಹೊಸ ಸಮಾಜದ ಅತ್ಯಂತ ಯಶಸ್ವೀ ಪಾತ್ರವಾಗಿ ಈ ಮೂರು ತಲೆಮಾರಿನ ಚಿತ್ರಣವೇ ಕಾದಂಬರಿಯ ವಸ್ತು, ಉದ್ದೇಶ ಎರಡೂ ಆಗಿದೆ" (ಕರುಣಾಕರ ಶೆಟ್ಟಿ ಎನ್.; ೨೦೦೩; ಪು. ೧೩೬).

ಸ್ವಾತಂತ್ರ್ಯಪೂರ್ವದಲ್ಲೇ ಪ್ರಕಟಗೊಂಡ ಕೃತಿ ಇದಾಗಿದ್ದು ಸ್ವಾತಂತ್ರ್ಯ ಲಭಿಸುವ ಸಂದರ್ಭದ ಭಾರತದ ಚಿತ್ರಣವನ್ನು ಕಂಡುಕೊಳ್ಳುವುದು ಈ ಕಾದಂಬರಿಯಲ್ಲಿ ಸಾಧ್ಯವಾಗುತ್ತದೆ. 'ಮರಳಿಮಣ್ಣಿಗೆ' ಈ ದೃಷ್ಟಿಯಲ್ಲಿ ತನ್ನ ಮೂಲ ಸಂಸ್ಕೃತಿಯನ್ನು ಪುನಃ ಪಡೆದುಕೊಳ್ಳುವುದರ ಮೂಲಕ ತನ್ನ ದೇಶೀಯ ಮೌಲ್ಯಗಳಿಗೆ ಮರಳುವ ಸಂದರ್ಭವನ್ನಾಗಿ ಕಾದಂಬರಿಯ ಅಂತ್ಯವನ್ನು ಪರಿಗಣಿಸಬಹುದಾಗಿದೆ. ಇದು ಕೇವಲ ರಾಮ ತನ್ನ ಹುಟ್ಟೂರಿಗೆ, ಮನೆಗೆ ಮರಳುವುದು ಎಂದರೆ ಕಾದಂಬರಿಯ ಆಶಯ ಅಪೂರ್ಣವಾಗುತ್ತದೆ. ಈ ವಿಚಾರವನ್ನು ಪ್ರತಿಪಾದಿಸುವ ಟಿ.ಪಿ. ಅಶೋಕ ಅವರ ಮಾತುಗಳು ಹೀಗಿವೆ: "......'ಮರಳಿಮಣ್ಣಿಗೆ' ಎಂದರೆ ಕೇವಲ ಸ್ವಂತಮನೆಗೆ, ಹುಟ್ಟೂರಿಗೆ ಮರಳುವುದು ಎಂದಷ್ಟೇ ಆಗುವುದಿಲ್ಲ. 'ಮರಳಿಮಣ್ಣಿಗೆ' ಎಂದರೆ ತನ್ನ ಬೇರುಗಳಿಗೆ, ಸ್ಥಳೀಯ ದೇಶೀಯ ಮೌಲ್ಯಗಳಿಗೆ ಮರಳುವುದು ಎಂದು ವಿಶಾಲವಾಗಿ ವ್ಯಾಖ್ಯಾನಿಸಬೇಕಾಗುತ್ತದೆ. 'ಮರಳಿಮಣ್ಣಿಗೆ' ಎಂದರೆ ಇತಿಹಾಸದ ಹಿನ್ನಡೆ, ಭೂತಕ್ಕೆ ಮರಳುವುದು ಎಂದು ತಪ್ಪಾಗಿ ಅರ್ಥಮಾಡಿಕೊಳ್ಳಬಾರದು" (ವಿವಿಧ ಲೇಖಕರು; ೧೯೯೨; ಪು. ೨೮).

ವಸಾಹತುಶಾಹಿಯ ಪ್ರವೇಶದಿಂದಾಗಿ ದೇಶೀಯ ಬದುಕಿನಲ್ಲಾದ ಪಲ್ಲಟಗಳನ್ನು ಚಿತ್ರಿಸುತ್ತ ಅದು ಆಧುನಿಕತೆಗೆ ತೆರೆದುಕೊಂಡ ಬಗೆಯನ್ನು ಕಾಣಬಹುದಾಗಿದೆ. ಆದರೆ

ಕಾರಂತರು ಈ ಆಧುನಿಕತೆಯನ್ನಾಗಲಿ ಅಥವಾ ಆಧುನಿಕತೆಯ ಪ್ರವೇಶದ ಪೂರ್ವದಲ್ಲಿ ನೆಲೆನಿಂತ ಸಂಪ್ರದಾಯ, ಪರಂಪರಾಧಾರಿತ ಬದುಕನ್ನಾಗಿ ಪ್ರತಿಪಾದಿಸುವುದರಲ್ಲಿ ಸಾಮಾಜಿಕ ಬದುಕಿನ ಮೇಲೆ ಆಧುನಿಕತೆ ಬೀರಿದ ಪ್ರಭಾವವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಪರಂಪರಾಗತ, ಸಂಪ್ರದಾಯಬದ್ಧ ಬದುಕು ಹೇಗೆ ಆಧುನಿಕತೆಯ ಪ್ರವೇಶದಿಂದಾಗಿ ಪಲ್ಲಟಗೊಳ್ಳುತ್ತದೆ ಎಂಬ ವಿಚಾರವನ್ನು ಕಾದಂಬರಿಯಲ್ಲಿ ಕಟ್ಟಿಕೊಡುತ್ತಾರೆ. "......ಆದರೆ ಕಾದಂಬರಿಕಾರ್ರರು ಸಂಪ್ರದಾಯವನ್ನಾಗಲಿ, ಆಧುನಿಕತೆಯನ್ನಾಗಲಿ ಏಕಮುಖವಾಗಿ ಆರಾಧಿಸುವ ಇಲ್ಲವೇ ತಿರಸ್ಕರಿಸುವ ಸರಳಮಾರ್ಗ ಹಿಡಿಯದೆ ಒಂದು ಬದುಕಿನ ಪಲ್ಲಟ ಕ್ರಮವನ್ನು ಸೂಕ್ಷ್ಮವಾಗಿ, ಸಂಕೀರ್ಣವಾಗಿ ಗ್ರಹಿಸುವುದರ ಮೂಲಕ ಯುಗಪ್ರವರ್ತಕ ಕೃತಿಯೊಂದನ್ನು ಸೃಷ್ಟಿಸುತ್ತಾರೆ...." (ಅದೇ ಪು. ೨೫).

ಮೊದಲ ತಲೆಮಾರಿನಲ್ಲಿ ರಾಮ ಐತಾಳರು, ಪಾರೋತಿ ಸರಸೋತಿಯರ ಬದುಕು ಮಣ್ಣಿಗೆ ಅಂಟಿಕೊಂಡಿರುವಂತದ್ದು. ಎರಡನೇ ತಲೆಮಾರಿನ ಲಚ್ಚ ಈ ಮಣ್ಣಿನಿಂದ ಬಿಡುಗಡೆಯನ್ನು ಬಯಸಿ ಹೊಸ ಬದುಕಿನ ಹುಡುಕಾಟದಲ್ಲಿ ತೊಡಗಿ ಮಣ್ಣನ್ನು ಬಿಟ್ಟು ಹೋದವ. ಆದರೆ ಮೂರನೇ ತಲೆಮಾರಿನ ರಾಮ ಮೂಲದ ಮಣ್ಣಿಗೆ ಮರಳುವಲ್ಲಿ ಮೊದಲ ತಲೆಮಾರಿನ ರಾಮ ಐತಾಳರ ತಲೆಮಾರನ್ನೇ ಯಥಾವತ್ತಾಗಿ ಪ್ರತಿನಿಧಿಸದೇ ಬದಲಾದ ಬದುಕಿನ ಸ್ಥಿತ್ಯಂತರಗಳನ್ನು ಗ್ರಹಿಸಿಕೊಂಡು ದೇಶೀಯ ಮೌಲ್ಯಗಳನ್ನು ಸ್ವೀಕರಿಸುವಲ್ಲಿ ರಾಮನ ಪ್ರಜ್ಞಾಪೂರ್ವಕವಾದ ಆಯ್ಕೆ ಕಂಡುಬರುತ್ತದೆ. ಹೀಗೆ ಕಾದಂಬರಿಯು ಅಂತಿಮ ಹಂತದಲ್ಲಿ ರಾಮನ ಬದುಕು ಈಗಷ್ಟೇ ಆರಂಭವಾಗಿದ್ದು ಅದು ಅಲ್ಲಿಗೆ ಮುಗಿಯದೇ ಮುಂದುವರೆದಿರುವುದನ್ನು ಕಾಣಬಹುದಾಗಿದೆ. ವಾಸ್ತವವಾದಿ ನೆಲೆಯಲ್ಲಿ ಚಿತ್ರಿತವಾಗಿರುವ ಕಾದಂಬರಿಯಲ್ಲಿ ಆಧುನಿಕ ಮೌಲ್ಯಗಳು ಗ್ರಾಮೀಣ ಬದುಕನ್ನು ಪ್ರಭಾವಿಸಿದ ರೀತಿಯನ್ನು ಗ್ರಹಿಸಬಹುದಾಗಿದೆ. ಒಂದನೇ ತಲೆಮಾರಿನ ರಾಮ ಐತಾಳರು ಬದುಕನ್ನು ಸ್ವೀಕರಿಸಿದ ರೀತಿಗೂ ಮೂರನೇ ತಲೆಮಾರಿನ ರಾಮ ದೇಶೀಯ ಮೌಲ್ಯಗಳಿಗೆ ಹಿಂದಿರುಗಿದರೂ, ಆತ ಬದುಕನ್ನು ಸ್ವೀಕರಿಸಿದ ರೀತಿಗೂ ಸಾಕಷ್ಟು ಅಂತರವಿದೆ. ಪಾಶ್ಚಾತ್ಯೀಕರಣದ ಪ್ರಭಾವಕ್ಕೆ ಒಳಗಾದ ಹಿಂದಿಗಿಂತಲೂ ಬದಲಾದ ಗ್ರಾಮೀಣ ಬದುಕನ್ನು ಸ್ವೀಕರಿಸುವ ಮೂರನೇ ತಲೆಮಾರಿನ ರಾಮನ ಆಯ್ಕೆಗೆ ಸಾಂಸ್ಕೃತಿಕವಾದ ಮಹತ್ವವಿದೆ ಎಂಬುದನ್ನು ಗುರುತಿಸುವ ಟಿ.ಪಿ. ಅಶೋಕರು ಈ ಕಾರಣದಿಂದಾಗಿಯೇ ಕಾದಂಬರಿ ತೃತೀಯ ಜಗತ್ತಿನ ಅತ್ಯುತ್ತಮ ಕಾದಂಬರಿಗಳಲ್ಲಿ ಒಂದಾಗಿ 'ಮರಳಿಮಣ್ಣಿಗೆ'ಯನ್ನು ಗುರುತಿಸುತ್ತಾರೆ. ".....ಏಕಾಏಕೀ ಸನಾತನಧರ್ಮಕ್ಕೂ ಹಿನ್ನಡೆಯದೇ, ಪಾಶ್ಚಾತ್ಯೀಕರಣಕ್ಕೂ

ಒಳಗಾಗದೇ ಪೂರ್ವಪಶ್ಚಿಮಗಳಿಂದ ಪಡೆಯಬೇಕಾದ್ದನ್ನು ಸಂಕೋಚವಿಲ್ಲದೆ ಪಡೆದು ಹೊಸ ತೃತೀಯ ಮಾರ್ಗದ ಸೃಜನಶೀಲ ಅನ್ವೇಷಣೆಯ ಸಾಧ್ಯತೆಗಳನ್ನು 'ಮರಳಿಮಣ್ಣಿಗೆ' ಗುಪ್ತವಾಗಿ ಸೂಚಿಸುತ್ತದೆ. ಈ ದೃಷ್ಟಿಯಿಂದ 'ಮರಳಿಮಣ್ಣಿಗೆ' ಇಂದಿಗೂ ತೃತೀಯ ಜಗತ್ತಿನ ಪ್ರಧಾನ ಧಾರೆಯ ಅತ್ಯುತ್ತಮ ಕಾದಂಬರಿಗಳಲ್ಲಿ ಒಂದೆನಿಸಿಕೊಳ್ಳುತ್ತದೆ" (ಅದೇ ಪು., ೨೯).

ಕಾರಂತರ ರೂಪಕ ಪ್ರತಿಭೆಯನ್ನು ಪ್ರದರ್ಶಿಸುವ ಮಳೆ, ಗಾಳಿ, ಕಡಲು ಇತ್ಯಾದಿಗಳು ಕಾದಂಬರಿಯಲ್ಲಿ ಒಂದು ಸಾಂಕೇತಿಕ ಪ್ರಪಂಚವನ್ನು ತೆರೆದಿಡುತ್ತವೆ. ಒಂದು ಪ್ರಾದೇಶಿಕ ಕಾದಂಬರಿ ಎಂದು ಗುರುತಿಸಲ್ಪಡುತ್ತಿದ್ದರೂ 'ಮರಳಿಮಣ್ಣಿಗೆ' ಕೇವಲ ಕಾಲದೇಶಗಳಿಗೆ ಬದ್ಧವಾಗಿರದೇ ಸಾರ್ವಕಾಲಿಕವಾದ ಬದುಕಿನ ಮೌಲ್ಯಗಳನ್ನು ಕಟ್ಟಿಕೊಡುವ ಮಹತ್ವದ ಕಾದಂಬರಿ ಇದಾಗಿದೆ. "...... 'ಮರಳಿಮಣ್ಣಿಗೆ'ಯ ಮೂಲ ಆಶಯಗಳು ಕೇವಲ ಕಾಲದೇಶಗಳಿಗೆ ಬದ್ಧವೇನೂ ಅಲ್ಲ. ಎಂಥ ಬವಣೆ, ದಾರಿದ್ರ್ಯಗಳ ನಡುವೆಯೂ ಮನುಷ್ಯ ತನ್ನ ಘನತೆಯನ್ನು ಮರೆಯುವ ಸಹಿಷ್ಣುತೆಯಲ್ಲೇ ಬದಲಾವಣೆಯ ಸಾಧ್ಯತೆಯನ್ನು ಒಳಗೊಂಡಿರುವ ನಿರಂತರ ಕಥೆಯನ್ನು 'ಮರಳಿಮಣ್ಣಿಗೆ' ಹೇಳುತ್ತದೆ. ಆದ್ದರಿಂದಲೇ ಈ ಕಾದಂಬರಿ ಸಾರ್ವಕಾಲಿಕ ಮನುಷ್ಯಕಥೆಗೆ ನಿರ್ದಿಷ್ಟ ಕಾಲದೇಶಗಳ ಇತಿಹಾಸ ಕಟ್ಟಿಕೊಡುವ ಸಾಂಸ್ಕೃತಿಕ ಅರ್ಥಗಳನ್ನು ಈ ಐತಿಹಾಸಿಕ ಆವರಣ ಅದರ ವೈಶಾಲ್ಯವನ್ನು ನಿರಂತರತೆಯನ್ನು ಗೌಣಗೊಳಿಸದ ಸಾರ್ವಕಾಲಿಕ ಗುಣಗಳನ್ನು ಒಟ್ಟಿಗೆ ತೂಗಿಸಿಕೊಂಡು ಹೋಗುತ್ತಾ ಅಪೂರ್ವವಾದ ಅನುಭವವನ್ನು ಕೊಡುತ್ತದೆ......" (ಅದೇ ಪು. ೩೧). ಹೀಗೆ ಪ್ರಾದೇಶಿಕತೆಯನ್ನು ಮೀರಿದ, ಬದುಕಿನ ಸಾರ್ವಕಾಲಿಕತೆಯನ್ನು ಸಾದರಪಡಿಸುವ ಈ ಕಾದಂಬರಿ ಎಲ್ಲಾ ಕಾಲಕ್ಕೂ ಪ್ರಸ್ತುತವಾಗುವ 'ಮರಳಿಮಣ್ಣಿಗೆ' ಕಾರಂತರ ಅಪೂರ್ವವಾದ ಕೃತಿಗಳಲ್ಲಿ ಒಂದು ಎಂದು ಗುರುತಿಸಬಹುದಾಗಿದೆ.

**೪. ಕುಡಿಯರ ಕೂಸು**

'ಕುಡಿಯರ ಕೂಸು' ಅವರ ಇತರ ಕಾದಂಬರಿಗಳಿಗಿಂತ ಭಿನ್ನವಾದ ಕಾದಂಬರಿಯಾಗಿದೆ. ಮಾನವಶಾಸ್ತ್ರದ ಒಂದು ಭಾಗವಾದ Monographನ್ನು ಹೋಲುವ ಅಂಶಗಳು ಇದರಲ್ಲಿ ಇರುವುದರಿಂದ ಇದರಲ್ಲಿ ಭಿನ್ನತೆಯ ಅಂಶಗಳನ್ನು ಕಾಣಬಹುದು: "ಮಾನವಶಾಸ್ತ್ರದ ಪ್ರಕಾರ ಕಾರಂತರು `Ethic' ವಿಧಾನವನ್ನು ಅನುಸರಿಸಿ ಕುಡಿಯರ ಪ್ರಪಂಚದ ಅಂಚಿನಲ್ಲಿ ನಿಂತು ಅವಲೋಕಿಸಿ, ಆ ಪ್ರಪಂಚದ ಆಗುಹೋಗುಗಳನ್ನು ವರ್ಣಿಸಿದ್ದಾರೆ. ತಾನು ಅವಲೋಕಿಸಿದ ಕುಡಿಯರ ಒಂದೋ ಎರಡೋ ಸಮುದಾಯಗಳ ಆಧಾರದ ಮೇಲೆ

ಕುಡಿಯರ ಪ್ರಪಂಚದ ಎಲ್ಲಾ ಸಮುದಾಯಗಳಿಗೆ ಅನ್ವಯಿಸುವಂತೆ ಅವುಗಳ ರಚನೆ (Social structure) ಅವರ ಸಂಸ್ಕೃತಿಯ ಅಂಶಗಳ ನಂಬಿಕೆಗಳು ಮತ್ತು ಅವಕ್ಕೆ ಅನುಗುಣವಾದ ಪೂಜೆ, ಪುನಸ್ಕಾರಗಳು, ನಡವಳಿಕೆಗಳು, ಹಬ್ಬಹರಿದಿನಗಳು ಮತ್ತು ಕುಟುಂಬ ಜೀವನದ ಸಂಕೀರ್ಣ ಸಮಸ್ಯೆಗಳು –ಮುಂತಾದವುಗಳ ಬಗ್ಗೆ ಎಲ್ಲಾ ಕುಡಿಯರಿಗೆ ಅನ್ವಯಿಸುವಂತೆ ತಮ್ಮ ತಾತ್ವಿಕ ನಿರ್ಧಾರಗಳನ್ನು (Theoritical conclusions) ಮಂಡಿಸಿದ್ದಾರೆ. ಈ ಕೃತಿಯ ವಿಶಿಷ್ಟತೆ ಎಂದರೆ ಇದು ಪೂರ್ಣ ಕಾದಂಬರಿಯೂ ಅಲ್ಲ; ಪೂರ್ಣ Monograph ಅನ್ನುವಂತೆಯೂ ಇಲ್ಲ. ಈ ಕೃತಿ ಎರಡು ಸಾಹಿತ್ಯಮಾದರಿಗಳ ಲಕ್ಷಣಗಳನ್ನು ಹೊಂದಿರುವ ಕನ್ನಡದಲ್ಲಿ ಅಪರೂಪವಾದ ಕೃತಿ ಎನ್ನಬಹುದು" (ನಾಗ ಐತಾಳ (ಸಂ.); ೨೦೦೦; ಪು. ೧೪೬).

ನಿಸರ್ಗದೊಡನೆ ಬೆರೆತು ಬಾಳುವ ಕುಡಿಯಜನಾಂಗದ ರೀತಿನೀತಿಗಳನ್ನು, ಸಂಪ್ರದಾಯ–ನಂಬಿಕೆ–ಆಚರಣೆಗಳ ಸುತ್ತ ಹೆಣೆದಿರುವ ಕಾದಂಬರಿ ಇದಾಗಿದ್ದು, ಇಂತಹ ಬದುಕಿನಲ್ಲಿಯೂ ಆಧುನಿಕತೆಯ ಪ್ರವೇಶದಿಂದಾಗಿ ಬದಲಾವಣೆಗಳು ಆಗತೊಡಗಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಇಂತಹ ಕಾದಂಬರಿಗಳಲ್ಲಿ ಕಾಣುವಂತೆ ನಾಯಕ–ನಾಯಿಕೆಯರನ್ನು ನಿರ್ದಿಷ್ಟವಾಗಿ ಗುರುತಿಸಲು ಈ ಕಾದಂಬರಿಯಲ್ಲಿ ಸಾಧ್ಯವಿಲ್ಲ. ಸಮಾನ ಗಾತ್ರದ ಪಾತ್ರಗಳನ್ನು ಇಲ್ಲಿ ಕಾಣಬಹುದಾಗಿದೆ. ಕೆಂಚ, ಕರಿಯ, ತುಕ್ರ, ಬೂದ, ತಿಮ್ಮ ಹಾಗೂ ತಿರುಮಲ ಭಟ್ಟರು ಇವು ಈ ಕಾದಂಬರಿಯಲ್ಲಿ ಬರುವ ಹೆಸರಿಸಬೇಕಾದ ಮುಖ್ಯವಾದ ಪುರುಷಪಾತ್ರಗಳು. ಸ್ತ್ರೀಪಾತ್ರಗಳಲ್ಲಿ ಮುಖ್ಯರಾದವರೆಂದರೆ ಕೆಂಪಿ ಮತ್ತು ಗಿಡ್ಡಿ.

ಪುರುಷಪಾತ್ರಗಳಲ್ಲಿ ಹಿರಿಯನಾದವ ಕೆಂಚ. ತನ್ನ ಹಿರಿಯ ತಲೆಮಾರಿನ ಕುರಿತಾದ ಮಾಹಿತಿಗಳನ್ನು, ಹಿಂದೊಂದು ಕಾಲದಲ್ಲಿ ಕುಡಿಯರು ಗುಹೆಗಳಲ್ಲಿ ವಾಸಮಾಡುತ್ತಿದ್ದು ಕಾಲದ ಬಗ್ಗೆ ತಿಳಿದುಕೊಂಡಿದ್ದಾನೆ. ಕುಡಿಯರು ನಡೆಸಿಕೊಂಡು ಬರುತ್ತಿದ್ದ ಪೂಜೆಪುನಸ್ಕಾರಗಳು ಆಚರಣೆಯಲ್ಲಿದ್ದ ರೀತಿರಿವಾಜುಗಳನ್ನು ಬಲ್ಲವನಾದ ಈತ ಕಿರಿಮಲೆಯ ಗುರಿಕಾರನಾಗಿ ಉಳಿದ ಕುಡಿಯರನ್ನು ಮುಂದುವರೆಸಿಕೊಂಡು ಹೋಗುವ ಜವಾಬ್ದಾರಿ ಆತನಿಗಿದೆ. ಹಿಂದೆ ಕಿರಿಮಲೆಯ ಕುಡಿಯರು ಮಲೆರಾಯನಿಗೆ ನಡೆಸಿಕೊಡುತ್ತಿದ್ದ ಕೋಲ, ಅವರು ಆರಾಧಿಸುತ್ತ ಬಂದಿರುವ ಕಲ್ಲುಡನಿಗೆ ಕಾಲಕಾಲಕ್ಕೆ ನಡೆಸಿಕೊಡದ ನೇಮ, ಕೋಲ, ಸೇವೆಗಳಿಂದಾಗಿ ಕಲ್ಲುಡನ ಕೋಪಕ್ಕೆ ತುತ್ತಾಗುತ್ತೇವೇನೋ ಎಂಬ ಭಯ ಕೆಂಚನನ್ನು ಆವರಿಸಿದೆ. ಕೆಂಚನ ಮಗ ತಿಪ್ಪ ಸತ್ತಾಗ ಇದು ಕಲ್ಲುಡನ ಕೋಪಕ್ಕೆ ತುತ್ತಾದ

ಬಲಿ ಎಂದು ತಿಳಿದ ಕೆಂಚ ಮೊಮ್ಮಗ 'ಕರಿಯ'ನ ಭವಿಷ್ಯದ ಬಗ್ಗೆ ಚಿಂತಿತನಾದುದಷ್ಟೆ ಅಲ್ಲ ಮೊಮ್ಮಗನಿಗೆ ಸುಬ್ರಹ್ಮಣ್ಯದೇವರ ಹೆಸರಿಟ್ಟು ಅವನನ್ನು ಇಳಿವಯಸ್ಸಿನಲ್ಲಿಯೂ ದುರ್ಗಮ ದಾರಿಯನ್ನು ಕ್ರಮಿಸಿ ದೂರದಲ್ಲಿರುವ ಸುಬ್ರಹ್ಮಣ್ಯದೇವರ ಸೇವೆ ಮಾಡಿಸುತ್ತಾನೆ. ಮೊಮ್ಮಗ ಕರಿಯನಿಗೆ ತನ್ನ ಹಿರಿಯರು ವಾಸಿಸುತ್ತಿದ್ದ ಗುಹೆಗಳನ್ನು, ಅಲ್ಲಿ ಪೂಜಿಸುತ್ತಿದ್ದ ಮಲೆರಾಯನನ್ನು ಪರಿಚಯಿಸುವ ಕೆಂಚನ ಮನಸ್ಸಿನಲ್ಲಿ ಅದನ್ನು ಕರಿಯ ಮುಂದುವರೆಸಿಕೊಂಡು ಹೋಗಲಿ ಎಂಬ ಭಾವನೆಯೂ ಇದೆ. ಸೊಸೆಯು ದುರ್ಮರಣಕ್ಕೆ ಈಡಾದಾಗ ಕರಿಯನ ಭವಿಷ್ಯದ ಬಗ್ಗೆ ಕಂಗಾಲಾದ ಕೆಂಚ ಹಿಂದಿನ ಸಂಪ್ರದಾಯದಿಂದ ಹಿರಿಮಲೆಯ ಹಾಗೂ ಕಿರಿಮಲೆಯ ಕುಡಿಯರನ್ನೆಲ್ಲ ಕೂಡಿಸಿ ಕಲ್ಕುಡನ ಕೋಪ ಇಳಿಸುವ ದೃಷ್ಟಿಯಿಂದ ಸಂಕ್ರಾಂತಿಯ ಕೋಲವನ್ನು ನಡೆಸುವ ನಿರ್ಧಾರ ಮಾಡುತ್ತಾನೆ. ಕೋಲವನ್ನು ನಡೆಸಲು ತಗಲುವ ವೆಚ್ಚವನ್ನು ಧನಿಗಳಿಂದ ಪಡೆಯುವ ತಯಾರಿಯನ್ನು ಮಾಡಿಕೊಳ್ಳುತ್ತಾನೆ. ಹೀಗೆ ಮೊಮ್ಮಗನ ಭವಿಷ್ಯವನ್ನು ಹಾರೈಸುತ್ತ, ಶೀತಬಾಧೆ, ಜ್ವರಬಾಧೆಯಿಂದ ಹಾಸಿಗೆ ಹಿಡಿದ ಕೆಂಚ ಮೇಲೇಳದೇ ಅವಸಾನ ಹೊಂದುತ್ತಾನೆ. ಕುಡಿಯರ ಕೂಸಾದ ಕರಿಯ ಅಜ್ಜ ತೀರಿಕೊಂಡ ಅನಂತರ ಬೂದ, ಕೆಂಪಿಯರ ಆಶ್ರಯದಲ್ಲಿ ಬೆಳೆಯುತ್ತಾನಾದರೂ ಕೆಂಪಿಗೆ ಕರಿಯ ತಿಮ್ಮ-ಗಿಡ್ಡಿಯರ ಒಡನಾಟವನ್ನು ಮಾಡುವುದು ಸಹಿಸಲಾರದಾದಾಗ, ಕೆಂಪಿಯ ಸುಳ್ಳು ಆಪಾದನೆಗೆ ನೊಂದು ಅವಳ ಮನೆಯನ್ನು ತ್ಯಜಿಸಿ ಸ್ವಂತದ್ದಾದ ಗುಡಿಸಲು ಕಟ್ಟಿಕೊಳ್ಳುತ್ತಾನೆ. ನಿಸರ್ಗಪ್ರೇಮಿಯಾದ, ಸಾಹಸೀಪ್ರವೃತ್ತಿಯವನಾದ ಕರಿಯನಿಗೆ ಬೇಟೆಯಾಡುವುದು, ದುರ್ಗಮ ಪ್ರದೇಶಗಳನ್ನು ನೋಡುವುದು, ನಿಸರ್ಗದ ಒಳಗನ್ನು ಭೇದಿಸುವ ವಿಶಿಷ್ಟವಾದ ಕುತೂಹಲ, ಅಸಹಾಯಕರಿಗೆ ಸಹಾಯಮಾಡುವುದು, ನೆರವಾಗುವುದು ಅವನ ಸಹಜ ಸ್ವಭಾವ. ಈ ಕಾರಣದಿಂದಾಗಿಯೋ ದೈವದ ಬಲದಿಂದ ಗುರಿಕಾರನಾಗಿ ನೇಮಿಸಲ್ಪಟ್ಟರೂ ಅದನ್ನು ತ್ಯಜಿಸಿ ತಿಮ್ಮ-ಗಿಡ್ಡಿಯರನ್ನು ಕೂಡಿಕೊಂಡು ತನ್ನ ಸ್ವಂತ ಮಲೆಯನ್ನು ತ್ಯಜಿಸಿ ಮಲೆಯ ಕೆಳಗಿನ ಹಳ್ಳಿಯಲ್ಲಿ ಹೊಸ ಬದುಕನ್ನು ಆರಂಭಿಸುತ್ತಾನೆ. ಬಟ್ಯ ಗೌಡನ ಸ್ನೇಹಿತನಾಗುವುದು, ಆತನಿಗೆ ಕಾಟಕೊಡುತ್ತಿದ್ದ ಹುಲಿಯನ್ನು ಕೊಲ್ಲುವುದು, ಆನೆಯೊಂದನ್ನು ಸಾಕಿ ಪಳಗಿಸುವ ಕನಸನ್ನು ನನಸಾಗಿಸುವುದು, ತಿರುಮಲ ಭಟ್ಟರ ಮಗ ರಾಮಚಂದ್ರಯ್ಯನ ಜೊತೆಗಾರ ಬಂಟ್ರಪ್ಪ ಗಾಯಗೊಳಿಸಿ ಕೊಲ್ಲಲಾರದೇ ಬಿಟ್ಟ ಚಿರತೆಯನ್ನು ಕೊಂದು ತನ್ನ ಸಾಹಸ ಪ್ರವೃತ್ತಿಯನ್ನು ಮೆರೆಯುವ ಕರಿಯ ಕಾದಂಬರಿಯಲ್ಲಿ ಹಂತಹಂತವಾಗಿ ಪ್ರಕಟಗೊಳ್ಳುತ್ತ ಹೋಗುತ್ತಾನೆ. ಗುರಿಕಾರನಾಗಿ, ಗೆಳೆಯನಾಗಿ, ವ್ಯವಸಾಯಗಾರನಾಗಿ, ಆನೆಯ ಮಾವುತನಾಗಿ, ಬೇಟೆಗಾರನಾಗಿ ಹೀಗೆ

ಬಹುಮುಖಪ್ರತಿಭೆಯನ್ನು ವ್ಯಕ್ತಪಡಿಸುವ ಪಾತ್ರ ಕರಿಯನದು.

ಕಾದಂಬರಿಯಲ್ಲಿ ಬರುವ ತುಕ್ರನದು ಕೂಡ ಸಾಹಸಪ್ರವೃತ್ತಿಯ ಪಾತ್ರ, ಸ್ವಭಾವದಲ್ಲಿ ಒರಟು, ತನ್ನ ಮೊದಲನೆಯ ಹೆಂಡತಿ ಚಿನ್ನಿಯ ಮೇಲೆ ಅಡವಿಯಲ್ಲಿ ಜೇನು ಕೀಳುವಾಗ ಎರಗಿದ ಕರಡಿಯೊಂದಿಗೆ ಹೋರಾಡಿ, ತನ್ನ ಕತ್ತಿಯಿಂದಲೇ ಅದನ್ನು ಕೊಂದು 'ಕರಡಿ ತುಕ್ರ' ಎಂಬ ಬಿರುದು ಪಡೆದುಕೊಂಡವ. ವಿಲಾಸಪ್ರಿಯನಾದ ತುಕ್ರನ ಕಾಮಕ್ಕೆ ಬಲಿಯಾದವರಲ್ಲಿ ಕೆಂಚನ ಸೊಸೆ ವಿಧವೆ ಚಿಕ್ಕಿಯೂ ಒಬ್ಬಳು. ಮೊದಲ ಹೆಂಡತಿ ಇರುವಾಗಲೇ ಹಿರಿಯ ಮಲೆಯ ಸುಂದರಿ ಕೆಂಪಿಗೆ ಮನಸೋತು ಅವಳನ್ನು ಮದುವೆಯಾಗುತ್ತಾನೆ. ಅನಂತರದಲ್ಲಿ ಚಿಕ್ಕಿ–ತುಕ್ರರ ಸಂಬಂಧ ತಿಳಿದ ಕೆಂಪಿ ಅವನನ್ನು ತ್ಯಜಿಸಿ ಹೋಗುತ್ತಾಳೆ. ಕೆಂಪಿ ಹಾಗೂ ತುಕ್ರನ ಮೊದಲ ಹೆಂಡತಿ ಜಿನ್ನಿಯರ ಮಧ್ಯದ ನಿರಂತರ ಸಮರದಿಂದ ತುಕ್ರನಿಗೆ ನೆಮ್ಮದಿಯೇ ಇರುವುದಿಲ್ಲ. ಇತ್ತ ಚಿಕ್ಕಿಯ ಸಾವಿನಿಂದಾಗಿ ಅಪರಾಧಪ್ರಜ್ಞೆಯಿಂದ ಬಳಲುತ್ತಿದ್ದ ತುಕ್ರನಿಗೆ ಕರಿಯ ದಿನದಿಂದ ದಿನಕ್ಕೆ ಪ್ರಸಿದ್ಧಿಯನ್ನು ಪಡೆಯುತ್ತ ಹೋಗುವುದನ್ನು, ಆತನ ಸಾಹಸ ಪ್ರವೃತ್ತಿಯನ್ನು ಸಹಸುವುದಾಗಲಿಲ್ಲ. ಗುರಿಕಾರನಾಗಬೇಕೆಂಬ ಕನಸನ್ನು ಹೊತ್ತಿದ್ದ ತುಕ್ರನಿಗೆ ಕರಿಯ ತನಗೆ ಪ್ರತಿಸ್ಪರ್ಧಿಯಾಗುತ್ತಿದ್ದಾನೆ ಎಂಬ ಈರ್ಷ್ಯೆ, ಅಸೂಯೆ ಬೆಳೆಯುತ್ತಲೇ ಹೋಗುತ್ತದೆ.

ಬೂದನು ತುಕ್ರನ ಪ್ರತಿಸ್ಪರ್ಧಿ, ಈತ ಕೆಂಪಿಯ ಕೈಹಿಡಿಯಬೇಕೆಂಬ ಕನಸು ಕಟ್ಟಿಕೊಂಡವ. ತುಕ್ರ ಕೆಂಪಿಯನ್ನು ಮದುವೆಯಾದಾಗ ಸಹಿಸಲಾರದಾದವ. ತುಕ್ರನನ್ನು ಕೆಂಪಿ ತ್ಯಜಿಸಿ ಹೋದಮೇಲೆ ಅವಳನ್ನು ಮದುವೆಯಾಗುವ ಆಸೆ ಬಲಗೊಂಡು ಸಂಕ್ರಾಂತಿಯ ಕೋಲದಲ್ಲಿ ಕೆಂಪಿಯ ಮನಸೋಲುವಷ್ಟು ಕುಣಿತಮಾಡಿ ಕೊನೆಗೂ ಕೆಂಪಿಯನ್ನು ವರಿಸಿಯೇ ಬಿಡುತ್ತಾನೆ. ಬೂದ–ಕೆಂಪಿಯರ ಆಶ್ರಯದಲ್ಲಿಯೇ ತನ್ನ ಅಜ್ಜನನ್ನು ಕಳೆದುಕೊಂಡ ಕರಿಯ ಬೆಳೆಯುತ್ತಾನೆ.

ತಿಮ್ಮನ ಪಾತ್ರ ಓದುಗರ ಅನುಕಂಪಕ್ಕೆ ಪಾತ್ರವಾಗುತ್ತದೆ. ಹರಿದ ತುಟಿಗಳನ್ನು ಹೊಂದಿದ ತಿಮ್ಮ ಕೆಂಪಿಯನ್ನು ಮದುವೆಯಾಗುವ ಆಸೆ ಹೊತ್ತ ಭಗ್ನಪ್ರೇಮಿ. ಕೆಂಪಿ ಈತನನ್ನು ಅಪಹಾಸ್ಯ ಮಾಡುತ್ತಿದ್ದರೂ ಅವಳನ್ನು ತಿರುಮಲ ಭಟ್ಟರ ವಕ್ರದೃಷ್ಟಿಯಿಂದ ರಕ್ಷಿಸುತ್ತಾನೆ. ಅವಳನ್ನು ರಕ್ಷಿಸುವ ಸಲುವಾಗಿಯೇ ತಿರುಮಲ ಭಟ್ಟರ ಮೇಲೆ ಹಲ್ಲೆ ಮಾಡುತ್ತಾನೆ. ಕ್ರೈಸ್ತ ಮತಸ್ಥನ ಸಹವಾಸ ಮಾಡಿ, ಲೈಂಗಿಕ ಶೋಷಣೆಗೆ ಒಳಗಾದ ಗಿಡ್ಡಿ ಜಾತಿಭ್ರಷ್ಟಳಾಗಿದ್ದರೂ ಅವಳನ್ನು ಮದುವೆಯಾಗುವ ತಿಮ್ಮ ಗಿಡ್ಡಿಯನ್ನು ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಾನೆ. ಕೆಂಪಿ ಗಿಡ್ಡಿಯ ಚೆಲುವನ್ನು ಸಹಿಸಲಾರದವಳು, ತಿಮ್ಮ–ಗಿಡ್ಡಿಯರ

ಮೇಲೆ ಇಲ್ಲಸಲ್ಲದ ಅಪವಾದ ಹೊರಿಸುತ್ತಲೇ ಹೋಗುತ್ತಾಳೆ. ವ್ಯಭಿಚಾರಿ ತಿರುಮಲ ಭಟ್ಟರು ಗಿಡ್ಡಿಯ ಮೇಲೆ ಕಣ್ಣಿಟ್ಟಾಗ, ಕಾಡಿನಲ್ಲಿ ಭಟ್ಟರ ಮೇಲೆ ಹಲ್ಲೆಮಾಡಿ ತಿಮ್ಮ ತನ್ನ ಹೆಂಡತಿಯನ್ನು ಉಳಿಸಿಕೊಳ್ಳುತ್ತಾನೆ. ತಿರುಮಲ ಭಟ್ಟರ ದ್ವೇಷ ಕಟ್ಟಿಕೊಂಡು ಕಿರಿಮಲೆಯಲ್ಲಿ ಬದುಕು ನಡೆಸುವುದು ಸಾಧ್ಯವಿಲ್ಲ ಎಂದು ಭಾವಿಸಿದ ತಿಮ್ಮ-ಗಿಡ್ಡಿಯರು ರಾತ್ರೋರಾತ್ರಿ ಮಲೆಯನ್ನು ಬಿಟ್ಟು ಯಾರಿಗೂ ತಿಳಿಯದ, ಅಜ್ಞಾತ ಸ್ಥಳದಲ್ಲಿ ಹೊಸ ಬದುಕನ್ನು ನಡೆಸುತ್ತಾರೆ. ಗುರಿಕಾರ ಕರಿಯ ತನ್ನ ಗುರಿಕಾರಿಕೆಯನ್ನು ತ್ಯಜಿಸಿ ಅವರನ್ನು ಕೂಡಿಕೊಳ್ಳುತ್ತಾನೆ. ಓಡಿಹೋದ ತಿಮ್ಮ-ಗಿಡ್ಡಿಯರ ಮೇಲೆ ಭಟ್ಟರು ತಮ್ಮ ಚಿನ್ನದ ಸರವನ್ನು ಕದ್ದ ಆರೋಪವನ್ನು ಹೊರಿಸುತ್ತಾರೆ. ಈ ಮೂವರು ಸೇರಿಕೊಂಡು ಕಿರಿಮಲೆಯ ಕೆಳಗಿನ ಹಳ್ಳಿಯಲ್ಲಿ ಹೊಸಜೀವನ ಆರಂಭಿಸುತ್ತಾರೆ. ಇದು ಕುಡಿಯರ ಜೀವನದಲ್ಲಿ ಪರಿವರ್ತನೆಯ ದಾರಿಯನ್ನು ತೋರಿಸುತ್ತದೆ.

ತಿರುಮಲ ಭಟ್ಟರು ಬೆಟ್ಟವನ್ನು ಗುತ್ತಿಗೆಗೆ ಪಡೆದುಕೊಂಡು ಕುಡಿಯರ ಶ್ರಮದಿಂದ ಬೆಳೆದ ಉತ್ಪತ್ತಿಯಲ್ಲಿ ಅವರಿಗೆ ಸಲ್ಲಬೇಕಾದ ನ್ಯಾಯದ ಪಾಲನ್ನು ನೀಡದೇ ಕುಡಿಯರ ಶೋಷಣೆ ಮಾಡುತ್ತಾರೆ. ಜೊತೆಗೆ ಭೋಗಲಾಲಸೆಯ ಬದುಕನ್ನು ನಡೆಸುವ ಇವರಿಗೆ ಕುಡಿಯರ ಸೌಂದರ್ಯವತಿಯರ ಮೇಲೆ ವ್ಯಭಿಚಾರದ ಕಣ್ಣು ಬೀಳುತ್ತದೆ. ಅವರ ಕಾಮಲಾಲಸೆಯ ಕಣ್ಣು ಕೆಂಪಿ, ಗಿಡ್ಡಿಯರ ಮೇಲೂ ಬೀಳುತ್ತದೆ. ಪರಿಣಾಮವಾಗಿ ಗಿಡ್ಡಿಯ ಸಂದರ್ಭದಲ್ಲಿ ತಿಮ್ಮನ ಬಡಿಗೆಯ ಏಟನ್ನು ತಿನ್ನುತ್ತಾರೆ. ಇದು ತಿಮ್ಮ ಧಣಿಯ ವಿರುದ್ಧ ಪ್ರತಿಭಟನೆ ಮಾಡುವುದರ ಸಂಕೇತವಾಗಿದೆ.

ತುಕ್ರ ಇತರ ಕುಡಿಯರಿಗಿಂತ ಭಿನ್ನವಾಗಿ ಚಿತ್ರಿತನಾಗಿದ್ದಾನೆ. ತನ್ನ ಬೇಳೆ ಬೇಯಿಸಿಕೊಳ್ಳಲು ತಿರುಮಲ ಭಟ್ಟರನ್ನು ಕೂಡಿಕೊಳ್ಳುವ ತುಕ್ರ ಅವರ ಕೃಪಾಕಟಾಕ್ಷಕ್ಕೆ ಪಾತ್ರನಾಗಲು ಬೇಕಾದ ಆಟವನ್ನು ಆಡುತ್ತ, ಕರಿಯನನ್ನು ದೂರಸರಿಸಿ ತಾನು ಗುರಿಕಾರನಾಗಬೇಕೆಂಬ ಕನಸನ್ನು ನನಸು ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆದರೆ ಕುಡಿಯರ ಸಂಪ್ರದಾಯವನ್ನು ಪ್ರತಿನಿಧಿಸುವ ದೈವ ಧನಿಗಳ ಕರಾಮತ್ತನ್ನು ಪ್ರತಿಭಟಿಸಿ ಕರಿಯನನ್ನೇ ಗುರಿಕಾರನನ್ನಾಗಿ ನೇಮಿಸಿ ಧಣಿಯ ಹಾಗೂ ತುಕ್ರನ ದುರಾಲೋಚನೆಯನ್ನು ಮಟ್ಟಹಾಕುವುದನ್ನು ಕಾಣಬಹುದಾಗಿದೆ.

ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳನ್ನು ಅವಲೋಕಿಸಿದಾಗ ಕುಡಿಯರ ಅನುಪಮ ಸುಂದರಿ ಕೆಂಪಿ ಕರಡಿ ತುಕ್ರನ ಮನಸ್ಸನ್ನು ಗೆಲ್ಲುತ್ತಾಳೆ. ತುಕ್ರ ತನ್ನ ಮೊದಲ ಹೆಂಡತಿ ಇರುವಾಗಲೇ ಕೆಂಪಿಯನ್ನು ಮದುವೆಯಾಗುತ್ತಾನೆ. ತುಕ್ರನ ಕಾಮದಾಹ ಕೆಂಪಿಯನ್ನು ಮದುವೆಯಾದ ಅನಂತರದಲ್ಲೂ ಚಿಕ್ಕಿಯೊಡನೆ ಗುಪ್ತ ಪ್ರಣಯಕ್ಕೆ ತಿರುಗಿ ಅದು ಕೆಂಪಿಗೆ

ಗೊತ್ತಾಗಿ ಅವಳು ಸಿಡಿದೆದ್ದಾಗ ಅವಳ ಮೇಲೆ ತುಕ್ರ ಹಲ್ಲೆ ಮಾಡುತ್ತಾನೆ. ಕೆಂಪಿ ಗಂಡನನ್ನು ತೊರೆದು ತನ್ನ ತಂದೆ ಇರುವ ಹಿರಿಮಲೆಗೆ ಹೋಗಿ ವಾಸಿಸುತ್ತಾಳೆ. ಮೊದಲಿನಿಂದಲೂ ಕೆಂಪಿಯ ಮೇಲೆ ಮನಸ್ಸುಳ್ಳವನಾದ ಬೂದ ಅವಳನ್ನು ಒಲಿಸಿ ಮದುವೆಯಾಗಿ ಅವಳೊಂದಿಗೆ ಸಂಸಾರ ಹೂಡುತ್ತಾನೆ. ಆದರೆ ಕರಿಯ ತಿಮ್ಮ-ಗಿಡ್ಡಿಯರೊಡನೆ ಅನ್ಯೋನ್ಯತೆಯಿಂದ ಇರುವುದನ್ನು ಸಹಿಸದ ಕೆಂಪಿ ಗಿಡ್ಡಿಯ ಮೇಲೆ ಅಪಪ್ರಚಾರ ಮಾಡಿ ಅವಳ ತಿಂಡಿಯಲ್ಲಿ ಮದ್ದು ಸೇರಿಸಿ ಕೊಟ್ಟು ಅವಳ ಗರ್ಭಸ್ರಾವಕ್ಕೂ ಕಾರಣಳಾಗುತ್ತಾಳೆ. ಕೊನೆಗೆ ತನ್ನ ಪಾಪಕ್ಕೆ ತಾನೇ ಮರುಗಿ ಕೆಂಪಿ ಸಾವನ್ನಪ್ಪುತ್ತಾಳೆ.

ಹಿರಿಮಲೆಯ ಚೋಮನ ಮಗಳಾದ ಗಿಡ್ಡಿ ಸೌಂದರ್ಯವತಿಯಾದ ಇವಳು ಕ್ರೈಸ್ತಮತದ ಬ್ರಗಾಂಜನ ಪ್ರಭಾವಕ್ಕೆ ಒಳಗಾಗಿ, ಅವನ ಕಾಮದಾಹಕ್ಕೆ ಬಲಿಪಶುವಾಗಿ ಕುಡಿಯರಿಂದ ತಿರಸ್ಕಾರಕ್ಕೆ ಒಳಗಾಗಿ ಜಾತಿಭ್ರಷ್ಟಳಾಗುತ್ತಾಳೆ. ಸೀಳುತುಟಿಯ ತಿಮ್ಮ ತನ್ನ ಸಮುದಾಯದಲ್ಲಿ ಹೆಣ್ಣು ಸಿಗಲಾರದಾದಾಗ ಗಿಡ್ಡಿಯನ್ನು ವರಿಸಿ ಆದರ್ಶ ದಾಂಪತ್ಯವನ್ನು ಮೆರೆಯುತ್ತಾನೆ.

ಕಾದಂಬರಿಯಲ್ಲಿ ನಿಸರ್ಗದ ಮಕ್ಕಳಾಗಿ ಬಾಳಿ ಬದುಕುವ ಕುಡಿಯರ ಜೀವನವಿಧಾನವು, ಅವರ ನಂಬಿಕೆ–ಆಚಾರ–ವಿಚಾರಗಳ ಪರಿಚಯವಾಗುತ್ತದೆ. ಆಧುನಿಕತೆಯ ಪ್ರಭಾವದಿಂದಾಗಿ ಕುಡಿಯ ಸಮುದಾಯದ ಮೇಲೆ ಆದ ಬದಲಾವಣೆಗಳನ್ನು ಇದು ವಿಶ್ಲೇಷಿಸುತ್ತದೆ: "ಪ್ರಾಕೃತಿಕವಾಗಿ ಬದುಕುತ್ತಿದ್ದ ಸಂಸ್ಕೃತಿಯೊಂದರ ಶೈಥಿಲ್ಯದ ಹಿನ್ನೆಲೆಗಳ ಶೋಧವು ಈ ಕಾದಂಬರಿಯ ಉದ್ದೇಶಗಳಲ್ಲಿ ಒಂದಾಗಿದೆ. ಇದರಲ್ಲಿ ಬರುವ ಕುಡಿಯರಲ್ಲಿ 'ಸಿಕ್ಕದ ಬೇಟೆ, ಹಾಕಿದ ಹೊಂಚು, ಇರಿಸಿದ ಉರುಳು –ಮುಂಚಿತವಾಗಿ ಒಬ್ಬರಿಗೊಬ್ಬರು ತಿಳಿಸುವ ವಾಡಿಕೆಯಿಲ್ಲ' ಎನ್ನುವಂಥ ಹಲವು ಅಂಶಗಳು ಅವರಲ್ಲಿ ಪ್ರಾಣಿಪ್ರವೃತ್ತಿಗಳೇ ಪ್ರಧಾನವಾಗಿರುವ ಸೂಚನೆಗಳನ್ನು ಕೊಡುತ್ತವೆ. ಹೊರಜಗತ್ತಿನ ಆರ್ಥಿಕ ನೀತಿಯಲ್ಲಾದ ಪರಿವರ್ತನೆಗಳು ಇವರ ಜೀವನದ ಗತಿಯ ಮೇಲೂ ಪ್ರಭಾವವನ್ನು ಬೀರುತ್ತವೆ......" (ತಾಳ್ತಜೆ ವಸಂತಕುಮಾರ, ೨೦೦೩, ಪು. ೧೩೭).

ಸಂಕೇತಗಳನ್ನು ಸಮರ್ಥವಾಗಿ ಬಳಸಿಕೊಂಡಿರುವ ಕಾರಂತರು ಕಾದಂಬರಿಯುದ್ದಕ್ಕೂ ಸಂಕೇತಗಳ ಮುಖಾಂತರವೇ ಕಾದಂಬರಿಯ ಆಶಯವನ್ನು ಕಟ್ಟಿಕೊಡುತ್ತಾರೆ. "ಕರಿಮಲೆಯಲ್ಲಿ ನಾಗರಿಕ ಕುಟುಂಬವೊಂದು ವಾದಕ್ಕೆ ಬರುವುದು, ಅದರ ಮುಂದಿನ ಬದಲಾವಣೆಯಾಯಿತು. ತಾವು ಅದುವರೆಗೆ ಕಾಣದಿದ್ದ ತುಪಾಕಿಯನ್ನು ಕಂಡ ಮಲೆಕುಡಿಯರ ಬೆರಗು, ಈ ಕಾದಂಬರಿಯುದ್ದಕ್ಕೂ ಒಂದು ಸಂಕೇತವಾಗಿ ಬರುತ್ತದೆ. ಎಲ್ಲ ಬಗೆಯ ಅಂಧಶ್ರದ್ಧೆಗಳು, ಮೌಢ್ಯಗಳು, ಅಜ್ಞಾನಗಳನ್ನು ಮೆಟ್ಟಿನಿಲ್ಲುವ ಕುಡಿಯರ

ಬದುಕಿನ, ಬದುಕುವ ಛಲವೂ ಇಷ್ಟೇ ಸಮರ್ಥವಾಗಿ ಇನ್ನೊಂದು ಸಂಕೇತವಾಗಿ ಇದರಲ್ಲಿ ಬರುತ್ತದೆ" (ಅದೇ ಪು. ೧೩೨).

ಕುಡಿಯ ಸಮುದಾಯದ ಆಚಾರ-ವಿಚಾರಗಳು, ಊಟ-ಉಡುಗೆ-ತೊಡುಗೆಗಳ ಚಿತ್ರಣವನ್ನು ಕೊಡುವ ಕಾದಂಬರಿ ಇದಾಗಿದ್ದು, ಮತಾಂತರದ ಒತ್ತಡಕ್ಕೆ ಸಿಲುಕುವ ಮತ್ತೆ ತಮ್ಮ ಸ್ಥಳೀಯ ದೈವಗಳ ಅವಕೃಪೆಗೆ ಪಾತ್ರವಾಗಬೇಕಾದೀತು ಎಂಬ ಭಯ ಆವರಿಸಿ ಮತಾಂತರಗೊಳ್ಳದೇ ಇರುವುದನ್ನು ಕಾಣಬಹುದಾಗಿದೆ. 'ಚೋಮನದುಡಿ'ಯಲ್ಲಿ ಚೋಮ ತನ್ನದಾದ ತುಂಡುಹೊಲ ಉಳುವ ಕನಸನ್ನು ಕಟ್ಟಿಕೊಂಡು ಒಂದು ಹಂತದಲ್ಲಿ ಮತಾಂತರಗೊಳ್ಳುವುದಾಗಿ ನಿರ್ಧಾರ ಮಾಡಿದವ ಕೊನೆಯ ಕ್ಷಣದಲ್ಲಿ ಪಂಜುರ್ಲಿಭೂತಕ್ಕೆ ಹೆದರಿ ತನ್ನ ನಿರ್ಧಾರವನ್ನು ಬದಲಿಸಿದ ಹಾಗೆ ಈ ಕಾದಂಬರಿಯಲ್ಲೂ ಇಂತಹುದೇ ಸನ್ನಿವೇಶವೊಂದನ್ನು ಕಾಣುತ್ತೇವೆ. ಕಾದಂಬರಿಯನ್ನು ಅಧ್ಯಯನದ ವಸ್ತುವನ್ನಾಗಿ ಸ್ವೀಕರಿಸಿ ಈ ಕಾದಂಬರಿಯಲ್ಲಿ ಕುಡಿಯರನ್ನು ತೋಟಗಾರರನ್ನಾಗಿ ಗುರುತಿಸುವ ವೈ.ಆರ್. ಮೋಹನ್ ಅವರ ಅಭಿಪ್ರಾಯವನ್ನು ಗಮನಿಸಬಹುದಾಗಿದೆ: "ಈ ಕಾದಂಬರಿಯಲ್ಲಿ ಓದುಗರು ಗಮನಿಸಬೇಕಾದ ಮುಖ್ಯಾಂಶಗಳೆಂದರೆ, ಮಲೆಕುಡಿಯರು ಅನೇಕ ತಲೆಮಾರುಗಳ ಹಿಂದೆ 'ಗವಿಮಾನವ'(cavemen)ರಾಗಿದ್ದರು. ಅವರು ಪ್ರಾಚೀನ ಪದ್ಧತಿ (primitive) `slash and burn' ಅನುಸರಿಸಿ, ಕಾಡು ಕಡಿದು, ಬೆಂಕಿ ಹಾಕಿ ಎಲ್ಲವನ್ನು ಸುಟ್ಟು, ಉಳಿದ ಬೂದಿಯನ್ನು ಮಣ್ಣಿನೊಡನೆ ಬೆರೆಸಿ, ಬೀಜ ಬಿತ್ತಿ, ತಮಗೆ ಬೇಕಾದ ಕಾಳು-ಕಡ್ಡಿ ಬೆಳೆದುಕೊಳ್ಳುತ್ತಿದ್ದರು. ಈ ಜಾಗ ಬಂಜರಾಗುತ್ತ ಹೋದಂತೆ ಅದನ್ನು ಬಿಟ್ಟು ಕಾಡಿನ ಮತ್ತೊಂದು ಭಾಗದಲ್ಲಿ ಅದೇ ವಿಧಾನವನ್ನು ಅನುಸರಿಸಿ ಹೊಸ ಬೆಳೆಸನ್ನು ಬೆಳೆದುಕೊಳ್ಳುತ್ತಿದ್ದರು. ಮಾನವಶಾಸ್ತ್ರದ ಪ್ರಕಾರ ಈ ವಿಧಾನ ಅನುಸರಿಸುವ ಜನರಿಗೆ ತೋಟಗಾರರು (horticulturists) ಎಂದು ಕರೆಯುತ್ತಾರೆ. ಏಕೆಂದರೆ ಇವರು ಅನುಸರಿಸುವ ವಿಧಾನದಲ್ಲಿ ನೀರಾವರಿ ವ್ಯವಸ್ಥೆಯಾಗಲೀ, ಗೊಬ್ಬರದ ಉಪಯೋಗವಾಗಲೀ, ನೇಗಿಲು ಮುಂತಾದ ಉತ್ತಮ ಉಪಕರಣಗಳ ಬಳಕೆಯಾಗಲಿ ಕಂಡುಬರುವುದಿಲ್ಲ. ಇವರು ತೋಟಗಾರಿಕೆಯಲ್ಲಿ ಉಪಯೋಗಿಸುವುದು ಮುಖ್ಯವಾಗಿ `hoe' ಎಂದು ಕರೆಯಲ್ಪಡುವ ಹಿಡಿಯುಳ್ಳ ಕೋಲು. ಅದರಿಂದ ಮಾನವಶಾಸ್ತ್ರದಲ್ಲಿ ಈ ಹಂತದಲ್ಲಿರುವ ಮಾನವ ಸಂಸ್ಕೃತಿಗೆ `hoe culture' ಎಂದು ಕರೆಯುತ್ತಾರೆ. ಇಂಥ ಜನರಲ್ಲಿ ತೋಟಗಾರಿಕೆ ಅವರ ಜೀವನದ ಒಂದು ಪೂರಕವಾದ ಅಂಗವಾಗಿರುತ್ತದೆ. ಕುಡಿಯರ ಆಹಾರದ ಹೆಚ್ಚುಪಾಲು ಬೇಟೆಯಿಂದ, ಮೀನುಗಾರಿಕೆಯಿಂದ, ಗಡ್ಡೆಗೆಣಸುಗಳನ್ನು ಆಯ್ದು ತರುವುದರಿಂದ ಪೂರೈಕೆಯಾಗುತ್ತಿತ್ತು (ನಾಗ ಐತಾಳ (ಸಂ.); ೨೦೦೦; ಪು. ೧೫೫,

೧೫೬).

ಕಾದಂಬರಿಯು ಕುಡಿಯರ ಜನಾಂಗದ ನಂಬಿಕೆಗಳು, ಸೇವೆ, ವಿಧಿವಿಧಾನಗಳು, ಕೋಲ ಮಾಡುವುದು ಇತ್ಯಾದಿಗಳನ್ನು ಸ್ಥೂಲವಾಗಿ ಪರಿಚಯಿಸುವಲ್ಲಿ ಸಫಲವಾಗಿದ್ದರೂ ಅವರ ಜೀವನದ ಆಳ-ಅಗಲಗಳನ್ನು ಅಳವಡಿಸಿಕೊಂಡು ದಟ್ಟವಾಗಿ, ಪರಿಣಾಮಕಾರಿಯಾಗಿ ಬೆಳೆಯುವುದರಲ್ಲಿ ವಿಫಲವಾಗಿದೆ ಎಂದು ಕಾದಂಬರಿಯಲ್ಲಿನ ನ್ಯೂನತೆಯನ್ನು ಗುರುತಿಸುವ ವೈ.ಆರ್. ಮೋಹನ್ ಅವರು ಕುಡಿಯರ ಜೀವನದಲ್ಲಿ ಅನೇಕ ಕಾರಣಗಳಿಂದ ಹೊರಜಗತ್ತಿನ ಸಂಪರ್ಕದಿಂದ, ಮತಾಂತರದಿಂದ, ವಲಸೆ ಹೋಗುವುದರಿಂದ ತ್ವರಿತ ಗತಿಯಲ್ಲಿ ಬದಲಾವಣೆಗಳು ಆಗುತ್ತಿರುವುದನ್ನು ಒತ್ತಿಹೇಳಿ ಈ ಬಗ್ಗೆ ಕುಡಿಯರ ಜೀವನದ ಆಳವಾದ ಅಧ್ಯಯನದ ಆವಶ್ಯಕತೆ ಇದೆ ಎಂದು ಅಭಿಪ್ರಾಯಪಡುತ್ತಾರೆ.

**೫. ಮೂಕಜ್ಜಿಯ ಕನಸುಗಳು**

ಶಿವರಾಮ ಕಾರಂತರ ಕಾದಂಬರಿಯ ಓದುಗರಿಗೆ 'ಮೂಕಜ್ಜಿಯ ಕನಸುಗಳು' ಕಾದಂಬರಿ ಹೊಸ ಬಗೆಯಲ್ಲಿ ರಚನೆಯಾದ ಕಾದಂಬರಿ ಎಂದು ಅನಿಸಬಹುದಾದ ಕೃತಿಯಾಗಿದೆ. ಮುಖ್ಯವಾಗಿ ವಾಸ್ತವಿಕ ನೆಲೆಯಲ್ಲಿ ಕಾದಂಬರಿಗಳನ್ನು ರಚಿಸಿರುವ ಕಾರಂತರು ಈ ಕಾದಂಬರಿಯಲ್ಲಿ ಮನುಷ್ಯನಿಗೂ ಹಾಗು ಆತನ ಸಾಂಸ್ಕೃತಿಕವಾದ ನೆನಪುಗಳ ಮಧ್ಯದಲ್ಲಿ ಸಂಬಂಧಗಳನ್ನು ಬಿಚ್ಚಿ ತೋರಿಸುವ ಪ್ರಯತ್ನವನ್ನು ಈ ಕಾದಂಬರಿಯಲ್ಲಿ ಮಾಡಿರುತ್ತಾರೆ.

ಕಾದಂಬರಿಯ ಶೀರ್ಷಿಕೆಯೇ ಹೇಳುವ ಹಾಗೆ ಕಾದಂಬರಿಯಲ್ಲಿ ಕನಸುಗಳಿಗೆ ಪ್ರಧಾನ ಸ್ಥಾನ ಲಭ್ಯವಾಗಿದ್ದು ಮೂಕಜ್ಜಿಯ ಮೊಮ್ಮಗ ಸುಬ್ರಾಯ ಆಕೆಯ ಕನಸುಗಳನ್ನು ಹೊರತರುವ ಮಾಧ್ಯಮವಾಗಿ ಕೆಲಸ ಮಾಡುತ್ತಾನೆ. ಸುಬ್ರಾಯನಿಗೆ ಮೂಕಜ್ಜಿಯ ಬಗೆಗೆ ಅಪಾರವಾದ ಗೌರವದ ಜೊತೆಗೆ ವಿಸ್ಮಯವೂ ಉಂಟು. ಉಳಿದವರೆಲ್ಲರೂ ಮೂಕಜ್ಜಿಯ ಬಗೆಗೆ 'ಅರಳುಮರಳು, ಹುಚ್ಚುಚ್ಚಾಗಿ ಮಾತನಾಡುತ್ತಾಳೆ' ಎಂಬ ಭಾವನೆ ವ್ಯಕ್ತಪಡಿಸಿದರೆ ಸುಬ್ರಾಯನಿಗೆ ಮಾತ್ರ ಮೂಕಜ್ಜಿಯ ಬಾಯಲ್ಲಿ ಭೂತವನ್ನು, ವರ್ತಮಾನದ ಸ್ಥಿತಿಗಳನ್ನು, ಭವಿಷ್ಯತ್ತಿನ ಆಗುಹೋಗುಗಳನ್ನು ಲಕ್ಷ್ಯವಿಟ್ಟು ಗ್ರಹಿಸುವ, ಅವುಗಳನ್ನು ಕೆದಕಿ ಕೇಳುವ ಕುತೂಹಲ. ಮೂಕಜ್ಜಿ ಹಾಗೂ ಆಕೆಯ ಮೊಮ್ಮಗ ಸುಬ್ರಾಯ ಇವರಿಬ್ಬರ ನಡುವೆ ನಡೆಯುವ ಸಂಭಾಷಣೆಯ ವಸ್ತುವೇ ಕಾದಂಬರಿಯ ಮುಖ್ಯ ತಿರುಳಾಗಿದೆ. ಕಾದಂಬರಿಯಲ್ಲಿ ಪ್ರಸ್ತಾಪಿಸಲ್ಪಡುವ ಇತರ ಪಾತ್ರಗಳೆಂದರೆ –ಸುಬ್ರಾಯನ ಹೆಂಡತಿ ಸೀತೆ, ಮಕ್ಕಳಾದ ಕಿಟ್ಟು ಮತ್ತು ಚಂದ್ರ, ಸುಬ್ರಾಯನ ತಮ್ಮ ನಾರಾಯಣ, ಗೆಳೆಯ ಜನಾರ್ದನ, ಪಕ್ಕದ

ಊರಿನ ಮಂಜುನಾಥ, ರಾಮಣ್ಣ, ನಾಗಿ, ನಾಗಿಗೆ ಮೋಸಮಾಡಿದ ಸೀನಪ್ಪ, ನಾರಾಯಣನ ಭಾವ ಅನಂತ ರಾವ್ ಹಾಗೂ ಅನಂತ ರಾವ್ ಶಿಷ್ಯ ರಾಮದಾಸ ಇವಿಷ್ಟು ಕಾದಂಬರಿಯಲ್ಲಿ ಬರುವ ಪಾತ್ರಗಳು.

ಮೂಕಜ್ಜಿ ಮಾತನಾಡಲಾಗದ ಮೂಕಿಯಲ್ಲ. ಬದಲಾಗಿ ಮಾತನಾಡಬಲ್ಲವಳು. 'ಮೂಕಾಂಬಿಕೆ' ಹೆಸರಿನ ಸಂಕ್ಷಿಪ್ತ ರೂಪವೇ ಮೂಕಿಯಾಗಿ, ಅಜ್ಜಿಯೂ ಆಗಿರುವುದರಿಂದ ಮೂಕಜ್ಜಿಯಾಗಿದ್ದಾಳೆ. ಬಹುಪಾಲು ಜನರಿಗೆ ಮೂಕಿಯಾಗಿಯೇ ಕಾಣಲ್ಪಡುವ ಈ ಅಜ್ಜಿ ಕಾದಂಬರಿಯುದ್ದಕ್ಕೂ ಹೆಚ್ಚಿಗೆ ಮಾತನಾಡಿರುವುದು ಮೊಮ್ಮಗ ಸುಬ್ರಾಯನ ಜೊತೆಯಲ್ಲೇ. ಕಾದಂಬರಿಯ ನಿರೂಪಕ ಮೂಕಜ್ಜಿಯಲ್ಲಿ ತನ್ನ ಕುತೂಹಲವನ್ನೆಲ್ಲ ತಣಿಸಿಕೊಳ್ಳುವ ಉದ್ದೇಶದಿಂದ ಅನೇಕ ವಿಚಾರಗಳನ್ನು ಇಡುತ್ತಾನೆ. ಬಾಲ್ಯದಲ್ಲಿಯೇ ವಿಧವೆಯಾಗಿ ಬದುಕಿನುದ್ದಕ್ಕೂ ವಿಧವಾ ಪಟ್ಟವನ್ನೇ ಹೊತ್ತುಕೊಂಡು ಈಗ ಸಾವು ಸಮೀಪಿಸಿರುವ ಈ ಅಜ್ಜಿಯ ಪಾತ್ರಚಿತ್ರಣದ ಬಗ್ಗೆ ಕಾರಂತರೇ ಹೇಳುವ ಮಾತುಗಳು ಮುಖ್ಯವೆನಿಸುತ್ತವೆ: "ಸಂಪ್ರದಾಯಿಕತೆಯಿಂದ ಹೆಡೆಗಟ್ಟಿದ ಮನಸ್ಸುಗಳನ್ನು ತುಸುತುಸುವಾಗಿ ಕಾಯಿಸಿ, ಕರಗಿಸುವ ಕೆಲಸ ಅವಳದ್ದು. ಅಂಥ ಅಜ್ಜಿಯೊಬ್ಬಳು ಇದ್ದಾಳೇಯೇ ಎಂಬ ಸಂಶಯ ಬಂದರೆ ನಮ್ಮ ಸಂಸ್ಕೃತಿಯ ನಂಬಿಕೆಗಳನೇಕವನ್ನು ಕುರಿತಾದ ಸಂಶಯಪಿಶಾಚಿಯ ರೂಪವೇ ಅವಳೆಂದು ತಿಳಿದರಾಯಿತು". (ಶಿವರಾಮ ಕಾರಂತ; ೨೦೦೭; ಪು:iii-iv)ಈ ಸಂಶಯಪಿಶಾಚಿಯ ರೂಪವೇ ನಾಲ್ಕೈದು ಸಾವಿರ ವರ್ಷಗಳಿಂದ ಹರಿದುಬಂದ ಸೃಷ್ಟಿ ಸಮಸ್ಯೆಯನ್ನು ಬಿಡಿಸುವ ಪ್ರಯತ್ನ ಮಾಡಿದ್ದಾಳೆ. ಮೂಕಜ್ಜಿಗೆ ಒಳಗಣ್ಣೊಂದನ್ನು ನೀಡಲಾಗಿದ್ದು ಅವಳ ಆ ದೃಷ್ಟಿ ತೀಕ್ಷ್ಣವಾಗಿದ್ದು ಅವಳು ಯಾವುದೇ ವಸ್ತುವನ್ನು ಮುಟ್ಟಲಿ ಅಥವಾ ವಿಶೇಷತೆಯನ್ನು ಹೊಂದಿರುವ ಪರಿಸರದಲ್ಲಿ ನಡೆದಾಡಿದರೆ ಸಾಕು ಅವುಗಳ ಪೂರ್ವಚರಿತ್ರೆಯೇ ಮೂಕಜ್ಜಿಗೆ ಸುರುಳಿ ಸುರುಳಿಯಾಗಿ ಬಂದು ನಿಲ್ಲುತ್ತದೆ. ಮೂಕಜ್ಜಿಯ ಈ ವಿಶೇಷತೆ ಉಳಿದವರಿಗೆ ಅಸಹಜ, ಅರಳುಮರಳು, ಹುಚ್ಚುತನ ಎಂದು ತೋರಿದರೂ ಕಾಲೇಜು ವ್ಯಾಸಂಗ ಮಾಡಿ ಹಳ್ಳಿಯಲ್ಲೇ ಉಳಿದು ರೈತನಾಗಿಯೇ ಬದುಕು ನಿರ್ವಹಿಸುತ್ತಿರುವ ಸುಬ್ರಾಯನಿಗೆ ಮಾತ್ರ ತನ್ನ ಪಾಲಿಗೆ ಮೂಕಜ್ಜಿ ಅಪೂರ್ವವಾದ ಒಂದು ನಿಧಿ ಸಿಕ್ಕಿದ ಹಾಗೆ ಎಂದು ಭಾವಿಸುತ್ತಾನೆ. ಈ ವಿಶೇಷವಾದ ಒಳಗಣ್ಣಿನಿಂದಲೇ ಮೂಕಜ್ಜಿ ಕಾದಂಬರಿಯುದ್ದಕ್ಕೂ ಅನೇಕ ಪೂರ್ವಾಪರಗಳನ್ನು ವಿವರಿಸುತ್ತ ಸುಬ್ರಾಯನ ಜಿಜ್ಞಾಸೆಗೆ ಸೂಕ್ತ ವಿವರಣೆಯನ್ನು ನೀಡುತ್ತ ಹೋಗುತ್ತಾಳೆ. ಮೂಡೂರಿನ ಬಸರೀಕಟ್ಟೆ, ನಡೂರಿನ ಅಶ್ವತ್ಥಕಟ್ಟೆ ಹಾಗೂ ಪಡೂರಿನಲ್ಲಿ ಬೂದಿಕಟ್ಟೆಗಳು ಕ್ರಮವಾಗಿ ಹುಟ್ಟು, ಬಾಳು.

ಸಾವು ಇವುಗಳನ್ನು ಪ್ರತಿನಿಧಿಸುತ್ತವೆ ಎಂಬ ವ್ಯಾಖ್ಯಾನ ನೀಡುತ್ತಾಳೆ. ಹೀಗೆ ಬದುಕಿನ ಬಗ್ಗೆ, ಗಂಡುಹೆಣ್ಣುಗಳ ಬಗ್ಗೆ, ಅವರಲ್ಲಿನ ಆಕರ್ಷಣೆಯ ಬಗ್ಗೆ, ಪರಜಾತಿಯ ಮದುವೆಯ ಬಗ್ಗೆ ಆಧುನಿಕ ಅಭಿಪ್ರಾಯ ನೀಡುವ ಮೂಕಜ್ಜಿಯದು ವಾಸ್ತವಿಕ ದೃಷ್ಟಿಕೋನ ಎಂದೇ ಅರ್ಥೈಸಬೇಕಾಗುತ್ತದೆ. 'ದೇವರು ಮಾಡಿಟ್ಟ ಜಾತಿ ಎರಡೇ ಎರಡು –ಗಂಡು, ಹೆಣ್ಣು. ನಾವು ನೀವು ಮಾಡಿಕೊಂಡದ್ದು ನೂರು, ಸಾವಿರ ಜಾತಿ. ಈ ಪಾಟಿ ಜಾತಿಗಳು ಯಾವ, ಯಾವ ಜೀವಿಗಳಲ್ಲೂ ಇಲ್ಲ. ಗಂಡು ಗಂಡನ್ನು ಮದುವೆಯಾಗುವುದಿಲ್ಲ. ಹೆಣ್ಣು ಹೆಣ್ಣನ್ನು ಮದುವೆಯಾಗುವುದಿಲ್ಲ. ಆ ಎರಡು ಜಾತಿಗಳ ಕೂಡಿಕೆ ದೇವರಿಗೆ ಇಷ್ಟದ್ದೇ. ಉಳಿದವರಿಷ್ಟ, ಊರವರಿಷ್ಟ. ದೇವರಿಷ್ಟಕ್ಕೆ ಅಡ್ಡ ಬಂದರೆ ಯಾರೇನು ಮಾಡುತ್ತಾರೆ?" (ಅದೇ ಪು: ೨೩೧) ಈ ಮಾತುಗಳು ಮೂಕಜ್ಜಿಯ ಅತ್ಯಾಧುನಿಕವಾದ ವಿಚಾರಧಾರೆಯನ್ನು ಪ್ರತಿನಿಧಿಸುತ್ತವೆ.

ಪ್ರಾಣಿಗಳ ಬದುಕನ್ನು ಉದಾಹರಿಸಿ ಮನುಷ್ಯಲೋಕದ, ದೇವರ ಪ್ರಭಾವ, ಮಹಿಮೆ ಇರುವುದನ್ನು ಪ್ರಶ್ನಿಸುವ ಮೂಕಜ್ಜಿ ದೇವರನ್ನು ಮನುಷ್ಯರೇ ಮಾಡಿಕೊಂಡದ್ದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತ ದೇವರು ಜನರು ನಂಬಿದರೆ ಉಂಟು; ನಂಬದಿದ್ದರೆ ಇಲ್ಲ ಎಂಬ ಅಭಿಪ್ರಾಯ ಪಡುತ್ತಾಳೆ. ಬದುಕು ಮಾಯೆ ಎಂದು ತ್ಯಜಿಸಿ ದೇವರನ್ನು ಭಕ್ತಿಯಿಂದ ಹಾಡಿ ಹೊಗಳುವುದನ್ನು ವಿಡಂಭಿಸುವ ಮೂಕಜ್ಜಿ ಕಾರಂತರ ವಿಚಾರಧಾರೆಯನ್ನೇ ಪ್ರತಿನಿಧಿಸುತ್ತಾಳೆ. ಸಾಮಾಜಿಕ ಬದುಕನ್ನು ತ್ಯಜಿಸಿ ಸನ್ಯಾಸಿಗಳಾಗಿ ಕಾಡುಗುಡ್ಡಗಳಲ್ಲಿ ಸಂಚರಿಸುವ ತಪಸ್ವಿಗಳನ್ನು ಮೂಕಜ್ಜಿ ಬಿಡಂಬಿಸುತ್ತಾಳೆ: ದೇವರ ಅವತಾರಗಳನ್ನು, ದುಷ್ಟರ ನಿಗ್ರಹಕ್ಕಾಗಿ ದೌರ್ಜನ್ಯ ನಡೆಯುತ್ತಿದ್ದರೂ ಎಷ್ಟೋ ವರ್ಷಗಳ ಅನಂತರ ಹುಟ್ಟಿದನಂತರದಲ್ಲಿ ಅವರ ವಧೆ ಮಾಡುವುದನ್ನು ಕೂಡ ತಾರ್ಕಿಕ ಚಿಂತನೆಗೆ ಒಳಪಡಿಸುವ ಮೂಕಜ್ಜಿ ಅಲ್ಲಿರುವ ಅಸಂಬದ್ಧತೆಯನ್ನು ಹೀಗೆಳೆಯುತ್ತಾಳೆ. ರಾವಣನನ್ನು ಕೊಲ್ಲುವ ರಾಮನ ಅವತಾರ ಹಿನ್ನಲೆಯನ್ನು ತರ್ಕಿಸುತ್ತಾಳೆ.

ಪುರಾಣದ ಕಥೆಗಳು, ಭಗವದ್ಗೀತೆಗಳನ್ನು ಅಲ್ಲಿ ಬರುವ ಪ್ರಸಂಗಗಳ ಸಾಧ್ಯತೆಗಳ ಬಗ್ಗೆ ಮೂಕಜ್ಜಿಯ ತರ್ಕ ಕಾರಂತರ ವೈಚಾರಿಕತೆಯ ಹೊಳಹುಗಳನ್ನೇ ಓದುಗರಿಗೆ ಮನದಟ್ಟು ಮಾಡಿಕೊಡುತ್ತವೆ. ಪುರಾಣ ಪ್ರಸಂಗಗಳಲ್ಲಿ ವಿರೋಧಾಭಾಸಗಳನ್ನು ಪಟ್ಟಿಮಾಡುತ್ತ ಅವುಗಳನ್ನು ವಿರೋಧಿಸುವ ಮೂಕಜ್ಜಿಯನ್ನು ಕಾಣಬಹುದು. ವಿರೋಧಾಭಾಸಗಳನ್ನು ಸೃಷ್ಟಿಸುವ ಪುರಾಣದಲ್ಲಿಯ ವಿಚಾರಗಳನ್ನು ವಾಸ್ತವಿಕ ತಳಹದಿಯ ಮೇಲೆ ತರ್ಕಿಸುವ ಬುದ್ಧಿ ಕಾರಂತರ ವೈಚಾರಿಕತೆಯ ನಿದರ್ಶನವೇ ಆಗಿದೆ. ಮನುಷ್ಯನ ಬದುಕಿನಲ್ಲಿ

ಪಾಪಪುಣ್ಯದ ಜಿಜ್ಞಾಸೆಯನ್ನು, ಸುಖದುಃಖಗಳ ವ್ಯಾಖ್ಯಾನವನ್ನು ಪಾಪಪುಣ್ಯದ ಫಲವೆಂದು ನಂಬುವ ವಿಚಾರವನ್ನು ಕೂಡ ಮೂಕಜ್ಜಿ ತರ್ಕಿಸುತ್ತಾಳೆ. ಮನುಷ್ಯನ ಬದುಕಿನಲ್ಲಿ ಕರ್ಮದ ಬಗೆಗೆ ಮೂಕಜ್ಜಿ ಹೇಳುವ ಮಾತುಗಳು ನಮ್ಮ ವಾಸ್ತವ ಬದುಕಿನಲ್ಲೇ ಹುಡುಕುವ ಪ್ರಯತ್ನ ಮಾಡುತ್ತವೆ.

ಸಮಾಜದಲ್ಲಿ ನೇರವಾಗಿ ಪ್ರಾಮಾಣಿಕವಾಗಿ ಬದುಕದೇ ಸಭ್ಯತೆಯ ಸೋಗನ್ನು ಹಾಕಿಕೊಂಡವರ ಒಳಗಿನ ಹುಳುಕನ್ನು ಮೂಕಜ್ಜಿ ಬಯಲಿಗೆಳೆಯುತ್ತಾಳೆ. ಬೂಟಾಟಿಕೆ-ಡಂಬಾಚಾರಗಳನ್ನು ಸಹಿಸುವುದಿಲ್ಲ. ಸಭ್ಯನೆಂದು ನಟಿಸುತ್ತ ಜನರನ್ನು ಮರಳುಮಾಡುವ ಜನಾರ್ದನ ಹಲವಾರು ಹೆಣ್ಣುಗಳೊಡನೆ ಇಟ್ಟುಕೊಂಡ ಅನೈತಿಕ ಸಂಬಂಧಗಳ ಬಗ್ಗೆ, ಹಿಂಡುಗಾನಮ್ಮನ ಸಮಾರಾಧನೆ ಎಂಬ ನೆಪದಲ್ಲಿ ತಾನು ಕೊಡುಗೈದೊರೆ ಅನಿಸಿಕೊಳ್ಳಬೇಕೆಂಬ ಅಹಂಕಾರದಿಂದ ಮೆರೆಯುವ ಮಂಜುನಾಥರ ಕಪಟತನವನ್ನು ಮೂಕಜ್ಜಿ ಬಯಲಿಗೆಳೆಯುತ್ತಾಳೆ. ಸುಬ್ರಾಯನ ತಮ್ಮ ನಾರಾಯಣನ ಜೊತೆಯಲ್ಲಿ ಬಂದ ಬ್ರಹ್ಮಚಾರಿ ಎಂದು ಸಮಾಜಕ್ಕೆ ಪೋಸು ಕೊಟ್ಟು, ಅಧ್ಯಾತ್ಮದಲ್ಲಿ ಅತೀವ ಆಸಕ್ತಿ ತಳೆದವನಂತೆ ಭಗವದ್ಗೀತೆಯ ಬಗೆಗಿನ ವಿಚಾರಗಳನ್ನು ಮೂಕಜ್ಜಿಯಲ್ಲಿ ಚರ್ಚಿಸುವ ಅನಂತ ರಾವ್ ಮೂಕಜ್ಜಿಯ ಬಗೆಗೆ ತಾತ್ಸಾರದಿಂದ ಕಂಡಾಗ ಗಂಡುಹೆಣ್ಣುಗಳ ಸಂಸಾರದ ಬಗೆಗೆ ಅಸಹ್ಯದ ಮಾತುಗಳನ್ನು ಆಡಿದಾಗ ಅವನು ಜೊತೆಯಲ್ಲಿ ಕರೆದುಕೊಂಡು ಬಂದ ಶಿವಮೊಗ್ಗದ ಮಾಣಿ ರಾಮದಾಸನೊಡನೆ ಹೊಂದಿದ ಸಲಿಂಗರತಿಯ ಸಂಬಂಧವನ್ನು ಬಯಲಿಗೆಳೆದು ಅವನ ಅಹಂಕಾರವನ್ನು ಮುರಿಯುತ್ತಾಳೆ: "ಈ ಸಂಸಾರದ ಹಾಗೆ, ಹೀಗೆ, ಹೆಣ್ಣುಗಂಡು ಅಸಹ್ಯ ಅಂತ ನೀನು ತಿಳಿದುಕೊಂಡಿದ್ದೀಯ. ಹಾಗೆ ತಿಳಿದುಕೊಂಡವರು ಹಲವರುಂಟು. ಹಿಂದಿನವರೂ ತಿಳಿದುಕೊಂಡಿದ್ದರು. ಅದೇ ನಿಜವೆಂದು ನಂಬಿ, ನಾವೂ ಹಾಗೇ ತಿಳಿದುಕೊಳ್ಳುತ್ತೇವೆ. ಆದರೆ ಮಾತ್ರ ಅವರಲ್ಲಿ ಒಂದು ಪ್ರಾಮಾಣಿಕತನ ಇರಬೇಕು. ನಂಬಿದ್ದನ್ನು ತಿಳಿದುಕೊಂಡು, ಅದರಂತೆ ಬಾಳುವಂಥ ಬುದ್ಧಿ ಇರಬೇಕು. ಆ ಬುದ್ಧಿಯೇ ಇಲ್ಲದೆ ಬರಿದೆ ಮಾತಾಡಿದರೆ ಏನು ಚಂದ? ನಿನಗೆ ಹೆಣ್ಣು ಅಸಹ್ಯ ಎಂತ ಕಾಣಿಸಬಹುದು. ಅದು ಬೇಡವಾದರೆ ಬಿಡು. ಆದರೆ ಹೆಣ್ಣಿನೊಡನೆ ಆಡುವ ಆಟವನ್ನು ಗಂಡಿನೊಡನೆ ಆಡುವವರಿಗೆ ಅಷ್ಟೆಲ್ಲ ಅಧಿಕಪ್ರಸಂಗ ಯಾತಕ್ಕೆ ಅಂತ ಕಾಣಿಸುತ್ತದೆ ನನಗೆ. ಈ ಅಜ್ಜಿ ಕುರುಡಿಯೇನಲ್ಲ. ಅವಳಿಗೆ ಹೊರಗಣ್ಣು ಕಾಣಿಸುತ್ತದೆ, ಒಳಗಣ್ಣಂತೂ ಬಲ್ಲ. ಸೂಕ್ಷ್ಮ ಮತ್ತು ಏನೇನೋ ಹೇಳುತ್ತದೆ. ಶಿವಮೊಗ್ಗೆಯಿಂದ ಒಂದು ಮಾಣಿಯನ್ನು ಇಲ್ಲಿಯತನಕವೂ ಕರೆದುಕೊಂಡು ಬಂದ ನೀನು! ಇಷ್ಟೆಲ್ಲ ಕುಂಬಳಕಾಯಿ

ಮಾತನಾಡುತ್ತ ಯಾವ ದೇವರನ್ನು ಒಲಿಸಲಿಕ್ಕೆ ಹೊರಟಿದ್ದಿಯೋ ಕಾಣೆ..... ನಿನ್ನ ನಡತೆಯನ್ನು ಸರಿಮಾಡಿಕೊಂಡ ಮೇಲೆ ಮತ್ತೆಲ್ಲ ಮಾತು......" (ಅದೇ ಪು: ೨೮೦). ಈ ರೀತಿಯಾಗಿ ಅನಂತರಾಯನ ಒಳಗುಟ್ಟನ್ನು ತನ್ನ ಒಳಗಣ್ಣಿನಿಂದಲೇ ಕಂಡ ಮೂಕಜ್ಜಿ ಅನಂತರಾಯ ಹಾಗೂ ರಾಮದಾಸ್ ತಲೆ ತಗ್ಗುವಂತೆ ಮಾಡುತ್ತಾಳೆ.

'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿ ಕಾರಂತರು ಹೊಸತನವನ್ನು ಮೆರೆದಿದ್ದಾರೆ. ವಿಶೇಷವಾಗಿ ಈ ಕೃತಿಯಲ್ಲಿ ಸಾಂಸ್ಕೃತಿಕವಾದ ಚಿಂತನೆಯನ್ನೇ ಮುಖ್ಯವಾಗಿ ಆಧಾರವಾಗಿಟ್ಟುಕೊಂಡಿರುವುದರಿಂದ ಕಾದಂಬರಿಯಲ್ಲಿ ಹೊಸತನ ಎದ್ದು ಕಾಣುತ್ತಿದೆ ಎಂಬ ಅಭಿಪ್ರಾಯವಿದೆ. "......ಸಾಂಸ್ಕೃತಿಕ ಪರಂಪರೆಯೊಂದನ್ನು ಕುರಿತ ಚಿಂತನೆಯೇ 'ಮೂಕಜ್ಜಿಯ ಕನಸುಗಳು' ಕೃತಿಯ ಎದ್ದುಕಾಣುವ ಹೊಸತನಕ್ಕೆ ಕಾರಣವಾಗಿದೆ (ವಿವಿಧ ಲೇಖಕರು; ೧೯೯೨; ಪು:೧). ಕಾರಂತರು ತಮ್ಮ ಕಾದಂಬರಿಗಳಲ್ಲಿ ಅನೇಕ ಮುದುಕಿಯರ ಪಾತ್ರವನ್ನು ಚಿತ್ರಿಸಿದರೂ 'ಮೂಕಜ್ಜಿಯ ಪಾತ್ರ ಅವರಿಂದ ಚಿತ್ರಿತವಾದ ಉಳಿದೆಲ್ಲ ಮುದುಕಿಯರಿಗಿಂತ ಭಿನ್ನವಾಗಿ ನಿಲ್ಲುತ್ತದೆ, ಮಾತ್ರವಲ್ಲ ಇದು ಹೊಸತನದಿಂದ ಕೂಡಿದ ಪಾತ್ರವಾಗಿದೆ. ಅವರ ಸಾಲಿನಲ್ಲಿ ನಿಲ್ಲುವ ಮೂಕಜ್ಜಿಯು ಹೊಸಬಗೆಯವಳು. ನಿತ್ಯದ ಬದುಕಿನ ಐಂದ್ರಿಯಿಕ ಅನುಭವಗಳನ್ನು ಪಡೆಯುತ್ತಲೇ ಅದರ ಮೂಲಕವೇ ಹೊಸದೊಂದು ಜಗತ್ತನ್ನು ಪರಿಚಯಿಸುತ್ತಾಳೆ. ಆಕೆ ಈಗ ಆಗುತ್ತಿರುವುದಷ್ಟೇ ಅಲ್ಲ, ಹಿಂದೆ ಆಗಿದ್ದನ್ನೂ ಮುಂದೆ ಆಗುವುದನ್ನೂ ನೋಡಬಲ್ಲವಳಾಗಿದ್ದಾಳೆ. ವಾಸ್ತವದ ನೆಲೆಯಲ್ಲಿ ನಿಂತ ಓದುಗನಿಗೆ ಮೂಕಜ್ಜಿ ಮನುಷ್ಯನ ಅನ್ವೇಷಕಪ್ರವೃತ್ತಿಯ ಮೂರ್ತರೂಪವಾಗಿದ್ದಾಳೆ. ಕಾದಂಬರಿ ಕೇವಲ ಸಾಂಸ್ಕೃತಿಕ ಹಿನ್ನಲೆಯನ್ನು ಹೊಂದಿರದೇ ಸಾಮಾಜಿಕ, ಚಾರಿತ್ರಿಕವಾಗಿ ಹಾಗೂ ಮನೋವೈಜ್ಞಾನಿಕ ದೃಷ್ಟಿಕೋನದಿಂದ ಮಹತ್ವವೆನಿಸುತ್ತದೆ. 'ಮೂಕಜ್ಜಿಯ ಕನಸುಗಳು'ಗೆ ವಿವಿಧ ಆಯಾಮಗಳಿರುವುದನ್ನು ವಿಮರ್ಶಕರನೇಕರು ಗುರುತಿಸಿದ್ದಾರೆ. "ಅವರವರ ಆಸಕ್ತಿ, ಅಭಿರುಚಿಗಳಿಗನುಸಾರವಾಗಿ ಸಾಮಾಜಿಕ ಹಿನ್ನೆಲೆಯಲ್ಲಿ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ, ಚಾರಿತ್ರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದಾದ ಈ ಕೃತಿಯಲ್ಲಿ ಕೆಲವು ಮೂಲಭೂತ ಮನೋವೈಜ್ಞಾನಿಕ ಸತ್ಯಾಂಶಗಳು ಅಡಕವಾಗಿರುವುದನ್ನು ಗಮನಿಸಬಹುದು" (ಅದೇ ಪು. ೫).

ಕಾದಂಬರಿಕಾರರಾಗಿ ಕಾರಂತರು ಈ ಕೃತಿಯಲ್ಲಿ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಇತರ ಕಾದಂಬರಿಕಾರರಿಗಿಂತ ವಿಶಿಷ್ಟವಾದ 'ತಂತ್ರ'ವನ್ನು ಬಳಸಿ ಈ ಕಾದಂಬರಿ ರಚಿತವಾಗಿರುವುದನ್ನು ಕಾಣಬಹುದಾಗಿದೆ: "......ಈ ಕಾದಂಬರಿ ಓದುತ್ತಿದ್ದಂತೆ ನನ್ನ

ಮನಸ್ಸಿನಲ್ಲಿ ಕಾರಂತರ ವಿಶಿಷ್ಟ 'ತಂತ್ರ'ದ ಬಗ್ಗೆ ಕೆಲವು ಅನಿಸಿಕೆಗಳು ಮೂಡಿಬಂದವು. ಅಶ್ವತ್ಥಕಟ್ಟೆ, ಮೂಕಜ್ಜಿ, ಆಕೆಯ ಮೊಮ್ಮಗ ಸುಬ್ರಾಯ ಮತ್ತು ಮೂಕಜ್ಜಿಯ ಕನಸಿನಿಂದ ವ್ಯಕ್ತವಾದ ವಿಚಾರಸರಣಿಗಳು –ಇವೆಲ್ಲವನ್ನು ಒಂದಕ್ಕೊಂದು ಕೊಂಡಿಯಂತೆ ಜೋಡಿಸಿ ಕಾದಂಬರಿಯು ಮುಂದೆ ಸಾಗುವಂತೆ ಮಾಡಿದಂತಿದೆ. ಮೂಕಜ್ಜಿ ಅಶ್ವತ್ಥಕಟ್ಟೆಯ ಮೇಲೆ ಕುಳಿತಿರದಿದ್ದರೆ ಅಥವಾ ಸುಬ್ರಾಯನ ಕೆದಕುವ ಪ್ರಶ್ನೆಗಳು ಇಲ್ಲದಿದ್ದಲ್ಲಿ ಕತೆಯು ಮುಂದೆ ಓಡುತ್ತದೆಯೋ ಎಂಬ ಅನುಮಾನ ಬರುತ್ತದೆ. ಹೀಗೆ ಅಶ್ವತ್ಥಕಟ್ಟೆಯೇ ಈ ಮೂಕಜ್ಜಿಯ ಸಭಾಂಗಣ; ಸುಬ್ರಾಯನೇ ಆಕೆಯ ಪ್ರೇರಕ ಸಭಿಕ ಮತ್ತು ಬದುಕಿನ ಹಲವಾರು ಸಮಸ್ಯೆಗಳೇ 'ಮುದುಕಿ'ಯ ವಿಚಾರಕ್ಷೇತ್ರ. ಈ ರೀತಿ ಕೊಂಡಿಯಿಂದ ಒಂದಕ್ಕೊಂದು ಜೋಡಣೆ ಮಾಡಿ ಕಾರಂತರು ತಮ್ಮ ವಿಶಿಷ್ಟತೆಯನ್ನು ಪ್ರದರ್ಶಿಸಿದ್ದಾರೆನ್ನಬಹುದು" (ನಾಗ ಐತಾಳ (ಸಂ.); ೨೦೦೦; ಪು: ೧೯೦).

ಮೂಕಜ್ಜಿಯ ಪಾತ್ರವನ್ನು ಕೇಂದ್ರವಾಗಿಟ್ಟುಕೊಳ್ಳದೇ ಕಾದಂಬರಿಯನ್ನು ಓದಿದಾಗ ಮಾತ್ರ ಕಾದಂಬರಿಯ ಕೇಂದ್ರ ನೆಲೆಗಳನ್ನು ಹುಡುಕುವುದು ಹಾಗೂ ಈ ಮೂಲಕ ಕಾದಂಬರಿಯ ಸಾರ್ಥಕತೆಯನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಇದೊಂದು ಮನಸ್ಸಿಗೆ ಅಂಟಿದ ಸಂಸ್ಕೃತಿಯ ಕುರಿತಾದ ಜಿಜ್ಞಾಸೆಯನ್ನು ವ್ಯಕ್ತಪಡಿಸುವ ಪ್ರಕ್ರಿಯೆಯಾಗಿಯೂ ಕಾದಂಬರಿ ಗೋಚರಿಸುತ್ತದೆ. "......ಇಡೀ ಕಾದಂಬರಿ ಸುಬ್ರಾಯ ತನ್ನ ಮನಸ್ಸಿಗೆ ಅಂಟಿದ ಸಂಸ್ಕೃತಿಯ ಹೊಟ್ಟನ್ನು ಕಳಚಿಕೊಳ್ಳುವ ಪ್ರಕ್ರಿಯೆಯೇ ಆಗಿದೆ. ಸುಬ್ರಾಯನ ಪ್ರಜ್ಞೆಯ ವಿಕಾಸವೇ ಕಾದಂಬರಿಯ ಕೇಂದ್ರವಸ್ತು. ಅವನು ತನ್ನ ಜಿಜ್ಞಾಸೆಗಳಿಗೆ ಮೂಕಜ್ಜಿಯನ್ನು ಸಾಕ್ಷಿಪ್ರಜ್ಞೆ ಮಾಡಿಕೊಳ್ಳುತ್ತಾನಲ್ಲದೆ ಮೂಕಜ್ಜಿ ಕಾದಂಬರಿಯ ಕೇಂದ್ರಪಾತ್ರವಾಗುವುದಿಲ್ಲ. ಅವಳ ವೈಚಾರಿಕತೆಗೆ ತಬ್ಬಿಬ್ಬಾಗಿ ಅವಳನ್ನು ಕಾದಂಬರಿಯ ಕೇಂದ್ರ ಆಕರ್ಷಣೆಯಾಗಿ ಪರಿಭಾವಿಸುವ ಓದು ಕಾದಂಬರಿಗೆ ಪೂರ್ಣ ನ್ಯಾಯ ಸಲ್ಲಿಸಲಾರದು. ಪರಂಪರೆ ಮತ್ತು ಆಧುನಿಕತೆಗಳ ಘರ್ಷಣೆಯಲ್ಲಿ ವೈಯಕ್ತಿಕ ಸ್ಫೂರ್ತಿನಿಂದ ಆಯ್ಕೆ ಮಾಡಿಕೊಳ್ಳುತ್ತಾ ಅನುಭವಗಳಿಗೆ ಒಡ್ಡಿಕೊಂಡು ಮಾಗುವ, ಪ್ರಜ್ಞೆಯನ್ನು ವಿಸ್ತರಿಸಿಕೊಳ್ಳುವ ಹಲವು ಪಾತ್ರಗಳ ಒಂದು ಭವ್ಯ ವಿನ್ಯಾಸವೇ ಒಟ್ಟಾರೆ ಕಾರಂತರ ಕಾದಂಬರಿ ಪ್ರಪಂಚದಲ್ಲಿ ಕಾಣುತ್ತದೆ....." (ಅಶೋಕ ಟಿ.ಪಿ., ೧೯೯೬, ಪು. ೧೫೨). ಸಾಂಸ್ಕೃತಿಕವಾದ ವಿಕಸನವಾಗುತ್ತ ಹೋದ ಹಾಗೆ ಕಾಲಗಳ ಮೇಲೆ ಒತ್ತಡ ಬಿದ್ದು ಅನೇಕ ಸಂಘರ್ಷಗಳು ಹುಟ್ಟಿಕೊಂಡವು. ಇದರಿಂದ ಮಾನವಕುಲಗಳು ಯಾತನೆಯನ್ನು ಅನುಭವಿಸುವ ಸಂದರ್ಭ ಎದುರಾಯಿತು. ಇದೇ ಮಾನವನ ದುಃಖಕ್ಕೆ ಮೂಲವಾಯಿತು. ಈ ವಿಚಾರವನ್ನು ಪ್ರಸ್ತುತಪಡಿಸುವುದೇ

ಕಾದಂಬರಿಯ ಉದ್ದೇಶವಾಗಿರುವುದನ್ನು ಕಾಣಬಹುದಾಗಿದೆ. 'ಮೂಕಜ್ಜಿಯ ಕನಸು'ಗಳಿಂದಾಗಿ ಮಾನವ ಸಾಂಸ್ಕೃತಿಕವಾಗಿ ವಿಕಸನಗೊಳ್ಳುತ್ತ ನಡೆದಂತೆ ಆಯಾ ಕಾಲಗಳ ಮೇಲೆ ಬಿದ್ದ ಒತ್ತಡಗಳು, ಅವುಗಳಿಂದಾಗಿ ಹುಟ್ಟಿಕೊಂಡ ಸಂಘರ್ಷಗಳು, ಮಾನವಕುಲಗಳು ತಮ್ಮ ಸಂಕ್ರಮಣಾವಸ್ಥೆಯಲ್ಲಿರುವಾಗ ಅನುಭವಿಸಿದ ಯಾತನೆಗಳು ಹಾಗೂ ಎದುರಿಸಿದ ಸಮಸ್ಯೆಗಳ ಅರಿವು ನಮ್ಮಲ್ಲಿ ಮೂಡುತ್ತದೆ. ಅಂದ ಮಾತ್ರಕ್ಕೆ ಸಂಸ್ಕೃತಿಯಲ್ಲಿ ನಡೆದ ಅಲ್ಲೋಲಕಲ್ಲೋಲಗಳನ್ನು ಸಂಕಲಿತಗೊಳಿಸುವುದು ಈ ಕಾದಂಬರಿಯ ಗುರಿಯಾಗಿದೆ ಎಂದಲ್ಲ. 'ಹೇಗಿದೆ', 'ಹೇಗಿರಬೇಕು' ಎಂಬ ಸಂಗತಿಗಳ ಜೊತೆಗೆ ಮಾನವನ ದುಃಖದ ಮೂಲ ಯಾವುದು? ಎಂಬುದರ ಮೇಲೆ ಬೆಳಕನ್ನು ಬೀರುವುದು ಈ ಕಾದಂಬರಿಯ ಗುರಿಯಾಗಿದೆ" (ವಿರೂಪಾಕ್ಷ ಕುಲಕರ್ಣಿ; ೧೯೯೦; ಪು:೮೭).

ಕಾದಂಬರಿಯ ಸಾರ್ಥಕತೆಯನ್ನು, ಯಶಸ್ಸನ್ನು ಗುರುತಿಸಿರುವ ಹಾಗೆಯೇ ಕಾದಂಬರಿಯಲ್ಲಿನ ನ್ಯೂನತೆಗಳನ್ನು ಎತ್ತಿಹಿಡಿದವರು ಇದ್ದಾರೆ. ಕಾದಂಬರಿಯಲ್ಲಿ ಜೀವನಾನುಭವದ ಕೊರತೆಯನ್ನು ಕಾಣುತ್ತೇವೆ. ಹೀಗಾಗಿಯೇ ಇದೊಂದು ವೈಚಾರಿಕ ಥೀಸಿಸ್ ಆಗಿದೆ ಎಂದು ಡಿ.ಆರ್. ನಾಗರಾಜ ಅಭಿಪ್ರಾಯಪಡುತ್ತಾರೆ. ಎಸ್.ಎಲ್. ಬೈರಪ್ಪನವರ ಪ್ರಕಾರ ಕಾದಂಬರಿಯು ಬಡಕಲು ಹಂದರವಾಗಿದೆ: "ಮೂಕಜ್ಜಿಯ ಅತೀಂದ್ರಿಯಶಕ್ತಿಯನ್ನು ಕೇವಲ ಒಂದು ಇತಿಹಾಸ ಪುಸ್ತಕದ ಬದಲಿಗೆ ಉಪಯೋಗಿಸಿಕೊಳ್ಳುವ ಕಾರಂತರಿಗೆ ಉಳಿದ ಸಾಧ್ಯತೆಗಳು ಕಾಣುವುದೇ ಇಲ್ಲವಾಗಿ ಅವರ ಈ ಕಾದಂಬರಿಯು ಬಡಕಲು ಹಂದರವಾಗಿದೆ." ಆದರೆ ಶಾಂತಿನಾಥ ದೇಸಾಯಿಯವರು ಕಾದಂಬರಿಯ ಯಶಸ್ಸನ್ನು ಕೊಂಡಾಡಿದ್ದಾರೆ. 'ಮೂಕಜ್ಜಿಯ ಕನಸುಗಳು'ನ್ನು ಜಾಗತಿಕ ಮಟ್ಟದ ಕಾದಂಬರಿಕಾರರಾದ ದೋಸ್ತೋವಸ್ಕಿಯ 'ಬ್ರದರ್ಸ್‌ಕರಮಯೋವ್'ನೊಂದಿಗೆ ಹೋಲಿಸಿ 'ಮೂಕಜ್ಜಿಯ ಕನಸುಗಳು' ಭಾರತೀಯ ಪ್ರಬಂಧ-ಕಾದಂಬರಿಗಳಲ್ಲಿ ಅನನ್ಯವಾದುದು ಎಂದಿದ್ದಾರೆ. ವಿ.ಕೃ. ಗೋಕಾಕ್ ಕೂಡ ಕಾದಂಬರಿಯನ್ನು ತಾತ್ವಿಕ ಕಾದಂಬರಿಯನ್ನಾಗಿ ಪರಿಗಣಿಸಿದ್ದಾರೆ. "ವೈಚಾರಿಕತೆಯೇ ಪ್ರಧಾನ ಎಂಬ ಅರ್ಥದಲ್ಲಿ ಇದು ತಾತ್ವಿಕ ಕಾದಂಬರಿ. ಅಲ್ಡಸ್ ಹಕ್ಲಿಯ ಮಾತಿನಲ್ಲಿ ಹೇಳುವುದಾದರೆ ಇದು ಜಿಜ್ಞಾಸು ಕೃತಿ" (ಉಪೇಂದ್ರ ಸೋಮಯಾಜಿ ಸಿ.; ೨೦೦೨; ಪು:೫೨-೫೩).

ಕಾರಂತರೇ ತಮ್ಮ ಮುನ್ನುಡಿಯಲ್ಲಿಯೇ ಹೇಳಿರುವಂತೆ ನಾಯಕ-ನಾಯಿಕೆಯರಿಲ್ಲದೇ ರಚಿತವಾದ ವಿಶಿಷ್ಟತೆಯಿಂದ ಕೂಡಿದ ಕಾದಂಬರಿ ಇದಾಗಿದೆ. ಹೀಗಾಗಿಯೇ ಇತರ

ಕಾದಂಬರಿಗಳಿಗಿಂತ ಈ ಕಾದಂಬರಿ ಭಿನ್ನವಾಗಿ ಮೂಡಿಬಂದಿದೆ.

**೬. ಮೈಮನಗಳ ಸುಳಿಯಲ್ಲಿ**

೧೯೭೦ರಲ್ಲಿ ಕಾರಂತರು ಸಾಹಿತ್ಯಲೋಕಕ್ಕೆ ಅರ್ಪಿಸಿದ ಕೃತಿ ಇದಾಗಿದ್ದು ಕಾರಂತರ ಪ್ರಮುಖ ಕಾದಂಬರಿಗಳಲ್ಲಿ ಒಂದು ಎನಿಸಿಕೊಂಡಿದೆ. ಲೈಂಗಿಕತೆಯನ್ನು ಕುರಿತಾದ ಒಂದು ಸರಳ ಕಾದಂಬರಿಯಾಗಿ ಇದು ಮೇಲ್ನೋಟಕ್ಕೆ ಗೋಚರವಾದರೂ ನಾಲ್ಕು ತಲೆಮಾರುಗಳಲ್ಲಿ ಬದಲಾವಣೆಗೆ ಒಳಪಟ್ಟಿರುವ ಸಾಮಾಜಿಕ ಮೌಲ್ಯಗಳು, ಜೀವನದ ಶೈಲಿ ಬದುಕಿನ ಬದಲಾದ ಸ್ವರೂಪಗಳನ್ನು ಈ ಕಾದಂಬರಿ ಓದುಗರಿಗೆ ಪರಿಚಯಿಸುತ್ತದೆ. ಸ್ವತಃ ಕಾರಂತರೇ ಈ ಕಾದಂಬರಿಯ ರಚನೆಯ ಹಿನ್ನಲೆಯನ್ನು ತಮ್ಮ 'ಕೇವಲ ಮನುಷ್ಯರು' ಕಾದಂಬರಿಯ ಮುನ್ನುಡಿಯಲ್ಲಿ ಸ್ಪಷ್ಟಪಡಿಸಿದ್ದಾರೆ: "ನನ್ನ ಹಿಂದಿನ ಕಾದಂಬರಿ 'ಮೈ ಮನಗಳ ಸುಳಿಯಲ್ಲಿ' ಲೈಂಗಿಕ ಜೀವನದ ನಾಲ್ಕು ಮುಖಗಳನ್ನು ತೋರಿಸುವ ಸಲುವಾಗಿ ಬರೆದುದು. ಆದರೆ ಕಾದಂಬರಿ ಕೇವಲ ಲೈಂಗಿಕ ಜೀವನದ ನಾಲ್ಕು ಮುಖಗಳನ್ನು ಪರಿಚಯಿಸುವುದಕ್ಕಷ್ಟೇ ಸೀಮಿತವಾಗುವುದಿಲ್ಲ. ಲೈಂಗಿಕತೆಯ ನಾಲ್ಕು ಮುಖಗಳನ್ನು ಪರಿಚಯಿಸುತ್ತಲೇ ಆಯಾ ಹಂತದ ಸಾಮಾಜಿಕ ಜನಜೀವನದ, ಜೀವನ ಮೌಲ್ಯಗಳನ್ನು ಕಾದಂಬರಿಕಾರರು ವಿವರಿಸುತ್ತ ಹೋಗುವುದರಿಂದ ನಾಲ್ಕು ತಲೆಮಾರುಗಳಲ್ಲಿ ಸಮಾಜದಲ್ಲಿ ಆದ ಬದಲಾವಣೆಗಳನ್ನು ವಿವರಿಸುವ ಕಾದಂಬರಿಯೂ ಇದಾಗಿದೆ. "ಮೇಲುನೊಟಕ್ಕೆ 'ಮೈಮನಗಳ ಸುಳಿಯಲ್ಲಿ' ಲೈಂಗಿಕತೆಯನ್ನು ಕುರಿತಾದ ಒಂದು ಸರಳ ಕೃತಿ. ನಾಕು ತಲೆಮಾರುಗಳ ಚರಿತ್ರೆಯನ್ನುಳ್ಳ ಈ ಕೃತಿಯ ಕಾಲದ ಹರಹು ಸುಮಾರು 19ನೆಯ ಶತಮಾನದ ಮಧ್ಯಭಾಗದಿಂದ 20ನೆಯ ಶತಮಾನದ ಮಧ್ಯದವರೆಗೆ –ಎಂದರೆ ಸಾಧಾರಣವಾಗಿ ಒಂದುನೂರು ವರ್ಷಗಳ ಅವಧಿಯನ್ನು ಆವರಿಸಿಕೊಳ್ಳುತ್ತದೆ. ಕೃತಿಯ ಮುಖ್ಯ ಪಾತ್ರವಾದ ಮಂಜುಳೆಯ ತಾಯಿ ಭವಾನಿ, ಮಂಜುಳೆ, ಅವಳ ಸಾಕುಮಗಳು ಶಾರಿ ಮತ್ತು ಶಾರಿಯ ಮಗಳು ಚಂದ್ರಿ –ಈ ನಾಲ್ಕು ವ್ಯಕ್ತಿಗಳು ಲೈಂಗಿಕತೆಯ ಕ್ಷೇತ್ರದಲ್ಲೇ ಮೈಮನಗಳ ಅನ್ಯೋನ್ಯಕ್ಕಾಗಿ ನಡೆಸುವ ಶೋಧ, ಈ ಶೋಧದ ಸುಖದುಃಖಗಳು, ಫಲಾಫಲಗಳು ಇವುಗಳನ್ನು ಒಂದು ನೆಲೆಯಲ್ಲಿ ಚಿತ್ರಿಸಿದರೆ, ಮತ್ತೊಂದು ನೆಲೆಯಲ್ಲಿ ಈ ನಾಲ್ಕು ತಲೆಮಾರುಗಳ ಕಾಲದಲ್ಲಿ ಬದಲಾದ ಹಾಗೂ ಬದಲಾಗುತ್ತಿರುವ ಜೀವನಮೌಲ್ಯಗಳನ್ನು ಹಾಗೂ ಸಾಮಾಜಿಕ ವ್ಯವಸ್ಥೆಗಳನ್ನು ಗುರುತಿಸುತ್ತದೆ ಮತ್ತು ತನ್ನ ತಾಯಿ, ಮಗಳು, ಮೊಮ್ಮಗಳ ಹೋಲಿಕೆಯಲ್ಲೆ ಮಂಜುಳೆಯ ಶೋಧ ಕೆಲವೊಮ್ಮೆ ಸಫಲವಾಗುತ್ತದೆ. ಹಾಗೂ ಅವಳ ಮೌಲ್ಯಗಳು ಇತರರ ಮೌಲ್ಯಗಳಿಗಿಂತ ಹೆಚ್ಚು ಗಟ್ಟಿ

ಹಾಗೂ ಸಾಚಾ ಆದವುಗಳು ಎಂದೆನಿಸುತ್ತದೆ, ಹೌದ?" (ವಿವಿಧ ಲೇಖಕರು; ೧೯೯೩; ೫೩೩).

ವೇಶ್ಯಾವೃತ್ತಿಯ ಸುತ್ತ ಹೆಣೆದ ಕಾದಂಬರಿ ಇದಾಗಿದ್ದು ಅವರ ಬದುಕಿನ ವಿವಿಧ ಮಜಲುಗಳನ್ನು ಬಿಡಿಸಿ ತೋರಿಸುತ್ತಾ ಹೋಗುತ್ತದೆ. ಅವರ ಬದುಕಿನ ಈ ಮಜಲುಗಳು ಬಿತ್ತರಗೊಳ್ಳುವುದು ಅಂದಿನ ದಕ್ಷಿಣ ಕನ್ನಡ ಜಿಲ್ಲೆಯ ಬಸರೂರು–ಕುಂದಾಪುರಗಳ ಪರಿಸರದಲ್ಲಿ. ಕಥೆ ಅಂಪಾರು, ಆನಗಳ್ಳಿ, ತೀರ್ಥಹಳ್ಳಿ, ಉಡುಪಿ, ಕಳೂರುಕಟ್ಟೆ ಹಾಗೂ ಮೆಕ್ಕೆ ಮನೆಗಳನ್ನು ಸುತ್ತುತ್ತಿದೆ. ಕಾದಂಬರಿಯಲ್ಲಿ ಪ್ರಧಾನವಾಗಿ ಮಂಜುಳೆಯ ಪಾತ್ರ ನಮ್ಮನ್ನು ಆವರಿಸಿಬಿಡುತ್ತದೆ. ಕಾದಂಬರಿಯುದ್ದಕ್ಕೂ ತನ್ನ ಆತ್ಮಕತೆಯ ಮುಖೇನವಾಗಿಯೇ ಅನಾವರಣಗೊಳ್ಳುತ್ತ ಹೋಗುವ ಈ ಪಾತ್ರ ಹಲವು ರೀತಿಯಲ್ಲಿ ಓದುಗನನ್ನು ಆಕರ್ಷಿಸುತ್ತದೆ. ಮಂಜುಳೆಯ ಬದುಕಿನಲ್ಲಿ ಬಂದು ಹೋದ ಪ್ರಿಯಕರರಲ್ಲಿ ಏಳು ಜನ ಮುಖ್ಯವಾಗುತ್ತಾರೆ. ಕಂಡಲೂರು ಪೈಗಳು ಹಾಗೂ ನಂಜಪ್ಪ ಮಂಜುಳೆಯ ಬದುಕಿನಲ್ಲಿ ಕಹಿಯಾದ ಅನುಭವವನ್ನೇ ನೀಡುತ್ತಾರೆ. ಅವಳನ್ನು ಉಪಭೋಗದ ವಸ್ತುವನ್ನಾಗಿ ಪರಿಗಣಿಸಿದ ಅವರನ್ನು ಮಂಜುಳೆ ಪಶುಸಮಾನದ ವರ್ತನೆಗೆ ಹೋಲಿಸುತ್ತಾಳೆ. ಮೈ ಮತ್ತು ಮನಸ್ಸುಗಳ ಮಧುರವಾದ ಸಂಬಂಧದ ಅರಿವಿಲ್ಲದಂತೆ ಅವರು ವರ್ತಿಸುತ್ತಾರೆ. ಅವಳ ಬದುಕಿನಲ್ಲಿ ಬರುವ ಉಳ್ಳೂರರು ಹಾಗೂ ಲಕ್ಷ್ಮಣತೀರ್ಥರು ಅವಳಿಗೆ ಸಾಂತ್ವನವನ್ನು, ಸಮಾಧಾನವನ್ನು ತಂದುಕೊಟ್ಟವರು. ಮೈಮನಸುಗಳೆರಡೂ ಬೆರೆತ ಅನುಭವ ಆಕೆಗೆ ಅವರ ಸಾಮೀಪ್ಯದಲ್ಲಿ. ಉಳ್ಳೂರರ ಮೇಲೆ ಅವಳಿಗೆ ಅತೀವವಾದ ಪ್ರೀತಿ, ಗೌರವ. ಉಳ್ಳೂರರು ತಮ್ಮ ಪುರುಷತ್ವವನ್ನು ಕಳೆದುಕೊಳ್ಳುವ ಕಾಲಕ್ಕೆ ಅವರಿಗೆ ಹತ್ತಿರವಾಗುವ ಮಂಜುಳೆಗೆ ಸಂತೃಪ್ತಿಪಡಿಸಲಾರದ ಕೊರಗು ಉಳ್ಳೂರರಿಗೆ ಒಳಗೊಳಗೇ ಕಾಡಿದರೂ ತಾವೂ 'ಬೃಹನ್ನಳೆ'ಯಾದರೂ ತಮ್ಮ ರಸಿಕತನದಿಂದ ಮಂಜುಳೆಯ ಮನಸ್ಸನ್ನು ಮುದಗೊಳಿಸುವಲ್ಲಿ ಯಶಸ್ವಿಯಾಗುತ್ತಾರೆ. ತನ್ನ ಮೈಗಿಂತ ಮನಸ್ಸಿಗೆ ಹತ್ತಿರದಲ್ಲಿ ಸ್ಪಂದಿಸಿದ ಉಳ್ಳರರ ಬಗ್ಗೆ ಮಂಜುಳೆಗೆ ಅತೀವ ಪ್ರೀತಿ ಹುಟ್ಟುವುದು ಈ ಕಾರಣದಿಂದಾಗಿಯೇ. ಲಕ್ಷ್ಮಣತೀರ್ಥರ ಪಾತ್ರದ ಮುಖೇನ ಕಾರಂತರು ತಮ್ಮ ವಾಸ್ತವಿಕ ನಿಲುವಿನ ಬಲವಾದ ಪ್ರತಿಪಾದನೆ ಮಾಡಿದ್ದಾರೆ. ನಿಸರ್ಗದತ್ತವಾದ ತಮ್ಮ ಪ್ರೇರಣೆಯನ್ನು ಕಳೆದುಕೊಂಡು ಯಾರೂ ಸುಖಿಯಾಗಿರಲಾರರು ಎಂಬ ಕಾರಂತರ ನಿಲುವು ಈ ಪಾತ್ರದ ಮುಖೇನ ಹೆಚ್ಚು ಸ್ಪಷ್ಟವಾಗುತ್ತದೆ. ಕಟ್ಟುಪಾಡುಗಳಿಂದ ಬಂಧಿತರಾದ ಲಕ್ಷ್ಮಣತೀರ್ಥರು ಮಂಜುಳೆಯೊಂದಿಗೆ ಬೆರೆತು ಸಮಾಧಿ ಸ್ಥಿತಿಯನ್ನು ಅನುಭವಿಸಿ ಧನ್ಯತಾ ಭಾವ ತಾಳುತ್ತಾರೆ. ಮಂಜುಳೆಯು

ಕೂಡ ಕೃತಾರ್ಥತೆಯ ಭಾವವನ್ನು ಅನುಭವಿಸುವುದನ್ನು ಕಾಣಬಹುದಾಗಿದೆ. ನಾಟಕಗಳಲ್ಲಿಯ ಸ್ತ್ರೀಪಾತ್ರಗಳಲ್ಲಿ ಪ್ರೇಕ್ಷಕರ ಮನಸ್ಸನ್ನು ಮರಳುಗೊಳಿಸುವ ಶೀನಪ್ಪನಲ್ಲಿ ಗಂಡಸುತನದ ಕೊರತೆಯನ್ನು ಮಂಜುಳೆ ಗುರುತಿಸುತ್ತಾಳೆ. ಅನಂತರ ಮಂಜುಳೆಯ ಬದುಕಿನಲ್ಲಿ ಬರುವ ವೆಂಕಟು ಗಾನವಿದ್ಯೆಯಲ್ಲಿ ಪ್ರಾವೀಣ್ಯತೆ ಹೊಂದಿದವ, ಕಾಮಕಲೆಯ ಶಾಸ್ತ್ರವನ್ನು ಬಲ್ಲವ. ಮಂಜುಳೆಯ ಗುರು ಬಂಧುವಾದ ಈತನಲ್ಲಿ ಮಂಜುಳೆಗೆ ಮನಸ್ಸು ನೆಟ್ಟಿತಾದರೂ ಅವನೊಂದಿಗೆ ಸ್ಪಂದಿಸುವುದು ಸಾಧ್ಯವಾಗುವುದಿಲ್ಲ. ಏಳನೆಯವನಾಗಿ ಅವಳ ಬದುಕನ್ನು ಪ್ರವೇಶ ಪಡೆದುಕೊಂಡವ ಮೆಕ್ಕಿಮನೆಯ ಸಾಹುಕಾರ. ಅವನು ಕೂಡ ಅವಳಿಗೆ ರತಿಕ್ರೀಡೆಯಲ್ಲಿ ಸಮರಸನಾಗಲಿಲ್ಲ. ಆದರೆ ಮಂಜುಳೆ ತನ್ನ ಗರ್ಭದಲ್ಲಿ ಬೆಳೆಯುವ ಪಿಂಡಕ್ಕೆ ತಂದೆ ನಂಜಪ್ಪನಾಗದೇ ಈತನೇ ಆದರೆ ಒಳ್ಳೆಯದಾಗಿತ್ತು ಎಂದು ಹಂಬಲಿಸುತ್ತಾಳೆ. ಕಾದಂಬರಿಯಲ್ಲಿ ಚಿತ್ರಿತವಾದ ಪಮ್ಮ-ದುಗ್ಗಿಯರ ಆದರ್ಶದಾಂಪತ್ಯ ಕಾರಂತರ ಈ ಜೋಡಿಯ ಸೃಷ್ಟಿ ಮೈಮನಗಳ ಸುಖದ ಪ್ರವೃತ್ತಿಯನ್ನು ಹೊರಸೂಸುವ ದಾಂಪತ್ಯ ಭಾವನೆಯ ಪ್ರತೀಕವಾಗಿದೆ. ಕೀಳುಕುಲದಲ್ಲಿ ಹುಟ್ಟಿ ಭಿಕ್ಷೆ ಬೇಡುತ್ತ ಬದುಕು ನಡೆಸುವ ಇವರ ಬದುಕಿನಲ್ಲಿ ಇರುವ ಅನ್ಯೋನ್ಯತೆಯನ್ನು ಕಂಡು ಮಂಜುಳೆ ಬೆರಗಾಗುತ್ತಾಳೆ.

೧೯೯೨ರಲ್ಲಿ ಕರ್ನಾಟಕ ಸರಕಾರದ 'ಪಂಪಪ್ರಶಸ್ತಿ'ಯನ್ನು ಪಡೆದ ಕೃತಿ ಇದಾಗಿದೆ. ವೇಶ್ಯಾವೃತ್ತಿಯನ್ನು ನಡೆಸುವವರ ಬದುಕನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಪ್ರಯತ್ನಿಸುವ ಸಂದರ್ಭದಲ್ಲಿ ವೇಶ್ಯೆಯರ ಬದುಕು, ಭಾವನೆಗಳ ಗಾಢವಾದ ಪರಿಚಯ ಕಾರಂತರಿಗಾಯಿತು. ಅದರಿಂದ ಜನಿಸಿದ ಈ ಕತೆಯನ್ನು ಎರಡುಬಾರಿ ಬರೆದು, ಸಮರ್ಪಕನೆನಿಸದೆ ಮೂರನೆಯ ಸಲ ಈ ಕಾದಂಬರಿಯಲ್ಲಿರುವಂತೆ ರೂಪುಕೊಟ್ಟರು.

ಕಾದಂಬರಿಯಲ್ಲಿ ಲೈಂಗಿಕತೆಯ ಬದುಕಿನ ನಾಲ್ಕು ಹಂತಗಳನ್ನು ವಿವೇಚಿಸುವುದರೊಂದಿಗೆ ನಮ್ಮ ಭಾರತೀಯ ಸಮಾಜದ ಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ನಗರೀಕರಣ, ಕುಲಕಸುಬುಗಳ ನಾಶ –ಮುಂತಾದ ಪರಿಣಾಮಗಳನ್ನು ಕಾದಂಬರಿ ವಿಶ್ಲೇಷಿಸುತ್ತದೆ: "ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ನಮ್ಮ ಭಾರತೀಯ ಸಮಾಜದಲ್ಲಿ ಸುಮಾರು ಒಂದುನೂರು ವರ್ಷಗಳ ಅವಧಿಯಲ್ಲಿ ಕಂಡುಬಂದ ಆಧುನೀಕರಣದ ಸ್ವರೂಪ–ನಗರೀಕರಣ, ಕುಲಕಸುಬುಗಳ ನಾಶ, ಸಂಸ್ಕೃತದ ಬದಲಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಇತ್ಯಾದಿ ಈ ಕಾದಂಬರಿಯಲ್ಲಿ ಸಮರ್ಥವಾಗಿ ದಾಖಲಾಗಿದೆ" (ಅದೇ ಪು:೬೩).

ಬಸ್ರೂರು ಕಾದಂಬರಿಯ ಕೇಂದ್ರಸ್ಥಾನವಾಗಿದ್ದು ಇದಕ್ಕೆ 'ವಸುಪುರ'ವೆಂಬ ಹೆಸರನ್ನು ಹೊಂದಿತ್ತು. ಈ ಸ್ಥಳಕ್ಕಿರುವ ಐತಿಹಾಸಿಕತೆಗಳನ್ನು, ಪರಂಪರೆಯನ್ನು ಕಾರಂತರು

ವರ್ಗೀಕರಿಸುತ್ತಾರೆ. ಪರಂಪರಾನುಗತವಾಗಿ ವೇಶ್ಯಾವೃತ್ತಿಯನ್ನು ಮುಂದುವರೆಸಿಕೊಂಡು ಬಂದಿರುವ ವಾರಂಗನೆಯರು, ಅವರಿಗೆ ಸಮಾಜದಲ್ಲಿ ಇರುವ ಸ್ಥಾನಮಾನ, ಗೌರವಗಳು, ಅವರಲ್ಲಿರುವ ಕಲಾಪ್ರೌಢಿಮೆ, ಅತ್ಯಂತ ಗುಣಶೀಲರು, ಗೌರವಾನ್ವಿತರೊಂದಿಗೆ ಮಾತ್ರ ಸಂಪರ್ಕವನ್ನು ಬಯಸುವ ಈ ವೇಶ್ಯೆಯರ ಬಗೆಗಿನ ಚಿತ್ರಣ ಕಾದಂಬರಿಯಲ್ಲಿ ಬರುತ್ತದೆ. ಆದರೆ ವಸಾಹತುಶಾಹಿ ಸಂಸ್ಕೃತಿಯ ಆಗಮನದಿಂದಾಗಿ ಇವರ ವೃತ್ತಿ ಕೀಳುಮಟ್ಟಕ್ಕೆ ತಳ್ಳಲ್ಪಟ್ಟ ಚಿತ್ರಣವೂ ಸಿಗುತ್ತದೆ. ಕರಾವಳಿ ಬಂದರುಗಳಲ್ಲಿ ೧೭ನೆಯ ಶತಮಾನದಿಂದ ವಿದೇಶಿಯರಾದ ಬಿಳಿಯ ನಾವಿಕರ ಸುಳಿದಾಟ ಹೆಚ್ಚಾಗಿ ಅವರೊಡನೆ ಹೊಂದಿದ ಸಂಪರ್ಕ 'ಹಸಿದೊಗಲಿನ ವ್ಯಾಪಾರ'ವಾಗಿ ಪರಿಣಮಿಸಿತು. ಕಾದಂಬರಿಯಲ್ಲಿ ಬರುವ ಮೂವರು ವೇಶ್ಯೆಯರು ಮೂರು ಭಿನ್ನ ರೀತಿಯಲ್ಲಿ ಚಿತ್ರಿತರಾಗಿರುವುದನ್ನು ಕಾಣಬಹುದಾಗಿದೆ. ಈ ಮೂಲಕ ಬದುಕಿನ ಬಗೆಗಿನ ದೃಷ್ಟಿಕೋನಗಳು ಭಿನ್ನವಾಗಿರುವುದನ್ನು ಗಮನಿಸಬಹುದು: "ಸಂಸ್ಕೃತ ನಾಟಕಗಳಲ್ಲಿ ಬರುವ ವಸಂತಸೇನೆ ಹಾಗೂ ಇನ್ನಿತರ ಗಣಿಕೆಯರಂತಹ ಪ್ರವೃತ್ತಿಧರ್ಮವುಳ್ಳ ಮಂಜುಳೆ, ಆ ವ್ಯವಸಾಯದ ನಿರ್ದಿಷ್ಟವಾದ ಅವನತಿಯನ್ನು ತೋರಿಸುವ ಮಂಜುಳೆಯ ಸಾಕುಮಗಳಾದ ಶಾರಿ ಹಾಗೂ ಶಾರಿಗೆ ಇಳಿವಯಸ್ಸಿನಲ್ಲಿ ಹುಟ್ಟಿ ಆ ವ್ಯವಸಾಯವನ್ನೇ ತೊರೆದು ಪ್ರತಿಷ್ಠೆಯಿಂದ ಬಾಳಬೇಕೆನ್ನುವ ಚಂದ್ರಿಯರಿಂದಾಗಿ ಕಾಲ, ವ್ಯವಸಾಯ, ವ್ಯಕ್ತಿ ಹಾಗೂ ಪ್ರವೃತ್ತಿಗಳ ಬದಲಾಗುತ್ತಿರುವ ರೂಪಕ್ಕೆ ಇಲ್ಲಿ ಒತ್ತುಕೊಡಲಾಗಿದೆ. ತನ್ನತನವನ್ನು ಉಳಿಸಿಕೊಂಡು ಬಾಳಿದ ಮಂಜುಳೆ, ಅದನ್ನು ಕಳೆದುಕೊಂಡ ಶಾರಿ ಹಾಗೂ ತನ್ನನ್ನು ತಾನೇ ಕಂಡುಕೊಳ್ಳಲು ಹೆಣಗುತ್ತಿರುವ ಚಂದ್ರಿಯರ ಮೂರು ತರಹದ ವ್ಯಕ್ತಿ-ಮನಸ್ಸುಗಳು ಇಲ್ಲಿವೆ....." (ವಿರೂಪಾಕ್ಷ ಕುಲಕರ್ಣಿ; ೧೯೯೦; ಪು. ೯೬).

ಈ ಮೇಲೆ ಚರ್ಚಿತವಾದ ಕಾರಂತರ ಕಾದಂಬರಿಗಳು ಇಂಗ್ಲಿಷ ಭಾಷೆಗೆ ಅನುವಾದಗೊಂಡ ಕಾದಂಬರಿಗಳಾಗಿವೆ. ಈ ಎಲ್ಲ ಕಾದಂಬರಿಗಳ ವಸ್ತು ಆಶಯಗಳ ಕುರಿತು ಅವಲೋಕಿಸಿದಾಗ ಇಲ್ಲಿನ ಕರಾವಳಿ ಕರ್ನಾಟಕದ ಪ್ರಾದೇಶಿಕ ಸಂವೇದನೆಯನ್ನು ಹೊಂದಿರುವ ಕೃತಿಗಳು ಇದಾಗಿವೆ ಎಂಬುದು ಸ್ಪಷ್ಟವಾಗುತ್ತದೆ. ಇಂತಹ ಪ್ರಾದೇಶಿಕ ಸಂವೇದನೆಗಳುಳ್ಳ ಕೃತಿಗಳು ತೀರಾ ಭಿನ್ನವಾದ ಸಾಂಸ್ಕೃತಿಕ ಸನ್ನಿವೇಶವನ್ನು ಹೊಂದಿರುವ ತೀರಾ ಇಂಗ್ಲಿಷ ನಂತಹ ಜಾಗತಿಕ ಭಾಷೆಯೊಂದರಲ್ಲಿ ಅನುವಾದಗೊಂಡಾಗ ಅದರಲ್ಲಿನ ಸಾಧಕಬಾಧಕಗಳೇನೆಂಬುದನ್ನು ಮುಂದಿನ ಭಾಗಗಳಲ್ಲಿ ವಿವೇಚಿಸಲಾಗುವುದು.

# ಅಧ್ಯಾಯ - ೨೮

## ಜಾಗತಿಕ ಭಾಷೆಯಲ್ಲಿ ಪ್ರಾದೇಶಿಕ ಕಾದಂಬರಿಗಳು : ಸಾಧನೆ ಮತ್ತು ಪ್ರಸ್ತುತತೆ

ಕಾರಂತರು ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾದ ಕೃತಿಗಳನ್ನು ನೀಡಿ ಚಿರಪರಿಚಿತರಾದವರು. ವಿಶೇಷವಾಗಿ ತಮ್ಮ ಕಾದಂಬರಿಗಳಲ್ಲಿ ಕರ್ನಾಟಕದ ಕರಾವಳಿಯ ಜನಜೀವನ, ಸಾಮಾಜಿಕ ಬದುಕು, ಅವರ ಉಡುಗೆ ತೊಡುಗೆ, ಆಡುವ ಭಾಷೆ, ಆಹಾರ ಕ್ರಮ, ಹಬ್ಬ ಹರಿದಿನಗಳು, ಸಾಂಸ್ಕೃತಿಕತೆ ಇವೆಲ್ಲವುಗಳನ್ನು ಯಥಾವತ್ತಾಗಿ ಮೂಡಿಸುವ ಪ್ರಯತ್ನ ಮಾಡಿದ್ದಾರೆ. ಕರಾವಳಿ ಕರ್ನಾಟಕದ ಬದುಕನ್ನು ಚಿತ್ರಿಸುವಲ್ಲಿ ಅವರ ಕಾದಂಬರಿಗಳು ಯಶಸ್ವಿಯಾಗಿವೆ. ವಾಸ್ತವ ಬದುಕಿನ ಚಿತ್ರಣವನ್ನು ಕಟ್ಟಿಕೊಡುವ ಅವರ ಕಾದಂಬರಿಗಳು ಅವರನ್ನು ವಾಸ್ತವವಾದಿ ಕಾದಂಬರಿಕಾರರೆಂದೇ ಪ್ರತಿಪಾದಿಸುತ್ತವೆ. ಒಟ್ಟು ೪೫ ಕಾದಂಬರಿಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕಾರಂತರ ಈ ಎಲ್ಲಾ ಕಾದಂಬರಿಗಳಲ್ಲಿ ಒಂದಲ್ಲ ಒಂದು ರೀತಿಯಿಂದ ಇಲ್ಲಿನ ಪ್ರಾದೇಶಿಕ ಸಂಸ್ಕೃತಿಯನ್ನೇ ಚಿತ್ರಿಸಿರುವುದು ಕಂಡು ಬರುತ್ತದೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಶೇಷವಾದ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವ ಈ ಕಾದಂಬರಿಗಳು ತಮ್ಮ ಜನಪ್ರೀಯತೆ ಮತ್ತು ಪ್ರಾದೇಶಿಕತೆಗಳಿಂದಾಗಿ ಪ್ರಾದೇಶಿಕ ಗಡಿಯನ್ನು ದಾಟಿ ಇತರ ಭಾಷೆಗಳಲ್ಲೂ ಅನುವಾದಗೊಂಡಿರುವುದು ಗಮನಾರ್ಹ ಸಂಗತಿಯಾಗಿದೆ. ಭಾರತದ ಇತರ ಭಾಷೆಗಳಾದ ತಮಿಳು, ತೆಲುಗು, ತುಳು, ಮರಾಠಿ, ಪಂಜಾಬಿ, ಓರಿಯಾ, ಮಲಯಾಳಂ, ಬಂಗಾಲಿ, ಗುಜರಾತಿ, ಮೈಥಿಲಿ, ಕೊಂಕಣಿ ಈ ಮುಂತಾದ ಭಾಷೆಗಳಲ್ಲೂ ಅವರ ಕೆಲವು ಕಾದಂಬರಿಗಳು ಅನುವಾದಗೊಂಡಿರುವುದನ್ನು ಕಾಣುತ್ತೇವೆ. ವಿಶೇಷವಾಗಿ ಅವರ ಕೆಲವು ಕಾದಂಬರಿಗಳು ರಾಷ್ಟ್ರೀಯ ಭಾಷೆಯಾದ ಹಿಂದಿ ಹಾಗೂ ಜಾಗತಿಕ ಭಾಷೆಯಾದ ಇಂಗ್ಲೀಷನಲ್ಲೂ ಅನುವಾದಗೊಂಡಿವೆ. ವಿಶಿಷ್ಠತೆಯುನ್ನು, ಅನನ್ಯತೆಯುನ್ನು ಹೊಂದಿರುವುದರಿಂದಲೇ ಕಾರಂತರ ಕಾದಂಬರಿಗಳು ಜಾಗತಿಕ ಭಾಷೆಗಳಲ್ಲೂ ಅನುವಾದಗೊಳ್ಳ ತೊಡಗಿದ್ದನ್ನು ಒಪ್ಪಿಕೊಳ್ಳಬೇಕಾದ ವಿಚಾರ. ಜಗತ್ತಿನಾದ್ಯಂತ

ಪ್ರಚಲಿತವಿರುವ ಭಾಷೆಯ ಮುಖೇನ ಮಾತ್ರ ಜಗತ್ತಿನ ಯಾವುದೇ ಪ್ರದೇಶದ ವಿಚಾರಗಳು, ಅಲ್ಲಿನ ವಿಶೇಷತೆ, ಸಾಂಸ್ಕೃತಿಕ ಅನನ್ಯತೆಗಳು ಜಾಗತಿಕ ಮಟ್ಟದಲ್ಲಿ ತಲುಪುವುದು ಸಾಧ್ಯವಾಗುತ್ತದೆ. ಇಂದು ಇಂಗ್ಲಿಷ ಅಂತಹದ್ದೊಂದು ಪ್ರಾಮುಖ್ಯತೆಯನ್ನು ಪಡೆದುಕೊಂಡ ಭಾಷೆಯಾಗಿದೆ. ಕೇವಲ ಸಾಹಿತ್ಯದ ವಿಚಾರಗಳಲ್ಲದೇ ಇನ್ನಿತರ ಕ್ಷೇತ್ರಗಳಾದ ವಿಜ್ಞಾನ ತಂತ್ರಜ್ಞಾನ, ವೈದ್ಯಕೀಯ, ಕಲೆ, ತತ್ವಜ್ಞಾನ, ರಾಜಕೀಯ ಚಿಂತನೆಗಳು ಈ ಮುಂತಾದ ವಿಚಾರಗಳು ಕೂಡ ಜಾಗತಿಕ ಮಟ್ಟದಲ್ಲಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಪರಿಚಿತವಾಗುವಲ್ಲಿ ಜಾಗತಿಕ ಭಾಷೆಯಾದ ಇಂಗ್ಲಿಷ ಭಾಷೆ ಪ್ರಮುಖವಾದ ಪಾತ್ರವನ್ನು ವಹಿಸುತ್ತಿದೆ. ಆದುದರಿಂದ ಇಂಗ್ಲಿಷ ಭಾಷೆಯನ್ನು ಜಾಗತಿಕ ಭಾಷೆಯೆಂದೇ ಗುರುತಿಸಲಾಗಿದೆ. ಇಂತಹ ಪ್ರಾಮುಖ್ಯತೆಯನ್ನು ಹೊಂದಿರುವ ಭಾಷೆಯಲ್ಲಿ ಕಾರಂತರ ಕೆಲವು ಕಾದಂಬರಿಗಳು ಅನುವಾದಗೊಂಡಿರುವುದರಿಂದ ಪ್ರಾದೇಶಿಕ ಕಾದಂಬರಿಕಾರರಾಗಿರುವ ಶಿವರಾಮ ಕಾರಂತರು ಜಾಗತಿಕ ಮಟ್ಟದ ಕಾದಂಬರಿಕಾರರಾಗಿ ಮೂಡಿ ಬಂದಿದ್ದಾರೆ ಎನ್ನಬಹುದಾಗಿದೆ.

ಮುಖ್ಯವಾಗಿ ಕರ್ನಾಟಕದ ಇಡೀ ಬದುಕನ್ನು ವಿಶ್ಲೇಷಿಸುವುದಾದಲ್ಲಿ ಕರ್ನಾಟಕದ ಒಳಗಡೆಯೇ ವಿವಿಧ ಭಾಗಗಳಲ್ಲಿ ಬದುಕುವ ಜನರ ಬದುಕಿನ ಶೈಲಿಯಲ್ಲಿ, ಸಾಮಾಜಿಕ ಬದುಕಿನ ರಚನೆಯಲ್ಲಿ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಕಾಣಬಹುದಾಗಿದೆ. ಆಯಾ ಪ್ರದೇಶಗಳಿಗನುಗುಣವಾಗಿ ಬದುಕಿನ ಕ್ರಮದಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ. ವೈವಿಧ್ಯಗಳಿಂದ ಕೂಡಿರುವ ಇಲ್ಲಿನ ವಿವಿಧ ಪ್ರದೇಶಗಳ ಬದುಕಿನ ಚಿತ್ರಣವನ್ನು ಕಾದಂಬರಿಕಾರರು ಕೆಲವರು ತಮ್ಮ ಕೃತಿಗಳಲ್ಲಿ ಮೂಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ಕರಾವಳಿ ಕರ್ನಾಟಕ, ಮಲೆನಾಡು ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದರಾಬಾದ ಕರ್ನಾಟಕ, ಉತ್ತರ ಕರ್ನಾಟಕ ಎಂದು ಗುರುತಿಸುವುದಾದರೆ ಈ ಪ್ರತಿಯೊಂದು ಪ್ರದೇಶದಲ್ಲಿಯೂ ಜನರ ಬದುಕಿನ ಕ್ರಮ, ಆಡುವ ಭಾಷೆ, ಉಡುಗೆ ತೊಡುಗೆಗಳು ಈ ಮುಂತಾದ ವಿಚಾರಗಳಲ್ಲಿ ಸಾಕಷ್ಟು ಭಿನ್ನತೆಯನ್ನು ಕಾಣುತ್ತೇವೆ. ಇಲ್ಲಿನ ಪ್ರಾದೇಶಿಕ ಭಾಷೆಗಳಲ್ಲಿ ರಚಿತವಾದ ಕಾದಂಬರಿಗಳಲ್ಲಿ ಆಯಾ ಪ್ರದೇಶದ ಸಂವೇಧನೆಗಳು ಇದ್ದು ಇವು ಆಯಾ ಪ್ರದೇಶದ ಪ್ರಾದೇಶಿಕ ಸಂವೇಧನೆಗಳನ್ನು ದಾಖಲಿಸುವ ಕೃತಿಗಳಾಗಿ ಮೂಡಿ ಬಂದಿವೆ. ಆಯಾ ಪ್ರದೇಶಕ್ಕೆ ಹೊಂದಿಕೊಂಡಂತೆ ಅಲ್ಲಿನ ಕಾದಂಬರಿಕಾರರು ಪ್ರಾದೇಶಿಕ ಕಾದಂಬರಿಗಳನ್ನು ರಚಿಸಿದಂತೆ ಅವಿಭಜಿತ ದಕ್ಷಿಣ ಕನ್ನಡದ ಕರಾವಳಿ ಸಂಸ್ಕೃತಿಯ ಪ್ರಾದೇಶಿಕ ಸಂವೇಧನೆಗಳನ್ನು ವ್ಯಕ್ತ ಪಡಿಸುವ ಕೃತಿಗಳೆಂದರೆ ಕಾರಂತರ

ಕಾದಂಬರಿಗಳೇ ಸರಿ. ಇಲ್ಲಿನ ಗ್ರಾಮೀಣ ಪರಿಸರದ ಬದುಕಿನ ಶೈಲಿಯನ್ನು ಹೊಂದಿರುವ ಈ ಕಾದಂಬರಿಗಳು ಜಾಗತಿಕ ಭಾಷೆಯಾದ ಇಂಗ್ಲೀಷಗೆ ಅನುವಾದಗೊಂಡಿರುವುದೇ ಒಂದು ಸಾಧನೆ ಎನ್ನಬಹುದು. ಕಾರಂತರ ಒಟ್ಟು ಆರು ಕಾದಂಬರಿಗಳು ಇಂಗ್ಲಿಷಗೆ ಅನುವಾದಗೊಂಡವೆ. ಕನ್ನಡ ಸಾಹಿತ್ಯದಲ್ಲಿ ಇಂಗ್ಲಿಷ ಭಾಷೆಗೆ ಇಷ್ಟೊಂದು ಸಂಖ್ಯೆಯಲ್ಲಿ ಅನುವಾದ ಗೊಂಡಿರುವ ಕಾದಂಬರಿಗಳನ್ನು ಹೊಂದಿರುವ ಇನ್ನೊಬ್ಬ ಕಾದಂಬರಿಕಾರರಿಲ್ಲ. ಇದು ಕಾರಂತರ ಕಾದಂಬರಿಗೆ ಇರುವ ವಿಶೇಷತೆಯನ್ನು ತಿಳಿಯಲು ಸಹಕಾರಿಯಾಗಿದೆ. ಈಗಾಗಲೇ ಗಮನಿಸಿರುವಂತೆ ಕಾರಂತರ ಒಟ್ಟು ಆರು ಕಾದಂಬರಿಗಳು ಇಂಗ್ಲೀಷ ಭಾಷೆಗೆ ಅನುವಾದಗೊಂಡಿವೆ. ಅವುಗಳೆಂದರೆ ೧. ಮರಳಿ ಮಣ್ಣಿಗೆ ೨. ಸರಸಮ್ಮನ ಸಮಾಧಿ ೩. ಚೋಮನದುಡಿ ೪. ಮೂಕಜ್ಜಿಯ ಕನಸುಗಳು ೫. ಕುಡಿಯರ ಕೂಸು ೬. ಮೈಮನಗಳ ಸುಳಿಯಲ್ಲಿ. ಈ ಎಲ್ಲಾ ಆರು ಕಾದಂಬರಿಗಳು ಕರಾವಳಿ ಕರ್ನಾಟಕದ ಪ್ರಾದೇಶಿಕ ಸಂವೇಧನೆಗಳನ್ನು ವಿವಿಧ ನೆಲೆಯಲ್ಲಿ ಪ್ರತಿನಿಧಿಸುವ ಕೃತಿಗಳಾಗಿವೆ.

'ಮರಳಿ ಮಣ್ಣಿಗೆ' ಮೂರು ತಲೆಮಾರಿನ ಚಿತ್ರಣವನ್ನು ಮೂರು ವಿವಿಧ ಹಂತಗಳಲ್ಲಿ ಚಿತ್ರಿಸುತ್ತ ಹಳ್ಳಿಯ ಗ್ರಾಮೀಣ ಬದುಕು ವಸಾಹತುಶಾಹಿ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಬದಲಾವಣೆಯ ಪ್ರಕ್ರಿಯೆಗೆ ತೆರೆದುಕೊಂಡು ಸಾಮಾಜಿಕವಾಗಿ ಬದಲಾದ ಪರಿಸ್ಥಿತಿಯಲ್ಲಿ ಮತ್ತೆ ಮೂಲದ ಬದುಕನ್ನೇ ಹುಡುಕಿಕೊಂಡು ಬರುವ ಸಂದರ್ಭವನ್ನು ಚಿತ್ರಿಸುತ್ತದೆ. 'ಸರಸಮ್ಮನ ಸಮಾಧಿ' ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ನಲುಗುವ, ಸ್ವಾತಂತ್ರ್ಯಕ್ಕಾಗಿ ಹಂಬಲಿಸುವ, ಶಾಂತಿ ಸಮಾಧಾನಕ್ಕಾಗಿ ದೇವರ ಮೊರೆ ಹೋಗುವ, ಕೊನೆಯಲ್ಲಿ ನಂಬಿಕೆಗಳು ಹುಸಿಯಾಗುವ ಶೋಷಿತ ವ್ಯವಸ್ಥೆಯಿಂದ ಬಿಡುಗಡೆಯನ್ನು ಬಯಸುವ ಹೆಣ್ಣಿನ ಚಿತ್ರಣವನ್ನು ಹೊಂದಿರುವ ಕಾದಂಬರಿಯಾಗಿದೆ. 'ಚೋಮನದುಡಿ'ಯು ಜಾತಿ ಪದ್ಧತಿಯ ಕಟ್ಟುಪಾಡುಗಳೊಂದಿಗೆ ಸ್ವಂತಿಕೆಯನ್ನು ಬಯಸಿ ಬದುಕಿನುದ್ದಕ್ಕೂ ಕಟ್ಟಿಕೊಂಡ ಕನಸನ್ನು ನನಸಾಗಿಸಲು ಹೆಣಗಾಡುವ ದಲಿತನೊಬ್ಬನ ವ್ಯರ್ಥ ಪ್ರಯತ್ನದ ದಾಖಲೆಯಾಗಿದೆ. ಇಲ್ಲಿಯೂ ವಸಾಹತುಶಾಹಿ ವ್ಯವಸ್ಥೆಯ ಪ್ರಭಾವದಿಂದ ಸಮಾಜದಲ್ಲಿ ಉಂಟಾದ ಪರಿಣಾಮವನ್ನು ಅದು ಬಿಂಬಿಸುತ್ತದೆ 'ಮೂಕಜ್ಜಿಯ ಕನಸುಗಳು' ಕಾದಂಬರಿಯ ಇತಿಹಾಸವನ್ನು ಪುನರ್ ವಿಮರ್ಶಿಸುವ ಅದಕ್ಕೆ ಕೆದಕಿ ಮೂಲವನ್ನು ತಿಳಿದುಕೊಳ್ಳುವ ಜತೆ ಜತೆಗೆ ನಮ್ಮ ಪ್ರಾದೇಶಿಕ ಹಿನ್ನಲೆಯನ್ನು ಅರಿಯುವ ಪ್ರಯತ್ನವಾಗಿ ಕಂಡು ಬರುತ್ತದೆ. ಸಜ್ಜನಿಕೆಯ ಸೋಗಿನಲ್ಲಿ ಒಳಗಿನ ಕಪಟವನ್ನು ಅಡಗಿಸಿಕೊಂಡಿರುವ ನಮ್ಮ ನಡುವೆ ಬದುಕುವ ವ್ಯಕ್ತಿಗಳ ಚಿತ್ರಣವನ್ನು ಇದು ಕಟ್ಟಿಕೊಡುತ್ತದೆ. 'ಕುಡಿಯರ ಕೂಸು'

ಕಾದಂಬರಿಯು ಕೂಡ ಸಮುದಾಯವೊಂದು ಪ್ರಕೃತಿಯ ಸನಿಹದಲ್ಲಿ ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುವ ರೀತಿ, ವಸಾಹತುಶಾಹಿಯ ಪ್ರಭಾವದಿಂದ ಮೇಲಸ್ತರದ ಜನಾಂಗ ಕುಡಿಯ ಸಮುದಾಯದ ಬದುಕನ್ನು ತಮ್ಮ ವೈಯಕ್ತಿಕ ಹಿತಾಸಕ್ತಿಗೆ ತಕ್ಕಂತೆ ಉಪಯೋಗಿಸಿಕೊಳ್ಳಲು ನಡೆಸುವ ಪ್ರಯತ್ನಗಳನ್ನು ದಾಖಲಿಸುತ್ತದೆ. ಆಧುನಿಕ ಪ್ರಭಾವದಿಂದ ಹೊರಗೇ ಉಳಿಯುವ ಪ್ರಯತ್ನವನ್ನು ಮಾಡುತ್ತ ತಮ್ಮ ಮೂಲದ ಬದುಕನ್ನೇ ಇನ್ನಷ್ಟು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನವಾಗಿ ಈ ಕಾದಂಬರಿ ಕಂಡು ಬರುತ್ತದೆ. 'ಮೈಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ವೇಶ್ಯಾ ವೃತ್ತಿಯನ್ನು ಉದಾರೀಕರಿಸುವ, ವೇಶ್ಯಯರ ಬದುಕಿನಲ್ಲೂ ಮೈಗಷ್ಟೇ ಪ್ರಧಾನ್ಯತೆಯನ್ನು ನೀಡದೇ ಮನಸ್ಸಿಗೂ ಬೆಲೆಯನ್ನು ನೀಡಿ ಸಮಾಜದಲ್ಲಿ ಗೌರವವನ್ನು ದಕ್ಕಿಸಿಕೊಡುವ ಪ್ರಯತ್ನವನ್ನು ಮಾಡಲಾಗಿದೆ. ವೇಶ್ಯೆಯೊಬ್ಬಳ ಬದುಕಿನಲ್ಲಿ ಬರುವ ವಿವಿಧ ಗುಣ ಸ್ವಭಾವದ ಪುರುಷರನ್ನು ಅಳೆದು ತೂಗುವ ವಿವಿಧ ಚಿತ್ರಣವನ್ನು ನೀಡುವ ಕಾದಂಬರಿ ಇದಾಗಿದೆ.

ಹೀಗೆ ಇಂಗ್ಲಿಷ ಭಾಷೆಗೆ ಅನುವಾದಗೊಂಡಿರುವ ಈ ಆರು ಕಾದಂಬರಿಗಳು ಕರಾವಳಿ ಕರ್ನಾಟಕದ ಪ್ರಾದೇಶಿಕತೆಯ ಸಂವೇಧನೆಗಳನ್ನು ವಿವಿಧ ಸ್ಥರಗಳಲ್ಲಿ ಚಿತ್ರಿಸುತ್ತವೆ. ಇಂತಹ ಪ್ರಾದೇಶಿಕ ಸಂವೇಧನೆಗಳನ್ನು ಒಳಗೊಂಡಿರುವ ಕಾದಂಬರಿಗಳು ಜಾಗತಿಕ ಮಟ್ಟದಲ್ಲಿ ಪರಿಚಿತಗೊಂಡಿರುವುದು ಸಾಧನೆಯಾಗಿದೆ.

ಆದರೆ ಕರಾವಳಿ ಸಾಂಸ್ಕೃತಿಯ ಅಂಶಗಳೇ ದಟ್ಟವಾಗಿ ಹರಡಿರುವ ಇಂತಹ ಕಾದಂಬರಿಗಳು ಜಾಗತಿಕ ಮಟ್ಟಕ್ಕೆ ತಲುಪುವಲ್ಲಿ ಸಾಕಷ್ಟು ಮಿತಿಗಳನ್ನು ಹೊಂದಿವೆ. ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾದ ಇಲ್ಲಿನ ಸಾಂಸ್ಕೃತಿಕತೆ, ಸಾಮಾಜಿಕತೆ, ಆಚರಣೆಗಳು ಭಾಷೆ – ಬಳಸುವ ನುಡಿಗಟ್ಟುಗಳು ತೀರಾ ಅಪರಿಚಿತವಾದ ಸಂಸ್ಕೃತಿಯನ್ನು ಹೊಂದಿರುವ ಭಾಷೆಯೊಂದರಲ್ಲಿ ಅನುವಾದಗೊಳ್ಳುವಾಗ ಸಾಕಷ್ಟು ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಈ ಮೇಲೆ ಪ್ರಸ್ತಾಪಿತವಾದ ಕಾದಂಬರಿಗಳಲ್ಲಿ ಬರುವ ದೇಶೀ ಸಂಸ್ಕೃತಿಯು ಈ ಪ್ರದೇಶದ ಸಂಪೂರ್ಣವಾದ ಅರಿವಿರುವ ಓದುಗರಿಗೆ ಮಾತ್ರ ತಲುಪಬಲ್ಲವು. ಇಂಗ್ಲಿಷ ಬಲ್ಲ ಇಲ್ಲಿನ ಪರಿಸರದ ಓದುಗರು ಮಾತ್ರ ಇದನ್ನು ಪೂರ್ಣ ಪ್ರಮಾಣದಲ್ಲಿ ಗ್ರಹಿಸಬಲ್ಲರು. ಆದರೆ ಜಾಗತಿಕ ಮಟ್ಟದಲ್ಲಿ ಇವು ಅನುವಾದಗೊಳ್ಳುವಾಗ ಸಂವಾದಿ ಶಬ್ಧಗಳ ಕೊರತೆಯಿಂದಾಗಿ ದೇಶೀ ಸಂಸ್ಕೃತಿಯ ಅರಿವಿಲ್ಲದವರಿಗೆ ಇದನ್ನು ಅರಿಯುವುದು ಕಷ್ಟಸಾಧ್ಯವಾಗಬಹುದು. ಹೀಗಾಗಿ ಇವು ಎಷ್ಟರಮಟ್ಟಿಗೆ ವಿದೇಶಿ ಸಂಸ್ಕೃತಿಯ ನೆಲದಲ್ಲಿ ಪರಿಚಿತವಾಗುತ್ತವೆ ಎಂಬುದು ಚರ್ಚಾಯೋಗ್ಯ ವಿಷಯವಾಗಿದೆ. ಈ ನಿಟ್ಟಿನಲ್ಲಿ ಅನುವಾದ

ಪ್ರಕ್ರಿಯೆಯು ಅನೇಕ ಮಿತಿಗಳನ್ನು ಎದುರಿಸಬೇಕಾಗುತ್ತದೆ.

ಹೀಗೆ ಪ್ರಾದೇಶಿಕ ಸಂಸ್ಕೃತಿಯನ್ನೇ ಮುಖ್ಯವಾಗಿ ಆಧರಿಸಿಕೊಂಡು ರಚಿತವಾಗಿರುವ ಈ ಕಾದಂಬರಿಗಳು ಪ್ರದೇಶಿಕ ಮಟ್ಟದಲ್ಲಿಯೇ ಉಳಿದುಕೊಂಡರೆ ಇವುಗಳಲ್ಲಿ ಪ್ರತಿಪಾದಿತವಾಗಿರುವ ಮುಖ್ಯ ವಿಚಾರಗಳು ಜಾಗತಿಕ ಮಟ್ಟದಲ್ಲಿ ಅರಿವಿಗೆ ಬಾರದೇ ಹೋಗುವ ಅಪಾಯವಿದೆ. ಕಾರಂತರ ಕಾದಂಬರಿಗಳು ಕಟ್ಟಿಕೊಡುವ ವಿಚಾರಗಳು ಮುಖ್ಯವಾಗಿ ಜಾಗತಿಕ ಮಟ್ಟದಲ್ಲಿ ಚರ್ಚೆಗೆ ಒಳಗಾಗಬೇಕಾದ ತುರ್ತು ಇದೆ. ಪ್ರಾದೇಶಿಕ ಸಂಸ್ಕೃತಿಯನ್ನೇ ಬಿಂಬಿಸುವ ಕಾದಂಬರಿಗಳಾಗಿದ್ದರೂ ಇವು ಇಡೀ ಮನುಷ್ಯ ಪ್ರಪಂಚಕ್ಕೆ ಅನ್ವಯಿಸುವ ವಿಚಾರಗಳನ್ನು ಹೊಂದಿರುವ ಕಾದಂಬರಿಗಳಾಗಿವೆ. ಗ್ರಾಮೀಣ ಪರಿಸರದಲ್ಲಿ ಬದುಕುತ್ತಿರುವ ಕುಟುಂಬವೊಂದು ಅಲ್ಲಿನ ಕೃಷಿ ಬದುಕನ್ನೇ ಅವಲಂಬಿಸಿಕೊಂಡು ಬದುಕಿನ ಏರಿಳಿತಗಳನ್ನು ಅನುಭವಿಸುವ ಸಂದರ್ಭವನ್ನು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಕಾಣಬಹುದಾಗಿದೆ. ಜೊತೆಗೆ ವಸಾಹತುಶಾಹಿಯ ಆಗಮನದಿಂದಾಗಿ ಈ ಬದುಕಿನಿಂದ ಬಿಡುಗಡೆಯನ್ನು ಬಯಸಿ ಉದ್ಯೋಗವನ್ನು ಆರಸಿಕೊಂಡು ಹೋಗುವ, ಆ ಮೂಲಕ ಹೆಚ್ಚಿನ ಸೌಲಭ್ಯವನ್ನು ನಿರೀಕ್ಷಿಸುವ ಮನುಷ್ಯನ ಸ್ವಭಾವ ಪ್ರಕ್ರಿಯೆಯನ್ನು ಇಲ್ಲಿ ಗಮನಿಸಬಹುದಾಗಿದೆ. ಹೀಗೆ ವಸಾಹತುಶಾಹಿ ಅನುಭವವು ಹಳ್ಳಿಯ ಬದುಕಿನ ಮೇಲೆ ಬೀರುವ ಪರಿಣಾಮವನ್ನು, ಬದಲಾದ ಸಾಮಾಜಿಕ ಸ್ಥಿತಿಯಲ್ಲಿ ಗ್ರಾಮೀಣ ಸಂಸ್ಕೃತಿಯನ್ನು ಪುನ: ಕಟ್ಟುವ ಪ್ರಕ್ರಿಯೆಯನ್ನು ಪ್ರಸ್ತುತ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಈ ವಿಚಾರಗಳನ್ನು ಜಾಗತಿಕ ಮಟ್ಟದ ಓದುಗರು ಅರಿಯುವಂತೆ ಮಾಡುವುದು ಮುಖ್ಯವಾಗುತ್ತದೆ. ಹಾಗೆಯೇ ಶೋಷಣೆಗೆ ಒಳಗಾಗುವ ಮಹಿಳೆ ಕೇವಲ ಕರಾವಳಿ ಕರ್ನಾಟಕದ ಪ್ರದೇಶಕ್ಕೆ ಮಾತ್ರ ಸೀಮಿತವಾದವುಗಳಲ್ಲ. ಇಂದು ಜಾಗತಿಕ ಮಟ್ಟದಲ್ಲಿ ಮಹಿಳಾ ಜಾಗೃತಿಯ ವಿಚಾರಗಳು ಪ್ರಚಲಿತವಾದ ವಿಚಾರ. ಇತರ ವಿದೇಶಿ ನೆಲದಲ್ಲಿಯೂ ಮಹಿಳೆ ಇಂದು ಶೋಷಿತಳಾಗುತ್ತಿದ್ದಾಳೆ. ಹೀಗಾಗಿ ಸಾಮಾಜಿಕ ಕಟ್ಟು ಪಾಡುಗಳಿಂದ ಮಹಿಳೆಯನ್ನು ಮುಕ್ತಗೊಳಿಸುವ, ಸ್ವಾತಂತ್ರ್ಯದ ಬದುಕನ್ನು ಅವಳಿಗೆ ಕಲ್ಪಿಸುವ, ಸಮಾನತೆಯ ಸ್ಥಾನಮಾನವನ್ನು ಅವಳು ಅನುಭವಿಸುವಂತೆ ಮಾಡುವ ಹಾಗೂ ಸಾಮಾಜಿಕ ಅನಿಷ್ಟ ಪದ್ಧತಿಯಿಂದ ಮಹಿಳೆಗೆ ವಿಮೋಚನೆ ನೀಡಬೇಕಾದ ಅನಿವಾರ್ಯತೆ ಇಂದು ಇದೆ. ಇದು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗಬೇಕಾದ ಹಾಗೂ ಈ ಬಗ್ಗೆ ಜಾಗತಿಕ ಮಟ್ಟದಲ್ಲಿ ಅರಿವನ್ನು ಮೂಡಿಸಬೇಕಾದ ತುರ್ತು ಇಂದಿನ ದಿನಗಳಲ್ಲಿ ಹೆಚ್ಚು ಅವಶ್ಯವಾಗಿರುವುದರಿಂದ 'ಸರಸಮ್ಮನ ಸಮಾಧಿ' ಇಂತಹುದೇ ವಿಚಾರವನ್ನು ಪ್ರತಿನಿಧಿಸುವ ಕೃತಿಯಾಗಿರುವುದರಿಂದ

ಇದು ಜಾಗತಿಕ ಮಟ್ಟದ ಅಂಶಗಳನ್ನು ಹೊಂದಿದ ಕಾದಂಬರಿಯೇ ಆಗಿದೆ. ಆದುದರಿಂದ ಈ ಕಾದಂಬರಿಯೂ ಕೂಡ ಜಾಗತಿಕ ಮಟ್ಟಕ್ಕೆ ತಲುಪಬೇಕಾದ ತುರ್ತು ಇದೆ. 'ಚೋಮನದುಡಿ' ಕಾದಂಬರಿಯ ದಲಿತನಾದ ಚೋಮ ಜೀತದ ಬದುಕಿನಿಂದ ಸ್ವಾತಂತ್ರ್ಯದ ಬದುಕನ್ನು ಹಂಬಲಿಸುತ್ತಾನೆ. ಅದನ್ನು ನನಸಾಗಿಸಲು ಬದುಕಿನುದ್ದಕ್ಕೂ ಪ್ರಯತ್ನಿಸುತ್ತಾನೆ. ಆದರೆ ಸಮಾಜದ ಬಿಗಿ ಕಟ್ಟು ಪಾಡುಗಳಿಂದ ಹಾಗೂ ಮೇಲಸ್ತರದ ಜನಾಂಗದ ನಿರ್ಲಿಪ್ತತೆಯಿಂದ ಒಳಗೊಳಗೆ ನಿರಾಶೆಯನ್ನು, ಸೋಲನ್ನು ಅನುಭವಿಸುವ ಕರ್ನಾಟಕ ಪ್ರದೇಶದ ಒಬ್ಬ ಚೋಮನಿಗೆ ಮಾತ್ರ ಸೀಮಿತವಾಗಿಲ್ಲ. ಚೋಮನಂತಹ ವ್ಯಕ್ತಿಗಳು ಜಗತ್ತಿನ ವಿವಿಧ ಮೂಲೆಗಳಲ್ಲಿ ಇಂದಿಗೂ ಇದ್ದಾರೆ. ಇವರೆಲ್ಲರ ಸಮಾಜಕ್ಕೆ ಇಂತಹ ಸಾಮಾಜಿಕ ಅಭ್ಯುದಯದ ತುಡಿತವಿರುವ ಕಾದಂಬರಿಯು ತಲುಪಬೇಕಾದ ಅಗತ್ಯವಿದೆ. ಇದರಂತೆ ಕಾರಂತರು ಕಾದಂಬರಿಕಾರರಾಗಿ ಸಮಾಜಕ್ಕೆ ತಲುಪಿಸಲು ಪ್ರಯತ್ನಿಸಿರುವ ಈ ವಿಚಾರಗಳು ಜಾಗತಿಕ ಮಟ್ಟಕ್ಕೆ ತಲುಪಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರಾದೇಶಿಕ ಕಾದಂಬರಿಯೊಂದು ತನ್ನ ಪ್ರಾದೇಶಿಕತೆಯ ಗಡಿಯನ್ನು ದಾಟಿ ಜಾಗತಿಕ ಮಟ್ಟಕ್ಕೆ ತಲುಪಲೇ ಬೇಕಾಗಿದೆ. 'ಮೂಕಜ್ಜಿಯ ಕನಸುಗಳು' ಕಾದಂಬರಿಯು ಇತಿಹಾಸದ ಚಿತ್ರಣವನ್ನು ಕಟ್ಟಿಕೊಡುತ್ತ ವರ್ತಮಾನದ ಬದಲಾವಣೆಯ ಬದುಕಿನಲ್ಲಿ ನಮ್ಮ ಸಂಸ್ಕೃತಿಯು ಕಳೆದುಹೋಗಬಾರದು ಎಂಬ ಸತ್ಯವನ್ನು ಪ್ರತಿಪಾದಿಸುತ್ತದೆ. ಹಾಗೆಯೇ ವಿವಿಧ ಮುಖವಾಡಗಳನ್ನು ಧರಿಸಿಕೊಂಡು ಸಜ್ಜನಿಕೆಯ ಸೋಗಿನಲ್ಲಿ ಸಮಾಜವನ್ನು ವಂಚಿಸುವ ವ್ಯಕ್ತಿಗಳ ನೈಜ ವ್ಯಕ್ತಿತ್ವವನ್ನು ಸಮಾಜಕ್ಕೆ ಅನಾವರಣಗೊಳಿಸುತ್ತದೆ. ಹಿಂದೆ ನಡೆದ ಘಟನೆಗಳ ಬಗೆಗೆ ಕೂಲಂಕೂಷವಾಗಿ ತಿಳಿದುಕೊಳ್ಳಬೇಕು ಎನ್ನುವ ಆಸ್ಥೆಯನ್ನು ಹೊಂದಿರುವ ಸುಬ್ರಾಯನಂತವರು ಇಂದು ಕೇವಲ ಕೆಲವೇ ಪ್ರದೇಶಗಳಿಗೆ ಸೀಮಿತವಾಗಿರದೇ ಇಡೀ ಜಗತ್ತಿನ ತುಂಬಾ ತುಂಬಿದ್ದಾರೆ. ಹೀಗಾಗಿ 'ಮೂಕಜ್ಜಿಯ ಕನಸುಗಳು' ಕಾದಂಬರಿಯು ಜಾಗತಿಕ ಮಟ್ಟಕ್ಕೆ ತಲುಪಬೇಕಾದ ಅಗತ್ಯತೆಯನ್ನು ನಾವು ಇಲ್ಲಿ ಕಂಡುಕೊಳ್ಳಬಹುದಾಗಿದೆ. ಈ ಕೃತಿಯು ಜಾಗತಿಕ ಭಾಷೆಯಲ್ಲಿ ಅನುವಾದಗೊಂಡಲ್ಲಿ ಮಾತ್ರ ಇಂತಹ ಬದುಕಿನ ಕ್ರಮವನ್ನು ವಿಶ್ಲೇಷಿಸುತ್ತ, ನಮ್ಮ ನೆಲದ ಸಂಸ್ಕೃತಿಯನ್ನು, ವಿಶೇಷತೆಯನ್ನು ಇಲ್ಲಿನ ಅನನ್ಯತೆಯನ್ನು ಜಾಗತಿಕ ಮಟ್ಟದಲ್ಲಿ ಪರಿಚಯಿಸುವುದು ಸಾಧ್ಯ. 'ಕುಡಿಯರ ಕೂಸು' ಕಾದಂಬರಿಯು ಪ್ರಕೃತಿ ಮಡಿಲಲ್ಲಿ ಆಧುನಿಕತೆಯ ಪ್ರಭಾವಕ್ಕೆ ಒಳಗಾಗದೇ ತಮ್ಮದೇ ಆದ ರೀತಿ ನೀತಿಗಳನ್ನು ಇಟ್ಟುಕೊಂಡ ಬುಡಕಟ್ಟು ಸಮುದಾಯವೊಂದರ ಜೀವನವನ್ನು ಒಳಗೊಂಡಿದೆ. ಆಧುನಿಕ ಪ್ರಪಂಚಕ್ಕೆ ಹೆಚ್ಚು ಅಪರಿಚಿತವಾದ ಸಮುದಾಯದ ಮೇಲೆ

ವಸಾಹತುಶಾಹಿ ವ್ಯವಸ್ಥೆಯೂ ಯಾವ ರೀತಿಯಲ್ಲಿ ಪ್ರಭಾವವನ್ನು ಬೀರಿತು? ಎಂಬುದರ ಅರಿವನ್ನು ಮೂಡಿಸುವ ಈ ಕಾದಂಬರಿಯು ಕೇವಲ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿ ಬಿಟ್ಟರೆ ಒಟ್ಟು ಕಾದಂಬರಿಯ ಆಶಯ ಅಪೂರ್ಣವಾಗಿ ಬಿಡುತ್ತದೆ. ಒಂದು ವಿಶಿಷ್ಟ ಸಂಸ್ಕೃತಿಯ ಅನನ್ಯತೆಯನ್ನು ಕಾಪಾಡಿಕೊಂಡು ಹೋಗುವುದು ಎಷ್ಟು ಮುಖ್ಯ? ಹಾಗೂ ಇಂತಹುದೇ ಸಂದರ್ಭಗಳು ಜಾಗತಿಕ ಮಟ್ಟದಲ್ಲಿಯೂ ಇನ್ನಿತರ ಪ್ರದೇಶಗಳಲ್ಲಿ ಪ್ರಸ್ತಾಪಿತವಾಗಿರುವ ಸಾಧ್ಯತೆಗಳಿರುವುದರಿಂದ ಇಂತಹ ಕೃತಿಗಳು ಅನುವಾದವಾದಾಗ ಒಂದು ತುಲನಾತ್ಮಕವಾದ ಅಧ್ಯಯನ ಇದರಿಂದ ಸಾಧ್ಯವಾಗಬಹುದು. 'ಕುಡಿಯರ ಕೂಸು' ಕೂಡ ಪ್ರಾದೇಶಿಕತೆಯ ಮೇರೆ ಮೀರಿ ಜಾಗತಿಕ ಮಟ್ಟದಲ್ಲಿ ಪ್ರಸ್ತಾಪಿತವಾಗಬೇಕಾದ ಕಾದಂಬರಿ ಎಂದೇ ಪರಿಗಣಿಸಬೇಕಾಗುತ್ತದೆ. 'ಮೈ ಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ವೇಶ್ಯಾವೃತ್ತಿಯನ್ನು ಮಾನವೀಯತೆಯ ನೆಲೆಯಲ್ಲಿ ಅರಿಯುವ ಪ್ರಯತ್ನ ಮಾಡಲಾಗಿದ್ದು ಮೈ ಮಾರಿಕೊಳ್ಳುವ, ಕೇವಲ ಕಾಮದ ತೃಷೆಗಾಗಿ ಅಥವಾ ಜೀವನೋಪಾಯಕ್ಕಾಗಿ ಈ ಕುಲಕಸುಬನ್ನು ಮುಂದುವರೆಸಿಕೊಂಡು ಹೋಗುವ ಒಂದು ದಂದೆಯಾಗಿ ಕಾಣದೇ ವೇಶ್ಯೆಯ ಬದುಕಿನಲ್ಲಿ ಮೈಗಿಂತ ಮನಸ್ಸಿಗೆ ಆದ್ಯತೆಯನ್ನು ನೀಡಲಾಗಿದೆ. ಮನಃಪೂರ್ವಕವಾಗಿ ಬೆಸೆಯುವ ಬಯಕೆಯನ್ನು ಹೊತ್ತು ಮಾನಸಿಕವಾದ ಸಂತೃಪ್ತಿಗಾಗಿ ಹಾತೊರೆಯುವ ಹೆಣ್ಣೊಬ್ಬಳ ಬದುಕಿನಲ್ಲಿ ಬಂದು ಹೋಗುವ ಪುರುಷರ ವಿವಿಧ ಸ್ವಭಾವಗಳ ಚಿತ್ರಣವನ್ನು ಇದು ಕಟ್ಟಿಕೊಡುತ್ತದೆ. ನಿಸರ್ಗ ಸಹಜವಾದ ಕಾಮದ ಬಯಕೆಯನ್ನು ಬಲಾತ್ಕಾರ ಪೂರ್ವಕವಾಗಿ ಹತೋಟಿಯಲ್ಲಿಟ್ಟುಕೊಂಡು ಆಧ್ಯಾತ್ಮಿಕತೆಯ ಮುಖವಾಡವನ್ನು ಹೊತ್ತು ಬದುಕುವ ವ್ಯಕ್ತಿಗಳಿಗೂ ಒಳಗೊಳಗೆ ಬಯಕೆ ಕಾಡಿ ಕಡೆಯಲ್ಲಿ ಮಂಜುಳೆಯಲ್ಲಿ ಪಡೆಯುವ ಸುಖದಲ್ಲಿಯೇ ಬದುಕಿನ ಸಂತೃಪ್ತಿಯನ್ನು ಕಾಣುವ ಸನ್ಯಾಸಿಯ ಚಿತ್ರಣವನ್ನು ಇಲ್ಲಿ ನೀಡಲಾಗಿದೆ. ವಸಾಹತುಶಾಹಿ ವ್ಯವಸ್ಥೆಯ ಪ್ರಭಾವದಿಂದಾಗಿ ವೇಶ್ಯೆಯರ ಬದುಕಿನಲ್ಲಿಯೂ ಆದ ಬದಲಾವಣೆಯ ಚಿತ್ರಣವೂ ಇಲ್ಲಿ ಇದೆ. ಹೆಣ್ಣಿನ ಮನಸ್ಸನ್ನು ಅರಿಯುವ, ಸಹಾನುಭೂತಿಯಿಂದ ವೇಶ್ಯಾವೃತ್ತಿಯನ್ನು ನೋಡುವ ಕಾದಂಬರಿಕಾರರ ಈ ಪಾತ್ರ ಚಿತ್ರಣವೂ ಜಾಗತಿಕ ಮಟ್ಟದಲ್ಲಿ ಪ್ರಸ್ತಾಪಿತವಾಗಬೇಕಾದ ಅಗತ್ಯತೆ ಇದೆ[೧]. ವೇಶ್ಯಾವೃತ್ತಿ ಎಂಬುದು ಕೂಡ ಕೇವಲ ಒಂದು ಪ್ರದೇಶಕ್ಕೆ ಮಾತ್ರ

---

೧. ಇತ್ತೀಚಿನ ದಿನಗಳಲ್ಲಿ ವೇಶ್ಯೆಯರನ್ನು ಲೈಂಗಿಕ ಕಾರ್ಯಕರ್ತೆಯರೆಂದು ಗುರುತಿಸುವುದರಿಂದೂ ಹಾಗೂ ವೇಶ್ಯಾವೃತ್ತಿಯನ್ನು ಒಂದು ಉದ್ಯೋಗವನ್ನಾಗಿ ಪರಿಗಣಿಸಿರುವುದರಿಂದ ಕಾರಂತರು ಪ್ರತಿಪಾದಿಸುವ ಅಂತಃಕರಣದ / ಮಾನವೀಯ ನೆಲೆಯಲ್ಲಿ ಪರಿಗಣಿಸುವ ಮೈಮನಸುಗಳ ಸಮಾಗಮದ ಆದರ್ಶ ಇಲ್ಲಿ ಗೌಣವಾಗುತ್ತದೆ.

ಸೀಮಿತವಾಗಿರದೇ ಅದು ಜಾಗತಿಕ ಮಟ್ಟದಲ್ಲಿಯೇ ಪ್ರಚಲಿತವಿರುವ ಸಂಗತಿಯಾಗಿದ್ದು ಅದನ್ನು ಮಾನವೀಯ ನೆಲೆಯಲ್ಲಿ ಚರ್ಚಿಸಿರುವ ವೇಶ್ಯೆಯರ ಮನಸ್ಸಿನ ಭಾವನೆಗಳಿಗೆ ಪ್ರಾಮುಖ್ಯತೆಯನ್ನು ನೀಡಿ ಅದನ್ನು ವ್ಯವಹಾರಿಕವಾಗಿ ಪರಿಗಣಿಸದೇ ಭಾವನಾತ್ಮಕನಾಗಿ ಸ್ಪಂದಿಸಿ ಚಿತ್ರಿಸಿರುವ ಈ ವಿಚಾರಗಳು ಜಾಗತಿಕ ಮಹತ್ವವುಳ್ಳದ್ದಾಗಿವೆ. ಇದರಿಂದಾಗಿ ಈ ಕಾದಂಬರಿಯು ಜಾಗತಿಕ ಮಟ್ಟದಲ್ಲಿ ಪ್ರಾಮುಖ್ಯವನ್ನು ಪಡೆದುಕೊಂಡ ಕಾದಂಬರಿಯಾಗಿದೆ.

ಹೀಗೆ ಈ ಕಾದಂಬರಿಗಳು ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಾದೇಶಿಕ ಕಾದಂಬರಿಗಳು ಎಂದು ಪರಿಗಣಿತವಾಗಿದ್ದರೂ ಕೆಲವೊಂದು ಜಾಗತಿಕ ಸತ್ಯಗಳು ಇವುಗಳಲ್ಲಿ ಅಡಕವಾಗಿರುವುದರಿಂದ ಇವು ಕೇವಲ ಒಂದು ಪ್ರದೇಶದ ಓದುಗರಿಗೆ ಮಾತ್ರ ಸೀಮಿತವಾಗಿರದೇ ಜಾಗತಿಕ ಮಟ್ಟದ ಓದುಗರಿಗೆ ಲಭ್ಯವಾಗಬೇಕಾದ ತುರ್ತು ಇದೆ. ಈ ಅಗತ್ಯತೆಗಳಿಗನುಸಾರವಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇನ್ನು ಅನೇಕ ಕಾದಂಬರಿಗಳು ಪ್ರಾದೇಶಿಕ ಮಟ್ಟದಿಂದ ಜಾಗತಿಕ ಮಟ್ಟದಲ್ಲಿ ಅನುವಾದಗೊಳ್ಳಬೇಕಾಗಿತ್ತಾದರೂ ಕಾರಂತರ ಕೆಲವು ಕಾದಂಬರಿಗಳಾದರೂ ಅನುವಾದಗೊಂಡಿರುವುದು ವಿಶೇಷವಾಗಿದೆ. ಹೀಗಾಗಿ ಇಂಗ್ಲೀಷ ಭಾಷೆಗೆ ಅನುವಾದಗೊಂಡಿರುವ ಈ ಕಾದಂಬರಿಗಳಿಗೆ ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಪ್ರಾಮುಖ್ಯತೆ ದೊರೆಕಿದಂತಾಗಿದೆ. ಮುಖ್ಯವಾಗಿ ಪ್ರಾದೇಶಿಕ ಮಟ್ಟದ ಕಾದಂಬರಿಕಾರರೊಬ್ಬರು ಜಾಗತಿಕ ಮಟ್ಟದಲ್ಲಿ ಈ ಅನುವಾದದ ಮೂಲಕ ಪರಿಚಿತವಾದದ್ದು ವಿಶೇಷವೆನ್ನಬಹುದು. ಈ ಕಾದಂಬರಿಗಳು ಅನುವಾದಗೊಳ್ಳುವುದರ ಮೂಲಕ ಕಾರಂತರು ಪ್ರಾದೇಶಿಕ ಹಂತದಿಂದ ಜಾಗತಿಕ ಮಟ್ಟಕ್ಕೆ ಏರಿ ನಿಂತಿದ್ದಾರೆ ಎನ್ನಬಹುದು.

ಇಂದಿನ ಜಾಗತೀಕರಣದ ಸಂದರ್ಭದಲ್ಲಿ ದೇಶೀ ಸಂಸ್ಕೃತಿಯನ್ನು ಪ್ರತಿಪಾದಿಸುವ ಈ ಕಾದಂಬರಿಗಳು ತಮ್ಮದೇ ಆದ ಪ್ರಾಮುಖ್ಯತೆಯನ್ನು ಹೊಂದಿದ ಕಾದಂಬರಿಗಳಾಗಿವೆ. ಜಾಗತಿಕ ಮಟ್ಟದಲ್ಲಿ ಚರ್ಚಿತವಾದ ವಿಚಾರಗಳನ್ನು ಹೊಂದಿರುವ ಕಾದಂಬರಿಗಳು ಇವಾದರೂ ದೇಶೀ ಸಂಸ್ಕೃತಿಯನ್ನು ಪ್ರತಿಪಾಧಿಸುವ ಕಾದಂಬರಿಗಳಾಗಿಯೂ ಇವು ಮಹತ್ವವನ್ನು ಪಡೆದುಕೊಳ್ಳುತ್ತವೆ[೧]. ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿ ತಮ್ಮ ಪ್ರಾದೇಶಿಕತೆಯನ್ನು ಉಳಿಸಿಕೊಂಡು ಭಾಷಾಂತರಗೊಳ್ಳುವುದು ಬಹುಮುಖ್ಯವಾಗಿದೆ. ಕರಾವಳಿ ಕರ್ನಾಟಕದ

---

೧. ಬೆಳಗಾವಿಯಲ್ಲಿ ಇತ್ತೀಚೆಗೆ ನಡೆದ ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಕಾರ್ಯಕ್ರಮದಲ್ಲಿ ಯು.ಆರ್. ಅನಂತಮೂರ್ತಿಯವರು ಕನ್ನಡದಲ್ಲಿ ಜಗತ್ತೇ ಅಡಗಿದೆ. ಅದನ್ನು ಜಗತ್ತಿಗೆ ಪರಿಚಯಿಸುವ ಕಾರ್ಯವನ್ನು ಅನುವಾದದ ಮುಖೇನ ಸಾಧ್ಯವಾಗಿಸಬಹುದು ಎಂಬ ಅಭಿಪ್ರಾಯ ನೀಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಬದುಕಿನ ಚಿತ್ರಣವನ್ನು ಇಲ್ಲಿನ ಭಾಷೆಯ ಸೊಗಡನ್ನು, ಇಲ್ಲಿನ ಸಂಪ್ರದಾಯ, ಆಚರಣೆ, ಭೌಗೋಳಿಕ ಪರಿಸರ, ಉಡುಗೆ ತೊಡುಗೆ, ಆಹಾರ ಕ್ರಮ ಇವುಗಳನ್ನು ಬಹಳಷ್ಟು ಹತ್ತಿರದಿಂದ ಚಿತ್ರಿಸಿರುವ ಈ ಕಾದಂಬರಿಗಳು ತಮ್ಮ ದೇಶೀ ಸಂಸ್ಕೃತಿಯನ್ನು ಉಳಿಸಿಕೊಂಡೇ ಜಾಗತಿಕ ಭಾಷೆಗೆ ಅನುವಾದಗೊಳ್ಳುವುದು ಬಹಳ ಮುಖ್ಯವಾಗಿದೆ.

ಅನುವಾದ ಕಾರ್ಯದಲ್ಲಿ ಅನೇಕ ಸಾಂಸ್ಕೃತಿಕ ತೊಡಕುಗಳಿದ್ದರೂ ತೀರಾ ಭಿನ್ನವಾದ ಸಂಸ್ಕೃತಿಯುನ್ನು ಹೊಂದಿರುವ ವಿದೇಶಿ ಭಾಷೆಯುಲ್ಲಿ ಈ ಕಾದಂಬರಿಗಳು ಅನುವಾದಗೊಂಡಿರುವುದು ಒಂದು ಸಾಧನೆಯೇ ಆಗಿದೆ. ಅನುವಾದದಲ್ಲಿನ ಕೆಲವು ವಿಚಾರಗಳಾದರೂ ಕನ್ನಡದ ಪ್ರಾದೇಶಿಕ ಸೊಗಡನ್ನು ಜಾಗತಿಕ ಮಟ್ಟಕ್ಕೆ ಕೊಂಡೊಯ್ಯುವಲ್ಲಿ ಸಫಲವಾಗಿರುವುದನ್ನು ಕಾಣಬಹುದಾಗಿದೆ. ಇನ್ನು ಹೆಚ್ಚಿನ ಸಂಖ್ಯೆಯಲ್ಲಿ ಇಂತಹ ಪ್ರಾದೇಶಿಕ ಸೊಗಡನ್ನು ಹೊಂದಿರುವ ಕನ್ನಡದ ಕಾದಂಬರಿಗಳು ಜಾಗತಿಕ ಮಟ್ಟಕ್ಕೆ ತಲುಪಬೇಕಾದ ಕನ್ನಡದ ಕಾದಂಬರಿಗಳು ಜಾಗತಿಕ ಮಟ್ಟಕ್ಕೆ ತಲುಪಬೇಕಾದ ಅಗತ್ಯತೆಯನ್ನು ಕೂಡ ಈ ಸಂದರ್ಭದಲ್ಲಿ ಗುರುತಿಸಬಹುದಾಗಿದೆ.

ಹೀಗೆ ಕಾರಂತರ ಕಾದಂಬರಿಗಳು ತಮ್ಮ ವಸ್ತು ನಿರೂಪಣೆಯಲ್ಲಿ ಕೇವಲ ಪ್ರಾದೇಶಿಕತೆಯುನ್ನು ಮಾತ್ರ ಬಿಂಬಿಸದೇ ಜಾಗತಿಕ ವಿದ್ಯಮಾನಗಳನ್ನು ಒಳಗೊಂಡಿರುವುದರಿಂದ ಈ ಕಾದಂಬರಿಗಳ ಅನುವಾದದ ಮೂಲಕ ಅವು ಕೇವಲ ಪ್ರಾದೇಶಿಕ ಮಟ್ಟದಲ್ಲಿಯೇ ಉಳಿದುಕೊಳ್ಳಬಹುದಾಗಿದ್ದ ಮಿತಿಯನ್ನು ಮೀರಿ ನಿಂತಿವೆ ಎನ್ನಬಹುದು. ಪ್ರಾದೇಶಿಕ ಕಾದಂಬರಿಗಳಲ್ಲಿ ಅಡಕವಾಗಿರುವ ಜಾಗತಿಕ ವಿದ್ಯಮಾನಗಳು ಜಾಗತಿಕ ಮಟ್ಟಕ್ಕೆ ತಲುಪಿದಾಗ ಇಂತಹ ಕಾದಂಬರಿಗಳನ್ನು ರಚಿಸಿದ ಕಾದಂಬರಿಕಾರ ಪ್ರಾದೇಶಿಕ ಮಟ್ಟದಿಂದ ಜಾಗತಿಕ ಮಟ್ಟಕ್ಕೆ ಪರಿಚಿತನಾಗುತ್ತಾನೆ. ಕಾದಂಬರಿಗಳಲ್ಲಿ ಚರ್ಚಿತವಾದ ಈ ವಿದ್ಯಮಾನಗಳಿಂದಾಗಿ ಜಾಗತಿಕ ಮಟ್ಟವನ್ನು ತಲುಪಲು ಯಶಸ್ವಿಯಾದಲ್ಲಿ ಕಾದಂಬರಿಕಾರರ ಇಂತಹ ಸಾಧನೆಗಳನ್ನು ಹುಡುಕಿಕೊಂಡು ಪ್ರಶಸ್ತಿ, ಪುರಸ್ಕಾರಗಳು ಬರಬಹುದು.

ಕೇವಲ ಕನ್ನಡದ ಪ್ರಾದೇಶಿಕ ಕಾದಂಬರಿಗಳಲ್ಲದೇ ಇನ್ನಿತರ ಪ್ರಾದೇಶಿಕ ಭಾಷೆಗಳಲ್ಲಿ ರಚಿತವಾದ ಕಾದಂಬರಿಗಳೂ ಕೂಡ ಜಾಗತಿಕ ಭಾಷೆಯಲ್ಲಿ ಸಾಕಷ್ಟು ಅನುವಾದಗೊಳ್ಳಬೇಕಾದ ಅಗತ್ಯತೆ ಇಂದಿನ ದಿನಗಳಲ್ಲಿ ಇದೆ. ಈಗಾಗಲೇ ಗಮನಿಸಿದಂತೆ ಪ್ರಾದೇಶಿಕ ಕಾದಂಬರಿಗಳಲ್ಲಿ ಒಂದು ಪ್ರದೇಶಕ್ಕೆ ಸೀಮಿತವಾಗಿರುವ ಸಾಂಸ್ಕೃತಿಕತೆಯ ಚಿತ್ರಣವನ್ನು ಕಾಣುತ್ತೇವೆ. ಈ

ಸಾಂಸ್ಕೃತಿಕತೆಯು ಒಂದು ಪ್ರದೇಶಕ್ಕೆ ಸೀಮಿತವಾಗಿದ್ದರೂ ಕೂಡ ಇಂತಹ ಕಾದಂಬರಿಯೊಂದು ಜಾಗತಿಕ ಮಟ್ಟದಲ್ಲಿ ಪರಿಚಯವಾದಾಗ ಇಲ್ಲಿನ ಪ್ರಾದೇಶಿಕ ಸಾಂಸ್ಕೃತಿಕತೆಯೂ ಕೂಡ ಜಾಗತಿಕ ಮಟ್ಟದಲ್ಲಿ ಪರಿಚಿತವಾಗುವುದು ಸಾಧ್ಯವಾಗುತ್ತದೆ ಎಂಬುದನ್ನು ಅಧ್ಯಯನಕ್ಕೆ ಬಳಸಿಕೊಂಡಿರುವ ಕಾರಂತರ ಕಾದಂಬರಿಗಳ ಕೆಲವು ಸಂದರ್ಭಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಬರುವ ಕಡಲು, ಮಳೆ, ಬೆಳೆ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಇತ್ಯಾದಿಗಳು ಕರ್ನಾಟಕ ಕರಾವಳಿ ಪ್ರದೇಶದ ಪ್ರಾದೇಶಿಕ ಅಂಶದ ಬಗ್ಗೆ ಅರಿವನ್ನು ನೀಡುತ್ತವೆ. ಕಾದಂಬರಿಯಲ್ಲಿ ಮುಖ್ಯ ಪಾತ್ರಗಳಾಗಿರುವ ರಾಮೈತಾಳರ ಮನೆಯಲ್ಲಿ ಇರುವ ಹೆಂಗಸರು – ಐತಾಳರ ತಂಗಿ ಸರಸೋತಿ ಮತ್ತು ಪಾರ್ವತಿ ಇವರಿಬ್ಬರ ದೈನಂದಿನ ಬದುಕಿನ ಚಿತ್ರಣವನ್ನು ಕಾಣುತ್ತೇವೆ. ಕೃಷಿ ಕುಟುಂಬದ ಚಿತ್ರಣವನ್ನು ಕೊಡುವುದರ ಜೊತೆಗೆ ಈ ಪ್ರದೇಶದಲ್ಲಿ ಆಚರಿಸುವ ಹಬ್ಬ ಹರಿದಿನಗಳು, ಈ ದಿನಗಳಲ್ಲಿ ಏರ್ಪಡಿಸುವ ಭಾಗವತ, ಪುರಾಣ ಮುಂತಾದವುಗಳ ಶ್ರವಣಗಳು ಇಲ್ಲಿನ ಧಾರ್ಮಿಕ ವಿಚಾರಗಳನ್ನೇ ಪ್ರತಿನಿಧಿಸುತ್ತವೆ. ಕೃಷಿಯ ಕೆಲಸವೆಲ್ಲ ಮುಗಿದು ನಂತರದಲ್ಲಿ ದಿನನಿತ್ಯದ ಕೆಲಸ ಕಾರ್ಯಗಳಿಂದ ಬೇಸತ್ತು ಬದಲಾವಣೆಯನ್ನು ಬಯಸಿದ ಮನಸ್ಸನ್ನು ಹೊತ್ತ ಸರಸೋತಿ ಪಾರೋತಿಗೆ ಹೇಳುವ ಮಾತುಗಳು – "ಎಂದಿಗೋ ಪ್ರಥಮ ಏಕಾದಶಿ" ಅದಾದರೂ ಬೇಗ ಬಂದರೆ ಒಂದಿಷ್ಟು ಭಾಗವತದ ಕಥೆಗಳನ್ನಾದರೂ ಕೇಳಬಹುದಿತ್ತು. ಕಳೆದ ವರ್ಷ ಮುಗಿಸಿದುದು ಎಲ್ಲಿಗೆ? ಅಕ್ರೂರ ಬಿಲ್ಲ ಹಬ್ಬಕ್ಕೆ ಕೃಷ್ಣ ದೇವರನ್ನು ಕರೆದುಕೊಂಡು ಹೋದಲ್ಲಿಗೆ ಅಲ್ಲವೇ?" (ಶಿವರಾಮ ಕಾರಂತ; ೨೦೦೯; ಪು:೧೩) ಸರಸೋತಿಯ ಈ ಮಾತುಗಳಲ್ಲಿ ಪ್ರತಿವರ್ಷವೂ ಭಾಗವತದ ಶ್ರವಣದ ಕುರಿತಾದ ವಿಚಾರಗಳನ್ನು ಹೊರಗೆಡಹುತ್ತದೆ. "ಚೋಮನ ದುಡಿ" ಕಾದಂಬರಿಯು ಕೂಡ ದಕ್ಷಿಣ ಕನ್ನಡ ಜಿಲ್ಲೆಯ ಪರಿಸರದ ಕಥೆಯನ್ನು ಹೇಳುತ್ತದೆ. ಚೋಮನ ಬಾಳಿನ ಕಥೆಯನ್ನು ನಿವೇದಿಸುವುದರೊಂದಿಗೆ ಅಂದಿನ ಆ ಪರಿಸರದಲ್ಲಿ ಕ್ರಿಶ್ಚಿಯನ್ ಧರ್ಮದ ಮತಾಂತರ ಕಾರ್ಯವನ್ನು ಇದು ತೆರೆದಿಡುತ್ತದೆ. ಆ ಕಾಲದ ಜಾತೀಯತೆ, ಅಂಧ ಸಂಪ್ರದಾಯಗಳ ಬಗ್ಗೆ ನಮ್ಮನ್ನು ಯೋಚನೆಗೆ ಈಡು ಮಾಡುವ ಅಂಶಗಳು ಈ ಕಾದಂಬರಿಯಲ್ಲಿ ದಟ್ಟವಾಗಿ ಹರಡಿವೆ. "ಸರಸಮ್ಮನ ಸಮಾಧಿ" ಯಲ್ಲಿಯೂ ಕೂಡ ದಾಂಪತ್ಯ ಕ್ಲೇಶದಿಂದ ತೊಳಲಾಡುವ ದಂಪತಿಗಳ ಚಿತ್ರಣ ಬರುತ್ತದೆ. ದಾಂಪತ್ಯ ಕ್ಲೇಶದಿಂದ ಮುಕ್ತಿಯನ್ನು ಪಡೆಯುವ ಸಲುವಾಗಿ ಸರಸಮ್ಮನ ಕೆರೆಯಲ್ಲಿ ಯಾರಿಗೂ ಕಾಣದಂತೆ ಗುಪ್ತವಾಗಿ

ಹರಕೆಯನ್ನು ಸಲ್ಲಿಸುವ ಸಂದರ್ಭಗಳನ್ನು ಕಾಣುತ್ತೇವೆ. "ಗಂಡಸರಾಗಲಿ ಹೆಂಗಸರಾಗಲಿ, ದಾಂಪತ್ಯ ಸುಖವಿಲ್ಲವೆಂದು ಕಂಡವರು, ಗುರುವಾರ ಒಂಟಿಯಾಗಿ ಅಲ್ಲಿಗೆ ಹೋಗಿ, ಮಾಸ್ತಿ ಹಣೆಗೆ ಕುಂಕುಮವಿರಿಸಿ, ಹೊರಗೆ ಬಂದು, ಗುಡಿಯ ಮುಂದಿನ ತೀರ್ಥದಲ್ಲಿ ಒಂದು ತೆಂಗಿನಕಾಯನ್ನು ಹಾಕಿಬರಬೇಕು. ಈ ಕೊನೆಯ ವಿಧಿ ಮಾತ್ರ ಗುಪ್ತವಾಗಿ ನಡೆಯಬೇಕು. ಈ ವಿಚಿತ್ರ "ಮಟ್ಸ"ನ್ನು ಯಾರು ಕಣ್ಣಿಂದ ಕಾಣಕೂಡದು. ದಾಂಪತ್ಯ ಕ್ಲೇಶ ಹೇಗೆ ಪ್ರಪಂಚಕ್ಕೆ ತಿಳಿಯದೋ ಅಥವಾ ತಿಳಿಯಬಾರದೋ ಹಾಗೇನೇ." (ಅದೇ ಪು: ೫) ಇಲ್ಲಿ ಬರುವ 'ಮುಟ್ಸು' ಎಂಬ ಶಬ್ಧಕ್ಕೆ ಕಾರಂತರು ತಮ್ಮ ಕಾದಂಬರಿಯಲ್ಲಿ ಅಡಿ ಟಿಪ್ಪಣಿಯನ್ನು ನೀಡಿ 'ಗುಪ್ತ ಚಿಕಿತ್ಸೆ ಇದರಲ್ಲಿ ಔಷಧ ಬಲಕ್ಕಿಂತ ಗೋಪ್ಯದಲ್ಲಿಯೇ ಹೆಚ್ಚಿನ ಬೆಲೆ. ಅದನ್ನು ವಿಶ್ವಾಸ ಚಿಕಿತ್ಸೆ ಎಂದರೂ ಸಲ್ಲುವುದು". ಎಂಬ ವಿವರಣೆಯನ್ನು ನೀಡಿದ್ದಾರೆ

'ಕುಡಿಯರ ಕೂಸು' ಕಾದಂಬರಿಯನ್ನು ಮಲೆಗಳಲ್ಲಿ ಬದುಕುವ ಕುಡಿಯ ಸಮುದಾಯ ಆಧುನಿಕ ಬದುಕಿನಿಂದ ದೂರ ಉಳಿದು, ನಂಬಿದ 'ಕಲ್ಲುಡು' ದೈವಕ್ಕೆ ನಡೆದುಕೊಳ್ಳುವ ರೀತಿ, ಗುರಿಕಾರರಾಗಿ ಸಮಾಜವನ್ನು ಮುನ್ನಡೆಸುವ ರೀತಿನೀತಿಗಳು, ಸಮಾಜದಿಂದ ಬಹಿಷ್ಕಾರವನ್ನು ಹಾಕುವ ಪದ್ಧತಿ ಈ ಮುಂತಾದವುಗಳು ಇಲ್ಲಿನ ಪ್ರಾದೇಶಿಕ ವೈಶಿಷ್ಟ್ಯತೆಯನ್ನೇ ಕಟ್ಟಿಕೊಡುವ ಅಂಶಗಳಾಗಿವೆ. ಕೆಂಚ ತನ್ನ ಮೊಮ್ಮಗನನ್ನು ಬದುಕಿಸಿಕೊಳ್ಳಲು ಕಲ್ಕುಡನ ಮೊರೆಹೋಗುವುದನ್ನು ಕಾಣಬಹುದು. "ದೈವವೇ ಈ ಒಂದು ಬದುಕನ್ನು ಉಳಿಸಿಕೊಡು; ಕಲ್ಕುಡುನ ಸಿಟ್ಟಿನಿಂದ ಕಾಯಿ. ನಿನ್ನ ತಾವನ್ನು ಬಿಟ್ಟು ಹೋದೆವೆಂದು ನಿನ್ನ ಮಕ್ಕಳ ಮೇಲಿನ ಕರುಣೆ ಕಡಿಮೆ ಮಾಡುತ್ತೀಯಾ? ಇನ್ನು ನಾನಿರುವ ತನಕವು ತಪ್ಪದೆ ವರ್ಷಕ್ಕೊಮ್ಮೆ ಒಂದೊಂದು 'ಹಾರ'ವನ್ನು ಚರುವನ್ನೂ ಕೊಡುತ್ತೇನೆ. ಇನ್ನಾರಿದ್ದಾರೆ ನನಗೆ? ಈ ಮರಿ ಬೆಳೆಯಲಿ ; ದೊಡ್ಡದಾಗಲಿ ನನ್ನಂತೆ ಅವನೂ ನಿನಗೆ ನಡೆದುಕೊಳ್ಳುತ್ತಾನೆ" (ಅದೇ ಪು: ೧೭) ಎಂದು ಗತಕಾಲದ ಚಿತ್ರಣವನ್ನು ನೀಡುತ್ತ ಇಲ್ಲಿನ ಪರಿಸರದಲ್ಲಿ ಬಾಳಿ ಬದುಕಿದ ಜನಾಂಗಗಳ ಕುರಿತಾಗಿ, ಹಿಂದಿನ ಪದ್ಧತಿಗಳನ್ನು ವಿಶ್ಲೇಷಿಸುವ ಸಂದರ್ಭಗಳನ್ನು ಕಾಣುತ್ತೇವೆ. "ನಮ್ಮ ಊರಿನ ಒಟ್ಟು ಒಂದು ಮೈಲು ಪಾಸಲೆಯಲ್ಲಿ ನೂರು ಮನೆಗಳು ಇವೆಯೋ ಇಲ್ಲವೋ. ಅದೂ ಏನೆನ್ನುತ್ತೀರಿ? ಎಲ್ಲ ಜಾತಿಯ ಸ್ಥರ ಮನೆಗಳು. ನಮ್ಮ ನಾಡಿನಲ್ಲಿ ಎಷ್ಟೊಂದು ಜಾತಿ ಮತ್ತು ಮತಗಳು ಇವೆಯೋ – ಅವೆಲ್ಲವೂ ಇವೆ. ಮೊಗೇರರು, ಕುಡುಬಿಯರು, ಬಿಲ್ಲವರು, ಜೈನರು, ಬ್ರಾಹ್ಮಣರು, ಗಾಣಿಗರು, ಅಡ್ಡ ಜಾತಿಯವರು, ನೀಚ ಜಾತಿಯವರು

– ಎಂದು ಜಾತಿಗಳ ಮಟ್ಟಿಗೆ ಪ್ರಾತಿನಿಧಿಕ ಹಳ್ಳಿ ನಮ್ಮದು. ಒಂದು ಎರಡು ಇಲ್ಲವೆ ಮೂರು, ನಾಲ್ಕು ಮನೆ ಒಂದೊಂದು ಜಾತಿಯವರದ್ದು. ಇಲ್ಲಿನ ಯಾರೊಬ್ಬರೂ ಊರ ಮನೆಯಲ್ಲಿ ನೆಂಟಸ್ತಿಕೆ ಬೆಳೆಯಿಸುವಂತಿಲ್ಲ. ಆಚೀಚಿನ ಹಳ್ಳಿಗಳಿಂದಲೇ ಹೆಣ್ಣನ್ನು ತರಬೇಕು; ಕೊಡಬೇಕು. ಅಂಥವರಲ್ಲಿ ಇಲ್ಲಿಯೇ ಹುಟ್ಟಿ, ಇಲ್ಲಿಯೇ ಬೆಳೆದು ಸಾಯದೆಯೂ, ಬದುಕದೆಯೂ ಉಳಿದಿರುವವಳು ತಾನೊಬ್ಬಳೇ ಎನ್ನುವುದುಂಟು, ನಮ್ಮ ಅಜ್ಜಿ". (ಅದೇ ಪು: 20–21) 'ಮೈ ಮನಗಳ ಸುಳಿಯಲ್ಲಿ' ಕಾದಂಬರಿಯಲ್ಲಿ ವೇಶ್ಯೆಯ ಬದುಕಿನ ಚಿತ್ರಣದ ಜೊತೆಗೆ ಬಸೂರಿನಂತಹ ಪ್ರದೇಶದ ಚಿತ್ರಣವನ್ನು ನೀಡಲಾಗಿದೆ. ಇಲ್ಲಿನ ಪ್ರಾದೇಶಿಕ ಸೊಗಡನ್ನು ತೆರೆದಿಡುವ ಕೃತಿ ಇದಾಗಿದೆ.

ಹೀಗೆ ಇಲ್ಲಿನ ಪ್ರದೇಶಗಳಿಗೆ ಸೀಮಿತವಾದ ಚಿತ್ರಣಗಳು, ಪ್ರಾದೇಶಿಕ ಅಂಶಗಳು ಅನುವಾದದ ಮೂಲಕ ಜಾಗತಿಕ ಮಟ್ಟದಲ್ಲಿ ಪರಿಚಿತವಾಗುವುದು ಸಾಧ್ಯವಾಗುತ್ತದೆ.

ಕಾರಂತರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಪ್ರಾದೇಶಿಕತೆಯ ಅಂಶಗಳನ್ನು ಜಾಗತಿಕ ಮಟ್ಟದಲ್ಲಿ ಪರಿಚಯಿಸುವುದು ಕಾದಂಬರಿಗಳು ಜಾಗತಿಕ ಭಾಷೆಯಲ್ಲಿ ಅನುವಾದಗೊಂಡಾಗ ಮಾತ್ರ ಸಾಧ್ಯವಾಗುತ್ತದೆ ಎನ್ನುವ ವಿಚಾರದ ಜೊತೆ ಜೊತೆಯಲ್ಲೇ ಅನುವಾದದ ಮೂಲಕ ಪ್ರಾದೇಶಿಕ ಸಂಸ್ಕೃತಿ ಮತ್ತು ಜಗತ್ತಿನ ಸಂಸ್ಕೃತಿಯ ಸಾಮ್ಯ ಅಂಶಗಳು ಇದರಿಂದ ಪ್ರಕಟವಾಗುತ್ತವೆ. ಶಿವರಾಮ ಕಾರಂತರ ಕಾದಂಬರಿಗಳು ಹೆಚ್ಚಾಗಿ ಮಾನವೀಯ ಮೌಲ್ಯಗಳಿಗೆ ತುಡಿಯುವ, ಸಾಮಾಜಿಕ ಸಮಾನತೆಯನ್ನು ಬೇಡುವ ಆಶಯಗಳಿಗೆ ಹೆಚ್ಚಿನ ಅದ್ಯತೆಯನ್ನು ನೀಡುವ ಕಾದಂಬರಿಗಳಾಗಿವೆ. ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವ ಕಾರಂತರು ಸಮಗ್ರವಾದ ಸಮಾಜದ ನಿರ್ಮಾಣಕ್ಕೆ ಹೆಚ್ಚಿನ ಒತ್ತನ್ನು ನೀಡಿದ ಲೇಖಕರಾಗಿದ್ದಾರೆ. "ನಾಟಕ ಕ್ಷೇತ್ರದಲ್ಲಿ ಬಹಳಷ್ಟು ಕೆಲಸ ಮಾಡಿದ ಕಾರಂತರು ಕನ್ನಡ ಸಾಹಿತ್ಯದ ಪ್ರಾದೇಶಿಕ ಮತ್ತು ಸಾಮಾಜಿಕ ಕಾದಂಬರಿ ಪ್ರಪಂಚಕ್ಕೆ ನೀಡಿರುವ ಕಾಣಿಕೆ ಅಮೋಘವಾದುದು. ಕಲೆ ಮತ್ತು ತಂತ್ರಗಳ ಬೆಳವಣಿಗೆಯ ದೃಷ್ಟಿಯಿಂದ ಗುಣದಲ್ಲಿ, ಗಾತ್ರದಲ್ಲಿ ಅನುಭವದ ಆಳದಲ್ಲಿ, ಅಂತರಂಗ ದರ್ಶನದಲ್ಲಿ ವರ್ಣನೆಗಳ ವೈವಿಧ್ಯತೆಯಲ್ಲಿ, ಮಾನವೀಯತೆಯಲ್ಲಿ ಅವುಗಳನ್ನು ಮೀರಿಸುವ ಕಾದಂಬರಿಗಳು ವಿರಳ. ನಿಸರ್ಗದ ಹಲವು ಮುಖಗಳಾದ ಗುಡುಗು, ಮಿಂಚು, ಬೆಟ್ಟಗುಡ್ಡ, ಕಡಲು, ಕರಾವಳಿ, ಕಣಿವೆ ತಪ್ಪಲುಗಳನ್ನು ಕಾರಂತರಷ್ಟು ಸ್ಪಷ್ಟವಾಗಿ ಚಿತ್ರಿಸಬಲ್ಲವರು ಅಪೂರ್ವ. ನಿಸರ್ಗದೊಡನೆ ಹೋರಾಡಿಕೊಂಡು ಅಲ್ಲಿಯ ಧೀರ ಜೀವನವನ್ನು ಬಾಳುತ್ತಿರುವ ಆ ಕಲುಷಿತವಾದ ಮೂಲ ನಿವಾಸಿಗಳ ಶಾಂತ ಬಾಳನ್ನು ವರ್ಣಿಸುವುದರಲ್ಲಿರುವ ಉತ್ಸಾಹದಷ್ಟೇ

ಅವರ ಶಾಂತ ಜೀವನವನ್ನು ಕೆಡಿಸುವ ಶ್ರೀಮಂತ ವರ್ಗದ ದುರಾಚಾರದ ಖಂಡನೆಯೂ ಪ್ರಚಂಡವಾಗಿದೆ....." (ಕರುಣಾಕರ ಶೆಟ್ಟಿ ಎನ್; ೨೦೦೩; ಪು: ೩೫) ಹೀಗೆ ಪ್ರಾದೇಶಿಕ ಕಾದಂಬರಿಕಾರರೊಬ್ಬರು ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ವಿಶ್ವವ್ಯಾಪಿ ಅಂಶಗಳನ್ನು ಜಾಗತಿಕ ಮಟ್ಟದಲ್ಲಿ ತುಲನೆ ಮಾಡಿ ನೋಡುವುದು ಸಾಧ್ಯವಾಗುತ್ತದೆ. ಈ ಎಲ್ಲ ಅಂಶಗಳು ಒಟ್ಟು ಭಾರತೀಯ ಸಂಸ್ಕೃತಿಯ ಚಿತ್ರಣವೇ ಆಗಿರುವುದರಿಂದ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವನ್ನು ಜಾಗತಿಕ ಮಟ್ಟದಲ್ಲಿ ಪರಿಚಯಿಸುವ ಕೆಲಸವನ್ನು ಈ ಅನುವಾದಗಳು ಮಾಡಿದಂತಾಗುತ್ತದೆ. ಕನ್ನಡ ಸಾರಸ್ವತ ಲೋಕದಲ್ಲಿ ಕಾದಂಬರಿ ರಚನೆಯಾಗಲು ಆರಂಭಿಸಿದ್ದು ಇಂಗ್ಲಿಷ ಸಾಹಿತ್ಯದ ಪ್ರಭಾವದಿಂದಲೇ ಎಂಬುದು ನಿರ್ವಿವಾದ ಸಂಗತಿಯಾಗಿದೆ. ".....ಆಂಗ್ಲೇಯರ 'ನಾವೆಲ್' ಮಾದರಿಯ ಕಾದಂಬರಿಗಳು ಕನ್ನಡದಲ್ಲಿ ಉತ್ಪನ್ನವಾದುದು; ಅಂಗ್ಲ ಸಂಸ್ಕೃತಿಯ ಸಂಸ್ಪರ್ಶವುಂಟಾದ ಮೇಲೆಯೇ ಎನ್ನುವುದು ನಿರ್ವಿವಾದ....." (ಅದೇ ಪು. ೨೨) ಕನ್ನಡಕ್ಕೆ ಪರಿಚಿತವಾದ ಕಾದಂಬರಿಗಳಲ್ಲಿ ಅದರಲ್ಲೂ ಪ್ರಾದೇಶಿಕ ಕಾದಂಬರಿಗಳು ರಚನೆಯಾಗತೊಡಗಿದಾಗ ಅವು ಯಾವ ವಿನ್ಯಾಸವನ್ನು ರೂಢಿಸಿಕೊಂಡು ರಚಿಸಲ್ಪಟ್ಟವು ಎಂಬುದು ಕುತೂಹಲಕಾರಿ ಸಂಗತಿಯಾಗಿದೆ. ಒಂದು ಪ್ರದೇಶಕ್ಕೆ ಸೀಮಿತವಾದ ಪರಿಸರ, ಜನಾಂಗ, ಬದುಕಿನ ಶೈಲಿ, ಆಡುವ ಮಾತುಗಳು, ಸಾಮಾಜಿಕ ವ್ಯವಸ್ಥೆ ಈ ಮುಂತಾದ ಚಿತ್ರಣಗಳು ಹೇಗೆ ಇಲ್ಲಿ ಸಮರ್ಪಕವಾಗಿ ಮೂಡಿ ಬಂದಿವೆ ಎಂಬುವುದರ ಚಿತ್ರಣವನ್ನು ಈ ಪ್ರಾದೇಶಿಕ ಕಾದಂಬರಿಗಳು ನೀಡುತ್ತವೆ. ಪ್ರಾದೇಶಿಕ ಕಾದಂಬರಿಗಳಲ್ಲಿ ಬಳಸಿಕೊಂಡಿರುವ ವಸ್ತು ವಿಶೇಷಗಳು. ಅವುಗಳನ್ನು ಬಳಸಿಕೊಳ್ಳಲು ಕಾದಂಬರಿಕಾರ ಬಳಸಿದ ತಂತ್ರಗಾರಿಕೆ, ಕಾದಂಬರಿ ವಿನ್ಯಾಸ ಇವೆಲ್ಲವುಗಳನ್ನು ಅರಿಯುವುದು ಇಂತಹ ಕಾದಂಬರಿಗಳು ಅನುವಾದಗೊಂಡಾಗ ಮಾತ್ರ ಸಾಧ್ಯವಾಗುವ ಸಂಗತಿಯಾಗಿದೆ.

ಕಾರಂತರ ಕಾದಂಬರಿಗಳು ಭಾರತೀಯ ಸಂಸ್ಕೃತಿಯ ಕುರಿತಾದ ಅನೇಕ ಚಿತ್ರಣಗಳನ್ನು ಒಳಗೊಂಡಿರುವುದರಿಂದ ಒಂದು ಸೃಜನಶೀಲ ಕೃತಿಯಲ್ಲಿ ಅಡಕವಾಗಿರುವ ಪ್ರಾದೇಶಿಕ ಗಡಿಯನ್ನು ಮೀರಿದ ಒಂದು ದೇಶದ ಸಂಸ್ಕೃತಿಯನ್ನು ಬಿಂಬಿಸುವ ವಿಚಾರಗಳು ಅನುವಾದದ ಮುಖೇನ ಅನ್ಯಭಾಷಿಕರ ನಾಡಿನಲ್ಲಿ ಪರಿಚಿತವಾಗುವುದು ಹಾಗೂ ಪ್ರಚಲಿತವಾಗುವುದು ಅನುವಾದದ ಮೂಲಕವೇ ಸಾಧ್ಯವಾಗುತ್ತದೆ.

ಕಾರಂತರು ಜಾಗತಿಕ ಮಟ್ಟದಲ್ಲಿ ತನ್ನ ಕಾದಂಬರಿಗಳು ಅನುವಾದಗೊಂಡು ತಮಗೆ ಪ್ರಾಮುಖ್ಯತೆ ಪ್ರಸಿದ್ಧಿ ಬರಬೇಕು ಎಂಬ ಬಯಕೆಯನ್ನು ಹೊಂದಿರದವರಾಗಿದ್ದರೂ ತಮ್ಮ ಕಾದಂಬರಿಗಳಲ್ಲಿ ಚರ್ಚಿತವಾದ ವಿಚಾರಗಳನ್ನು ಜಾಗತಿಕ ಮಟ್ಟದಲ್ಲಿ ತಲುಪಬೇಕಾದ ಅಗತ್ಯತೆಯನ್ನು ಮನಗಂಡವರಾಗಿದ್ದರು. ಅವರು ತಮ್ಮ ಕಾದಂಬರಿಗಳ ಇಂಗ್ಲಿಷ ಅನುವಾದದ ಮುನ್ನುಡಿಯಲ್ಲಿ ಈ ಕುರಿತಾದ ವಿಚಾರಗಳನ್ನು ಪ್ರಸ್ತಾಪ ಪಡಿಸಿರುವುದನ್ನು ಕಾಣಬಹುದಾಗಿದೆ[೧]. ಈ ಹಿನ್ನಲೆಯನ್ನು ಹೊತ್ತು ಕಾರಂತರ ಕೆಲವು ಕಾದಂಬರಿಗಳಾದರೂ ಜಾಗತಿಕ ಭಾಷೆಯಲ್ಲಿ ಅನುವಾದಗೊಳ್ಳುವುದರ ಮೂಲಕ ಸಾಧನೆಯನ್ನು ಮಾಡಿವೆ ಎಂದು ಹೇಳಬಹುದಾಗಿದೆ. ಹಾಗೂ ಇಂತಹ ಪ್ರಾದೇಶಿಕ ಕಾದಂಬರಿಗಳು ಜಾಗತಿಕ ಭಾಷೆಗೆ ಅನುವಾದಗೊಳ್ಳಬೇಕಾದುದು ಇಂದಿನ ದಿನಗಳಲ್ಲಿ ಹೆಚ್ಚಿನ ಪ್ರಸ್ತುತತೆಯನ್ನು ಹೊಂದಿದೆ ಎನ್ನಬಹುದಾಗಿದೆ[೨].

---

೧. 'ಮೂಕಜ್ಜಿಯ ಕನಸುಗಳು" ಹಾಗೂ "ಮರಳಿ ಮಣ್ಣಿಗೆ" ಕಾದಂಬರಿಗಳ ಇಂಗ್ಲೀಷ ಅನುವಾದಗಳಲ್ಲಿ ಮುನ್ನುಡಿಯಲ್ಲಿ ಕಾರಂತರು ಈ ವಿಚಾರವನ್ನು ಸ್ಪಷ್ಟ ಪಡಿಸಿದ್ದಾರೆ.

೨. ಇತ್ತೀಚೆಗೆ (೨೦೧೧ ಮಾರ್ಚ್ ೧೧, ೧೨, ೧೩ ರಂದು) ಬೆಳಗಾವಿಯಲ್ಲಿ ಜರುಗಿನ ೨ನೇ ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಯು.ಆರ್. ಅನಂತಮೂರ್ತಿಯವರು ಕನ್ನಡ ಸಾಹಿತ್ಯ ಕೃತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಅನುವಾದಗೊಳ್ಳಬೇಕಾದ ವಿಚಾರವನ್ನು ಒತ್ತಿ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

# ಅಧ್ಯಾಯ -ಆರು

## ಭಾಷೆ ಮತ್ತು ಸಂಸ್ಕೃತಿಗಳ ತಾತ್ವಿಕ ಸಂಬಂಧಗಳ ಹಿನ್ನೆಲೆಯಲ್ಲಿ ಭಾಷಾಂತರ ಸಮಸ್ಯೆಗಳು

# ಅಧ್ಯಾಯ – ೬

## ಭಾಷೆ ಮತ್ತು ಸಂಸ್ಕೃತಿಗಳ ತಾತ್ವಿಕ ಸಂಬಂಧಗಳ ಹಿನ್ನೆಲೆಯಲ್ಲಿ ಭಾಷಾಂತರದ ಸಮಸ್ಯೆಗಳು

ಭಾಷೆ ಮತ್ತು ಸಂಸ್ಕೃತಿಗಳ ಸಂಬಂಧಗಳನ್ನು ಬಿಡಿಸಿ ಹೇಳುವುದು ಕಷ್ಟ ಸಾಧ್ಯವಾದ ಮಾತು. ಮೇಲ್ನೋಟಕ್ಕೆ ಇವೆರಡು ಬೇರೆ ಬೇರೆ ಎಂಬ ಭಾವನೆ ಬಂದರೂ ಸಂಸ್ಕೃತಿಯಿಂದ ಭಾಷೆಯನ್ನು ಬೇರ್ಪಡಿಸಿ ತೋರಿಸಲಾಗದು. ಯಾಕೆಂದರೆ ಸಂಸ್ಕೃತಿಯ ಪ್ರತಿನಿಧಿಯಾಗಿಯೇ ಭಾಷೆ ಕಾರ್ಯನಿರ್ವಹಿಸುತ್ತದೆ. ಭಾಷೆ ಎಂದರೆ ಏನು ಮತ್ತು ಅದರ ಬಳಕೆಯಲ್ಲಿ ವ್ಯತ್ಯಯಗಳಾದಲ್ಲಿ ಏನು ಅನಾಹುತಗಳಾಗಬಹುದು ಎಂಬುದಕ್ಕೆ ಬಿದರಹಳ್ಳಿ ನರಸಿಂಹ ಮೂರ್ತಿ ಇವರ ಈ ಮಾತುಗಳನ್ನು ಗಮನಿಸಬಹುದಾಗಿದೆ. "ಭಾಷೆಯ ಮಹಾಬೆಡಗು, ಭಾಷೆಯ ಹುಟ್ಟು ತನ್ನ ಸುತ್ತ ನಿಗೂಢ ಬೆಡಗನ್ನು ಸುತ್ತಿಕೊಂಡಿದೆ. ಭಾಷೆ ಎಂಬುದು ಅದಿಮ ಮಾನುಷ – ಮನುಷ್ಯರು ಆಕಸ್ಮತ್ತಾಗಿ ಕಂಡುಕೊಂಡ ಸಂಸ್ಕೃತಿಯ ಒಡವೆ. ಎಂದು ಜೀವ ವಿಕಾಸ, ಸಮಾಜ ವಿಕಾಸ ಮುಂತಾದ ಆಧುನಿಕ ಪುರಾಣಗಳು ನಂಬಿಸಲು ಹವಣಿಸುತ್ತವೆ. ಹಾಗಲ್ಲ ಶಿವನ ಡಮರಿನ ನಾದದ ಹನಿಗಳೇ ಧ್ವನಿಮಾಗಳಾಗಿ ಸಿಡಿದು ಶಬ್ಧ ರೂಪಗೊಂಡು, ಮುಂದೆ ಅಕ್ಷರಗಳ ಅವತಾರವಾಯಿತು. ಎಂಬುದಾಗಿ ಪ್ರಾಚೀನರ ಪರಿಕಲ್ಪನೆ ಪ್ರತಿಪಾದಿಸುತ್ತದೆ. ವಸ್ತುವಿನಿಂದಲೇ ಚೈತನ್ಯ ಹುಟ್ಟಿದ್ದು ಎನ್ನುವವರಿಗೆ ಅದು ಸರಿ ಎನ್ನಿಸಿದರೆ, ಚೈತನ್ಯದಿಂದ ವಸ್ತು ಪ್ರಪಂಚ ರೂಪ ತಾಳೀತು. ಎನ್ನುವವರಿಗೆ ಇದು ಸರಿ ಎನ್ನಿಸುತ್ತದೆ. ಇರಲಿ, ಧಾರ್ಮಿಕ ಶ್ರದ್ಧೆ ಮತ್ತು ವೈಜ್ಞಾನಿಕ ಶೃದ್ಧೆಗಳ ನಡುವೆ ಬಹುಶ: ಎರಡರಿಂದಲೂ ಸಮಾನ ಅಂತರದಲ್ಲಿ, ಭಾಷೆಯ ನಗ್ನ ಸತ್ಯದ ಬೆಡಗಿನ ಗುಟ್ಟು ಅಡಗಿದೆ ಎಂದಿಟ್ಟುಕೊಳ್ಳೋಣ, ಸದ್ಯಕ್ಕೆ ಭಾಷೆಯನ್ನು ಅರ್ಥಮಾಡಿಕೊಳ್ಳಲು, ಮೊದಲು ಇದರ ಇತಿಮಿತಿಗಳಿಗೆ ಚೆಕ್ಕ ಬಂದಿ ಹಾಕಬೇಕು. ವಿಜ್ಞಾನಾತ್ಮಕ ಅನುಭಾವಿ ಅಲ್ಲಮ "ಭಾಷೆ ಕಿರಿದು" ಎಂದರೆ ಅನುಭಾವಿಕ ವಿಜ್ಞಾನಿ ಐನಸ್ಟೈನ್ "A senson by congnizable and reproducible sign"ಎಂದು ಶಬ್ಧದ ಮಿತಿಗೆ ಗೆರೆ ಹೊಡೆಯುತ್ತಾನೆ. ಇಬ್ಬರಿಗೂ "ಆಯುಷ್ಯ ಹಿರಿದು" ಎಂಬ ಸತ್ಯದ ಅರಿವಿದೆ.

ಇಬ್ಬರಿಗೂ ಭಾಷೆಯ ಬಳಕೆ ಹದ ತಪ್ಪಿದರೆ "ಪ್ರಾಣ ಘಾತಕ"ವಾಯಿತು ಎಂಬ ಆತಂಕವಿದೆ. ಇದು ಭಾಷೆಯನ್ನು ಹಿಡಿದು ಹೋಗುವವರಿಗೆ ಸಿಗುವ ಬೆಡಗು" (ಕನ್ನಡ ಅಧ್ಯಯನ; ಸಂಪುಟ 13; ಸಂಚಿಕೆ 2; ಪು. ೮)

ಹೀಗೆ ಭಾಷೆ ಎಂಬುದು ಸಂಸ್ಕೃತಿಯ ಒಡವೆ ಎಂದು ಗುರುತಿಸಲ್ಪಟ್ಟಿದ್ದು ಇಂತಹ ಬೆಡಗನ್ನು ಹೊಂದಿರುವ ಭಾಷೆಯಲ್ಲಿಯೇ ಸಂಸ್ಕೃತಿಯೂ ಅಡಗಿರುವಂತದ್ದು. ಹೀಗಾಗಿ ಭಾಷೆ ಮತ್ತು ಸಂಸ್ಕೃತಿ ಇವೆರಡೂ ಒಟ್ಟೊಟ್ಟಾಗಿ ಬೆಳೆದು ಬಂದ ಪ್ರಕ್ರಿಯೆಗಳಾಗಿವೆ ಎಂದೇ ಹೇಳಬೇಕಾಗುತ್ತದೆ. ಭಾಷೆ ಎಂಬುದು ನಮ್ಮ ವಿಚಾರಗಳ, ಆಚಾರಗಳ, ರೀತಿ ನೀತಿಗಳ ಒಟ್ಟಾರೆ ಜೀವನ ಶೈಲಿಯನ್ನೇ ಪ್ರತಿನಿಧಿಸುವುದರಿಂದ ಇವೆಲ್ಲವೂ ಸಂಸ್ಕೃತಿಯ ಭಾಗವೇ ಆಗಿರುವುದರಿಂದ ಭಾಷೆ ಮತ್ತು ಸಂಸ್ಕೃತಿಗಳು ಒಂದನ್ನೊಂದು ಬೇರ್ಪಡಿಸಲಾರದ ವಿಚಾರಗಳಾಗಿವೆ. ನಾವು ಆಡುವ, ಬಳಸುವ ಹಾಗೂ ಬರೆಯುವ ಭಾಷೆಯಲ್ಲಿ ಉಪಯೋಗಿಸುವ ನುಡಿಗಟ್ಟುಗಳಾಗಿರಬಹುದು, ಶೈಲಿಯಿರಬಹುದು, ಆಯಾಯಾ ಪ್ರದೇಶಕ್ಕೆ ಸೀಮಿತವಾಗಿರುವಂತಹ ಶಬ್ಧಗಳಿರಬಹುದು. – ಇವೆಲ್ಲವೂ ಅಲ್ಲಿನ ಸಂಸ್ಕೃತಿಯನ್ನೇ ಪ್ರತಿನಿಧಿಸುವಂತಹವುಗಳಾಗಿರುತ್ತವೆ. ಯಾಕೆಂದರೆ ಒಂದು ಪ್ರದೇಶಕ್ಕೆ ಸೀಮಿತವಾದ ನುಡಿಗಟ್ಟುಗಳನ್ನು ಇನ್ನೊಂದು ಪ್ರದೇಶಲ್ಲಿ ಬಳಸಿದಾಗ ಅದನ್ನು ಸಮರ್ಪಕವಾಗಿ ಅರ್ಥೈಸಿಕೊಳ್ಳಲು ಇನ್ನೊಂದು ಪ್ರದೇಶದಲ್ಲಿನ ಜನರಿಗೆ ಸಾಧ್ಯವಾಗದೇ ಹೋಗಬಹುದು. ಇಂತಹ ಸಂದರ್ಭದಲ್ಲಿ ಅದರ ಅರ್ಥವನ್ನು ಬಿಡಿಸಿ ಹೇಳುವ ಪ್ರಯತ್ನವನ್ನು ಮಾಡಬೇಕಾದಿತು. ಈ ನಿಟ್ಟಿನಲ್ಲಿ ಆಲೋಚನೆ ಮಾಡಿದಾಗ ಒಂದು ಪ್ರದೇಶಕ್ಕೆ ಸೀಮಿತವಾದ ಭಾಷೆಯೇ ಅಲ್ಲಿನ ಪ್ರದೇಶದ ಸಂಸ್ಕೃತಿಯ ಪ್ರತಿನಿಧಿಯಾಗಿ ಗುರುತಿಸಲ್ಪಡುತ್ತದೆ ಎನ್ನುವ ವಿಚಾರವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

'ಸಂಸ್ಕೃತಿ' ಎಂಬ ಪದದ ಅರ್ಥವನ್ನು ತಿಳಿಯುವಲ್ಲಿ ಎನ್.ಎಸ್. ಶ್ರೀಧರ ಮೂರ್ತಿಯವರ ಅಭಿಪ್ರಾಯವನ್ನು ಗಮನಿಸಬಹುದಾಗಿದೆ. "ಸಂಸ್ಕೃತಿಕ ಅಧ್ಯಯನ ಭಾಷಾತೀತವಾದದ್ದು ಎಂಬುದು ಎಷ್ಟು ನಿಜವೋ ಭಾಷೆಯ ಅಂಗವೂ ಹೌದು ಎನ್ನುವುದು ಅಷ್ಟೇ ನಿಜ. ಮೇಲ್ನೋಟಕ್ಕೆ ಈ ವಾದ ವಿರೋಧಾಭಾಸ ಎನ್ನಿಸಬಹುದು. ಆದರೆ 'ಸಂಸ್ಕೃತಿ' ಎಂಬ ಪದದ ವಿಶಾಲತೆ ಕಡೆಗೆ ಬೆಳಕು ಚೆಲ್ಲಿದರೆ ನನ್ನ ಉದ್ದೇಶ ಸ್ಪಷ್ಟವಾಗಬಹುದು. 'ಸಂಸ್ಕೃತಿ'ಯ ಕುರಿತು ಕನ್ನಡದಲ್ಲಿ ಮೊದಲು ವ್ಯಾಖ್ಯನ ಮಾಡಿದ್ದು 'ಡಿ.ವಿ.ಜಿ.'ಯವರು. ಅವರು ಇಂಗ್ಲೀಷಿನ 'ಕಲ್ಚರ್' ಎಂಬ ಪದ ಹೇಗೆ ಬಳಕೆಯಾಗುತ್ತಿದೆ ಎಂಬುದನ್ನು ಉದಾಹರಿಸಿ (ಎಗ್ರಿಕಲ್ಚರ್, ಎಫಿಕಲ್ಚರ್ ಇತ್ಯಾದಿ). ಮ್ಯಾಥ್ಯೂ ಅರ್ನಾಲ್ಡನ

'ಕಲ್ಚರ ಅರಿಕ್ ಅನಾರ್ಕಿ', ಗ್ರಂಥವನ್ನು ನೆಲೆಯೂರಿಸಿ 'ಸಂಸ್ಕೃತ' ಎಂಬ ಪದ 'ಸಂಸ್ಕಾರ' ಎಂಬ ಪದದ ಸಹವಾಸದಿಂದ ಸಂಸ್ಕಾರ ಪಡೆದ ಭಾಷೆ 'ಸಂಸ್ಕೃತ'ಎಂಬುದರ ಧಾರಕವೆಂಬ ಅಭಿಮಾನವನ್ನು ಟಿಂಕಿಸುತ್ತದೆ. ಅವರ ದೃಷ್ಟಿಯಲ್ಲಿ ಸಂಸ್ಕೃತಿ ಒಳಿತಿನ ಸಾಕಾರ ರೂಪ, ಅದು ಕಹಿಯಾಗದಂತೆ ಸತ್ಯ ಹೇಳುವ ತಾಕತ್ತು......" (ಕನ್ನಡ ಅಧ್ಯಯನ; ಸಂಪುಟ 13; ಸಂಚಿಕೆ 2; ಪು. ೭೧)

ಹೀಗೆ ಭಾಷೆ ಮತ್ತು ಸಂಸ್ಕೃತಿಗಳು ಒಂದನ್ನೊಂದು ಅವಲಂಬಿತವಾಗಿರುವ ಹಾಗೂ ಒಂದರಿಂದ ಇನ್ನೊಂದನ್ನು ಬೇರ್ಪಡಿಸಲಾರದಂತಹ ವಿಚಾರವೂ ಹೌದು. ಯಾವ ರೀತಿಯಲ್ಲಿ ಭಾಷೆ ಮತ್ತು ಸಂಸ್ಕೃತಿಗಳು ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಹೊಂದಿರುತ್ತವೆಯೋ ಅದೇ ರೀತಿಯಲ್ಲಿ ಭಾಷೆ ಹಾಗೂ ಸಾಹಿತ್ಯಗಳಿಗೂ ಅವಿನಾಭಾವ ಸಂಬಂಧವಿರುವುದನ್ನು ಗುರುತಿಸಬಹುದಾಗಿದೆ. ಸಾಹಿತ್ಯ ಎಂಬುದು ಕೂಡ ಒಂದು ಪ್ರದೇಶದ, ಒಂದು ಪರಿಸರದ ಸಂಸ್ಕೃತಿಯನ್ನೇ ಪ್ರತಿನಿಧಿಸುವಂತಹದ್ದಾಗಿದ್ದು ಅಲ್ಲಿನ ಭಾಷೆಯ ಮುಖೇನ ಆ ಪರಿಸರದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ ಎಂಬುದೂ ಸತ್ಯವಷ್ಟೇ! ಸಾಹಿತ್ಯ ಸಂಸ್ಕೃತಿಯನ್ನು ಕಟ್ಟಿಕೊಡುವ ಕಾಯಕವನ್ನು ಮಾಡುತ್ತದೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಸಾಹಿತ್ಯ ಎಂದರೆ ಇಂಗ್ಲಿಷನಲ್ಲಿ Mirror of life ಎನ್ನುವ ಮಾತಿದೆ. ಭಾಷೆ ಎಂದರೆ Dress of thought ಎಂಬ ಮಾತೂ ಇದೆ ಇದನ್ನು ಗಮನಿಸಿದಾಗ ಒಂದು ಪ್ರದೇಶದ ಸಂಸ್ಕೃತಿಯನ್ನು ಹೆಜ್ಜೆ ಹೆಜ್ಜೆಗೆ ಅತೀ ಹತ್ತಿರದಿಂದ ವೀಕ್ಷಿಸಿ ಅದೆಲ್ಲವನ್ನು ತನ್ನ ಕೃತಿಯಲ್ಲಿ ವ್ಯಕ್ತ ಪಡಿಸಲು ಸಾಹಿತಿಯಾದವನು ಪ್ರಯತ್ನಿಸುತ್ತಾನಾದ್ದರಿಂದ ಅದು ಆ ಕೃತಿಯ ಸೊಬಗನ್ನು, ಸಾರ್ಥಕತೆಯನ್ನು ಹೆಚ್ಚಿಸುತ್ತದೆ. ಮಾತ್ರವಲ್ಲದೆ ಅಂತಹ ಕೃತಿಯೊಂದು ಸಾಹಿತ್ಯಿಕವಾದ, ಸಾಂಸ್ಕೃತಿಕವಾದ ಅಂಶಗಳನ್ನು ಒಳಗೊಂಡ ಕೃತಿಯಾಗಿ ಹೊರಹೊಮ್ಮುತ್ತದೆ. ಇದರಿಂದ ಭಾಷೆ, ಸಂಸ್ಕೃತಿ ಮತ್ತು ಸಾಹಿತ್ಯ ಒಂದನ್ನೊಂದು ಅಪ್ಪಿಕೊಂಡಿರುವ ಹಾಗೂ ಒಂದಕ್ಕೊಂದು ಅವಿನಾಭಾವ ಸಂಬಂಧವನ್ನು ಹೊಂದಿರುವ ವಿಚಾರಗಳಾಗಿವೆ. ಈ ಹಿನ್ನಲೆಯಲ್ಲಿ ಆಲೋಚನೆ ಮಾಡಿದಾಗ ಶಿವರಾಮ ಕಾರಂತರು ಒಬ್ಬ ಪ್ರಾದೇಶಿಕ ಕಾದಂಬರಿಕಾರರಾಗಿ ಬೆಳೆದು ಬಂದವರು. ತಮ್ಮ ಕಾದಂಬರಿಗಳಲ್ಲಿ ಕರ್ನಾಟಕದ ಕರಾವಳಿಯ ಪರಿಸರ, ಅಲ್ಲಿನ ಜನಾಂಗ, ಅವರ ಆಚರಣೇಗಳು, ನಡೆನುಡಿ, ಆಹಾರ ಶೈಲಿ, ಬಳಸುವ ನುಡಿಗಟ್ಟುಗಳು, ಗಾದೆ ಮಾತುಗಳು ಇತ್ಯಾದಿಗಳು ಕರ್ನಾಟಕ ಕರಾವಳಿ ಪ್ರದೇಶದ ಪ್ರಾದೇಶಿಕತೆಯನ್ನು ಪ್ರತಿನಿಧಿಸುವ ಸಾಂಸ್ಕೃತಿಕ ಅಂಶಗಳಾಗಿವೆ. ತಮ್ಮ

ಕಾದಂಬರಿಗಳ ಮೂಲಕ ಕಾರಂತರು ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಸಂಸ್ಕೃತಿಯನ್ನು ಕಟ್ಟಿಕೊಡುವ ಮಹತ್ವದ ಪ್ರಯತ್ನವನ್ನು ಮಾಡಿದ್ದಾರೆ. ಇಂತಹ ವೈಶಿಷ್ಟ್ಯತೆಯನ್ನು ಹೊಂದಿರುವ ಕಾರಂತರ ಕಾದಂಬರಿಗಳು ಭಾರತದ ಇನ್ನಿತರ ಕೆಲವು ಭಾಷೆಗಳಿಗೂ ಹಾಗೂ ವಿದೇಶಿ ಭಾಷೆಗೂ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ. ಕನ್ನಡದ ಕಾದಂಬರಿಗಳಲ್ಲಿ ಇತರ ಭಾಷೆಗೆ ಅತಿಹೆಚ್ಚು ಸಂಖ್ಯೆಯಲ್ಲಿ ಅನುವಾದಗೊಂಡ ಕಾದಂಬರಿಗಳಲ್ಲಿ ಕಾರಂತರ ಕಾದಂಬರಿಗಳೇ ಹೆಚ್ಚಿನ ಪ್ರಮಾಣದಲ್ಲಿವೆ ಎಂಬುದು ತಿಳಿದ ವಿಚಾರ. ಇಲ್ಲಿ ವಿಶೇಷವಾಗಿ ಗುರುತಿಸಬೇಕಾದ ಅಂಶವೆಂದರೆ ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುವ ಕಾರಂತರ ಕಾದಂಬರಿಗಳು ಇತರ ಭಾಷೆಗೆ ಅನುವಾದ ಗೊಂಡಿರುವುದರಿಂದ ಇದು ವಿಶೇಷವೆನಿಸುತ್ತುದೆ. ಈಗಾಗಲೇ ಚರ್ಚಿತವಾದಂತೆ ಭಾಷೆಗೂ ಸಂಸ್ಕೃತಿಗೂ ಹಾಗೂ ಸಾಹಿತ್ಯಕ್ಕೂ ಬಿಡಿಸಲಾರದ ನಂಟು ಇರುವುದು ಒಪ್ಪಿತವಾದ ವಿಚಾರ. ಒಂದು ಪ್ರದೇಶದಲ್ಲಿ ಆಡುವ ಭಾಷೆಯೇ ಸಂಸ್ಕೃತಿ ಅನ್ನಿಸಿಕೊಳ್ಳುವುದರಿಂದ ಭಾಷೆ ಮತ್ತು ಸಂಸ್ಕೃತಿಗಳ ನಡುವೆ ಹೊಕ್ಕುಳ ಬಳ್ಳಿಯ ಸಂಬಂಧವಿದೆ. ಒಂದನ್ನು ಇನ್ನೊಂದರಿಂದ ಬಿಡಿಸಲಾಗದು. ಹಾಗೂ ಒಂದು ಪ್ರದೇಶದ ಸಂಸ್ಕೃತಿಯ ವಾಹಕವಾಗಿ ಆ ಪ್ರಾದೇಶಿಕ ಭಾಷೆಯೇ ಕಾರ್ಯನಿರ್ವಹಿಸುವುದರಿಂದ ಪ್ರಾದೇಶಿಕ ಭಾಷೆ ಇಲ್ಲದೇ ಪ್ರಾದೇಶಿಕತೆಯನ್ನು ಇನ್ನೊಂದು ಭಾಷೆಗೆ ಪರಿಚಯಿಸುವುದು ಕಷ್ಟಸಾಧ್ಯ. ಎರಡು ಸಂಸ್ಕೃತಿಗಳಲ್ಲಿ ಸಾಮ್ಯ ಇದ್ದಲ್ಲಿ ಮಾತ್ರ ಇದು ಸಾಧ್ಯವಾಗಬಹುದೇನೋ! ಇಲ್ಲದಿದ್ದಲ್ಲಿ ಅನುವಾದ ಸಾಹಿತ್ಯದಲ್ಲಿ ಪ್ರಾದೇಶಿಕ ಕೃತಿಯೊಂದನ್ನು ಇನ್ನೊಂದು ಭಿನ್ನ ಸಂಸ್ಕೃತಿಯನ್ನು ಹೊಂದಿರುವ ಭಾಷೆಗೆ ಸಮರ್ಪಕವಾಗಿ ಅನುವಾದಿಸುವುದು ಸುಲಭವಲ್ಲ. ಅದರಲ್ಲೂ ವಿದೇಶಿ ಭಾಷೆಯಾದ ಇಂಗ್ಲೀಷಗೆ ಅನುವಾದಿಸುವುದು ಕಷ್ಟಸಾಧ್ಯವಾದ ವಿಚಾರವೇ ಸರಿ. ಇನ್ನೊಂದು ಪ್ರಮುಖವಾದ ವಿಚಾರವೆಂದರೆ ಸಂಸ್ಕೃತಿಯನ್ನು ಒಳಗೊಂಡೇ ಭಾಷೆ ಇರುವುದರಿಂದ ಅನುವಾದ ಮಾಡುವಾಗ ಸಂಸ್ಕೃತಿಯನ್ನು ಒಡೆಯುವ ಪ್ರಕ್ರಿಯೆ ಉಂಟಾಗಿ ಅನುವಾದವೆಂಥರೆ ಭಾಷೆ ಮತ್ತು ಸಂಸ್ಕೃತಿಗಳ ನಡುವಿನ ಸಂಬಂಧವನ್ನು ಬಿಡಿಸುವ ಪ್ರಯತ್ನವೂ ಹೌದು ಎನ್ನಬೇಕಾಗುತ್ತದೆ. ಯಾಕೆಂದರೆ ಒಂದು ಸಂಸ್ಕೃತಿಯನ್ನು ಒಳಗೊಂಡಿರುವ ಭಾಷೆಯ ಕೃತಿಯನ್ನು ಇನ್ನೊಂದು ಸಂಸ್ಕೃತಿಯನ್ನು ಒಳಗೊಂಡಿರುವ ಭಾಷೆಗೆ ಅನುವಾದಿಸುವುದು ಸಹಜವಾಗಿ ಸಾಧ್ಯವಾಗಲಾರದು. ಸಂಸ್ಕೃತಿಯಿಲ್ಲದೇ ಭಾಷೆಯಿಲ್ಲ ಈ ನಿಟ್ಟಿನಲ್ಲಿ ಕಾರಂತರ ಕಾದಂಬರಿಗಳನ್ನೇ ಗಮನಿಸುವುದಾದರೆ ಕರಾವಳಿ ಕರ್ನಾಟಕದ ಸಂಸ್ಕೃತಿಯನ್ನು ಇದು ಪ್ರತಿನಿಧಿಸುತ್ತವಾದ್ದರಿಂದ ಕಾದಂಬರಿಗಳಲ್ಲಿ ಬರುವ ಚಿತ್ರಣಗಳು, ನಿಸರ್ಗಸಂಬಂಧದ

ವಿಚಾರಗಳು, ಸಾಮಾಜಿಕ ಚಿತ್ರಣಗಳು, ಜನರ ಆಡುನುಡಿ, ಉಡುಗೆ ತೊಡುಗೆಗಳು, ಆಹಾರ ಪದ್ಧತಿ, ಆಚರಣೆಗಳು, ಹಬ್ಬ ಹರಿದಿನಗಳು ಇತ್ಯಾದಿಗಳನ್ನು ವಿದೇಶಿ ಸಂಸ್ಕೃತಿಯನ್ನು ಒಳಗೊಂಡಿರುವ ಇಂಗ್ಲಿಷನ ಭಾಷೆಯಲ್ಲಿ ವ್ಯಕ್ತಪಡಿಸುವುದು ಸಾಧ್ಯವಾಗಲಾರದು. ಇಂಗ್ಲೀಷನ ಪರಿಸರದಲ್ಲಿ ಇಂತಹ ಕರಾವಳಿ ಬದುಕಿನ ಆಚರಣೆಗಳು ಸಂಸ್ಕೃತಿ ಸಂಬಂಧದ ಅಂಶಗಳು ಅಪರಿಚಿತವಾದವುಗಳು. ಅನುವಾದಕನು ಮೂಲಕೃತಿಯ ವಸ್ತು ವಿಚಾರಗಳನ್ನು ಭಿನ್ನ ಸಂಸ್ಕೃತಿಯ ಪ್ರತಿನಿಧಿಯಾದ ಇನ್ನೊಂದು ಭಾಷೆಯಲ್ಲಿ ಅನುವಾದಿಸುವಾಗ ಅಸಹಾಯಕತೆಯನ್ನು ಎದುರಿಸಬೇಕಾಗುತ್ತದೆ. ಈ ಎರಡು ಸಂಸ್ಕೃತಿಗಳಲ್ಲಿ ಸಾಮ್ಯದ ಆಂಶಗಳು ಇದ್ದಾಗ ಮಾತ್ರ ಅನುವಾದಿಸುವುದು ತಕ್ಕಮಟ್ಟಿಗೆ ಸಾಧ್ಯವಾಗಬಹುದೇನೋ! ಆದರೆ ಒಂದು ಪ್ರದೇಶಕ್ಕೆ ಸೀಮಿತವಾದ ವಿಚಾರಗಳು ಅಲ್ಲಿನ ಉತ್ಕೃಷ್ಟತೆ, ವಿಶೇಷತೆ, ಸಂಸ್ಕೃತಿ ಸಂಬಂಧದ ಅಂಶಗಳು ಇನ್ನೊಂದು ಪ್ರದೇಶಕ್ಕೆ ಪರಿಚಿತವಾಗಬೇಕು. ಇದರಿಂದ ಈ ಎರಡು ಸಂಸ್ಕೃತಿಗಳ ಮಧ್ಯದಲ್ಲಿ ಇರುವ ಸಾಮ್ಯ ಹಾಗೂ ಭಿನ್ನತೆಗಳ ಒಂದು ತಾಲನಿಕ ಅಧ್ಯಯನ ಸಾಧ್ಯವಾಗುತ್ತದೆ. ಅನುವಾದದ ಮೂಲಕ ಒಂದು ರೀತಿಯಲ್ಲಿ ಸಾಂಸ್ಕೃತಿಕವಾದ ವಿನಿಮಯ ಏರ್ಪಟ್ಟಂತಾಗುತ್ತದೆ. ಮಾತ್ರವಲ್ಲ ಇದರಿಂದ ಸಾಂಸ್ಕೃತಿಕ ಕ್ಷೇತ್ರದ ಅಗಲೀಕರಣವನ್ನು ಸಾಧಿಸಿದಂತಾಗುತ್ತದೆ. ಈ ಎಲ್ಲ ಹಿನ್ನಲೆಗಳಿಂದ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದ ಸಾಕಷ್ಟು ಆಗಬೇಕು ಮತ್ತು ಭಿನ್ನ ಭಿನ್ನ ಸಂಸ್ಕೃತಿಗಳ ಪರಿಚಯ ಜಾಗತಿಕ ಮಟ್ಟದಲ್ಲಿ ನಡಯಬೇಕು ಎಂಬುದು ಅಪೇಕ್ಷಣೀಯವಾದ ವಿಚಾರ. ಆದರೆ ಮೂಲಭೂತವಾಗಿ ಭಾಷೆ ಮತ್ತು ಸಂಸ್ಕೃತಿಗಳು ತಮ್ಮದೇ ಆದ ವಿಶಿಷ್ಟತೆಯ ಜೊತೆಗೆ ಮಿತಿಗಳನ್ನು ಹೊಂದಿರುವುದರಿಂದ ಅನುವಾದದಲ್ಲಿ ತೊಡಕುಗಳನ್ನು ಎದುರಿಸುವುದು ಸಹಜವಾಗಿದೆ ಇನ್ನೊಂದು ವಿಚಾರವೆಂದರೆ ಸಾಂಸ್ಕೃತಿಕ ಮಹತ್ವನ್ನು ಸಾರುವ, ಪ್ರಾದೇಶಿಕತೆಯನ್ನು ಪ್ರತಿನಿಧಿಸುವ ಕೃತಿಗಳನ್ನು, ಕಾದಂಬರಿಗಳನ್ನು ಅನುವಾದಿಸುವ ಸಂದರ್ಭದಲ್ಲಿ ಎರಡು ರೀತಿಯಲ್ಲಿ ಸಮಸ್ಯೆಗಳು ಉದ್ಭವಿಸುತ್ತದೆ. ಸಂಸ್ಕೃತಿಯನ್ನು ಪ್ರತಿನಿಧಿಸುವ ಭಾಷೆಯ ಮಿತಿ ಒಂದಾದರೆ, ಎರಡನೆಯದ್ದು ಭಾಷಾಂತರಕಾರನು ಹೊಂದುರುವ ಭಾಷಿಕ ಮಿತ. ಭಾಷೆಗೆ ತನ್ನದೇ ಆದ ಮಿತಿ ಇರುವುದರಿಂದ ಅನುವಾದಿಸುವ ಸಂದರ್ಭದಲ್ಲಿ ಭಾಷೆಯಲ್ಲಿ ಸಾಕಷ್ಟು ಸಂವಾದಿ ಶಬ್ಧಗಳ, ಸಂಸ್ಕೃತಿಕತೆಯನ್ನು ಪ್ರತಿನಿಧಿಸುವ ಶಬ್ಧಗಳ ಕೊರತೆಯನ್ನು ಅನುವಾದಕ ಅನುಭವಿಸಬೇಕಾಗುತ್ತದೆ. ಇದು ಭಾಷೆಯ ಮಿತಿಗೆ ಸಂಬಂಧಿಸಿದ ವಿಚಾರವಾದರೆ ಎರಡನೇಯ ಸಮಸ್ಯೆಯೆಂದರೆ ಭಾಷಾಂತರಕಾರನ ಮಿತಿಗೆ ಸಂಬಂಧಿಸಿದ್ದು. ಭಾಷಾಂತರಕಾರನಿಗೂ ಕೂಡ ಅನುವಾದಿಸುವ

ಭಾಷೆಯಲ್ಲಿ ಸಾಕಷ್ಟು ಪಾಂಡಿತ್ಯ, ಆ ಭಾಷೆಯ ಪರಿಪೂರ್ಣ ಅರಿವು ಹಾಗೂ ಅಲ್ಲಿನ ಸಾಂಸ್ಕೃತಿಯ ಸಂಪೂರ್ಣ ಅರಿವು ಇರಬೇಕಾಗುತ್ತದೆ. ಇದು ಎಲ್ಲ ಸಂದರ್ಭಗಳಲ್ಲಿ ಸಾಧ್ಯವಾಗುವುದಿಲ್ಲ. ಉದಾಹರಣೆಗೆ ಕರಾವಳಿ ಕರ್ನಾಟಕದ ಸಂಪೂರ್ಣ ಅರಿವಿರುವ ಭಾಷಾಂತರಕಾರನಿಗೆ ಕಾರಂತರ ಕಾದಂಬರಿಗಳನ್ನು ಇಂಗ್ಲಿಷ ಭಾಷೆಗೆ ಅನುವಾದಿಸುವ ಸಂದರ್ಭದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ, ಇಂಗ್ಲಿಷ ಭಾಷೆಯ ಸಂಪೂರ್ಣ ಅರಿವು, ಅಲ್ಲಿನ ನುಡಿಗಟ್ಟುಗಳ ಬಳಕೆ ಇತ್ಯಾದಿಗಳ ಕುರಿತು ಸಂಪೂರ್ಣವಾದ ಜ್ಞಾನವನ್ನು ಹೊಂದಿರಬೇಕಾಗುತ್ತದೆ. ಇದು ಭಾಷಾಂತರಕಾರನಿಗಿರುವ ಮಿತಿ. ಈ ಎರಡು ಮಿತಿಗಳನ್ನು ಅನುಲಕ್ಷಿಸಿಯೇ ಭಾಷಾಂತರವನ್ನು ವಿಶ್ಲೇಷಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಕಂಡು ಬರುವ ಇನ್ನೊಂದು ಮುಖ್ಯವಾದ ವಿಚಾರವೆಂದರೆ ಅನುವಾದದ ಪ್ರಕ್ರಿಯೆಲ್ಲಿ ಉದ್ಭವಿಸುವ ಸಾಂಸ್ಕೃತಿಕ ತೊಡಕುಗಳು ಒಂದು ದೇಶದ ಒಳಗಡೆ ಇರುವ ಭಾಷೆಗಳ ಮಧ್ಯದಲ್ಲಿ ಭಾಷಾಂತರವಾದಾಗಲೂ ಕಂಡು ಬರುತ್ತವೆ. ಉದಾಹರಣೆಗೆ ಕನ್ನಡದಿಂದ ಇತರ ಸಹೋದರ ಭಾಷೆಗಳಾದ ತಮಿಳು, ತೆಲುಗು ಮಲೆಯಾಳಂ, ತುಳು ಮುಂತಾದ ಭಾಷೆಗಳಿಗೆ ಅನುವಾದಗೊಂಡಾಗಲೂ ಇಂತಹ ಸಮಸ್ಯೆಗಳನ್ನು ಎದುರಿಸುತ್ತೇವಾದರೂ ಕರ್ನಾಟಕದ ಭಾಷೆಯಿಂದ ವಿದೇಶಿ ಭಾಷೆಯಾದ ಇಂಗ್ಲಿಷನಂತಹ ಭಾಷೆಗೆ ಅನುವಾದಗೊಂಡಾಗ ಇಂತಹ ಸಮಸ್ಯೆಗಳು ತೊಡಕುಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತವೆ. ದ್ರಾವಿಡ ಭಾಷೆಗಳಲ್ಲಿನ ಅನುವಾದ ಪ್ರಕ್ರಿಯೆಗಳನ್ನು ಕಂಡಾಗ ಈ ಅಂಶ ಹೆಚ್ಚು ಮನದಟ್ಟಾಗುತ್ತದೆ. ಕಾರಂತರ ಕಾದಂಬರಿಗಳಿಗೆ ಸೀಮಿತಪಡಿಸಿ ಹೇಳುವುದಾದರೆ ಕಾರಂತರ ಕಾದಂಬರಿಗಳು ಇತರ ದ್ರಾವಿಡ ಭಾಷೆಗಳಿಗೆ ಅನುವಾದಗೊಂಡಿರುವುದನ್ನು ಹಾಗೂ ಇಂಗ್ಲಿಷ ಭಾಷೆಗೆ ಅನುವಾದವಾದಗೊಂಡ ಅವೇ ಕೃತಿಗಳನ್ನು ಅವಲೋಕಿಸಿದಾದ ಭಾಷಾಂತರಕಾರನಿಗೆ ದ್ರಾವಿಡ ಭಾಷೆಗಳಿಗೆ ಅನುವಾದಿಸುವಾಗ ಎದುರಿಸಿದ ಸಾಂಸ್ಕೃತಿಕ ತೊಡಕುಗಳ ಪ್ರಮಾಣ ಕಡಿಮೆಯೇ ಎಂದು ಹೇಳಬಹುದು. ಶಿವರಾಮ ಕಾರಂತರ 'ಚೋಮನದುಡಿ' ಕಾದಂಬರಿಯ ತುಳು ಅನುವಾದವನ್ನು ಇಲ್ಲಿ ಉದಾಹರಿಸಬಹುದು. ಜತ್ತಪ್ಪರೈಗಳು ಮಾಡಿದ ಈ ಅನುವಾದವನ್ನು ಸ್ವತ: ಕಾರಂತರೇ ಮೆಚ್ಚಿಕೊಂಡಿದ್ದರಂತೆ ಮಾತ್ರವಲ್ಲ ಮೂಲಕೃತಿಗಿಂತಲೂ ಸೊಗಸಾಗಿ ಅನುವಾದ ಮೂಡಿ ಬಂದಿದೆ ಎಂದು ಹೊಗಳಿದ್ದರಂತೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕಾರಂತರ ಮೂಲ ಕಾದಂಬರಿ 'ಚೋಮನದುಡಿ'ಯಲ್ಲಿ ತುಳುನಾಡಿನ ಸಂಸ್ಕೃತಿ, ಪರಿಸರ ಸಾಮಾಜಿಕ ವಿಚಾರಗಳು ಅಡಕವಾಗಿರುವುದರಿಂದ ಇವುಗಳನ್ನು ತುಳು ಭಾಷೆಯಲ್ಲಿ ಕಟ್ಟಿಕೊಡುವುದು

ಅನುವಾದಕರಿಗೆ ಸುಲಭ ಸಾಧ್ಯವಾಗಿರಬೇಕು ಎಂಬುದು. ತುಳು ಅನುವಾದವನ್ನು ಮೆಚ್ಚಿಕೊಂಡ ಕಾರಂತರು ತಮ್ಮ ಕಾದಂಬರಿಗಳ ಇಂಗ್ಲಿಷ ಅನುವಾದದ ಬಗ್ಗೆ ತೃಪ್ತರಾಗಿರಲಿಲ್ಲ ಎಂಬುದನ್ನು ಗಮನಿಸಬೇಕು. ಪಾಶ್ಚಾತ್ಯ ಭಾಷೆಯಲ್ಲಿ ಪ್ರಾದೇಶಿಕ ಸಂಸ್ಕೃತಿಯನ್ನು ವ್ಯಕ್ತಪಡಿಸುವುದು ಅಷ್ಟೊಂದು ಸುಲಭ ಸಾಧ್ಯವಲ್ಲ ಎಂಬುದು ಇದರಿಂದ ಮನದಟ್ಟಾಗುತ್ತದೆ. ಸಾಂಸ್ಕೃತಿಕ ಸಾಮ್ಯವನ್ನು ಹೊಂದಿರುವ ಭಾಷೆಗಳ ನಡುವೆ ಭಾಷಾಂತರ ನಡೆದಾಗ ಮಾತ್ರ ಸಾಂಸ್ಕೃತಿಕ ತೊಡಕುಗಳು ಕಡಿಮೆ ಎಂಬುದು ಇದರಿಂದ ಸಾಬೀತಾಗುತ್ತದೆ.

ಈ ಎಲ್ಲಾ ಮಿತಿಗಳ ನಡುವೆಯೂ ಕಾರಂತರ ಕೆಲವೊಂದು ಕಾದಂಬರಿಗಳು ಇಂಗ್ಲೀಷ ಭಾಷೆಗೆ ಅನುವಾದಗೊಂಡಿರುವುದು ಸ್ವಾಗತಾರ್ಹವಾದ ವಿಚಾರವೇ ಸರಿ. ಕಾರಂತರ ಒಟ್ಟು ಆರು ಕಾದಂಬರಿಗಳು ಇಂಗ್ಲಿಷ ಭಾಷೆಗೆ ಅನುವಾದಗೊಂಡಿದ್ದು ಈ ಆರು ಕಾದಂಬರಿಗಳನ್ನು ಅನುವಾದಿಸುವಲ್ಲಿ ಎದುರಿಸಿದ ಸಾಂಸ್ಕೃತಿಕ ತೊಡಕುಗಳನ್ನು ಅವಲೋಕಿಸುವುದೇ ಪ್ರಸ್ತುತ ಅಧ್ಯಯನ ಉದ್ದೇಶವಾಗಿದೆ. ಮೂಲಕಾದಂಬರಿಗಳ ಅನುವಾದಿತ ಕೃತಿಗಳನ್ನು ಪರಸ್ಪರ ತುಲನೆ ಮಾಡಿ ಭಾಷೆ ಮತ್ತು ಸಂಸ್ಕೃತಿಗಳ ತಾತ್ವಿಕ ಸಂಬಂಧಗಳ ಹಿನ್ನಲೆಯಲ್ಲಿ ಅನುವಾದದಲ್ಲಿ ಉದ್ಭವಿಸುವ ಸಾಂಸ್ಕೃತಿಕ ತೊಡಕುಗಳು ಯಾವವು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಮುಖ್ಯವಾಗಿ ಪ್ರಾದೇಶಿಕತೆಗೆ ಸಂಬಂಧಿಸಿದಂತೆ ನೈಸರ್ಗಿಕ, ಸಾಮಾಜಿಕ, ಸಾಂಸ್ಕೃತಿಕ, ಭಾಷಿಕ ವಿಚಾರಗಳಿಗೆ ಸಂಬಂಧಪಟ್ಟ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಆರು ಕಾದಂಬರಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ನೈಸರ್ಗಿಕ ಅಂಶಗಳಿಗೆ ಸಂಬಂಧಿಸಿದಂತೆ :**

ಪ್ರದೇಶದ ವರ್ಣನೆ, ಅಲ್ಲಿನ ಭೌಗೋಳಿಕ ಪರಿಸರ, ಭೌಗೋಳಿಕ ವಿಶೇಷತೆ, ನೈಸರ್ಗಿಕ ಅಂಶಗಳಾದ ನದಿ, ಹಳ್ಳ, ಸರೋವರ, ಬೆಟ್ಟಗುಡ್ಡಗಳು, ಗಿರಿ–ಕಂದರಗಳು, ಕಾಡು, ಮರ–ಗಿಡ, ಬಳ್ಳಿಗಳು, ಪ್ರಾಣಿ–ಪಕ್ಷಿಗಳು, ಕ್ರಿಮಿ–ಕೀಟಗಳು ವಿವರಣೆಯ ಸಂದರ್ಭದಲ್ಲಿ ಇಲ್ಲಿನ ಪ್ರದೇಶಕ್ಕೆ, ಇಲ್ಲಿನ ಜನಾಂಗಕ್ಕೆ ಪರಿಚಿತವಾಗಿರುವ ಈ ವಿಚಾರಗಳನ್ನು ವಿದೇಶಿ ಭಾಷೆಯಲ್ಲಿ ಯಾವ ಹೆಸರಿನಿಂದ ಗುರುತಿಸಲಾಗಿದೆ ಅಥವಾ ಯಾವ ರೀತಿಯಲ್ಲಿ ಈ ವಿಚಾರಗಳು ಅನುವಾದದಲ್ಲಿ ಸಾರ್ಥಕತೆಯನ್ನು ಹೊಂದಿವೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಸಾಂಸ್ಕೃತಿಕ ವಿಚಾರಗಳಿಗೆ ಸಂಬಂಧಿಸಿದಂತೆ :**

ಉಡುಗೆ – ತೊಡುಗೆ, ಧರ್ಮ ದೇವರಗಳು, ಆಚರಣೆಗಳು, ಕೌಟುಂಬಿಕ ಸಂಬಂಧಗಳು,

ಸಂಬಂಧ ವಾಚಕಗಳು, ವಿಧಿ ವಿಧಾನಗಳು ಇವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯನ್ನು ಹೊಂದಿರುವುದರಿಂದ ಒಂದು ಪ್ರದೇಶಲ್ಲಿ ಪರಿಚಿತವಾದ ಈ ವಿಚಾರಗಳು ಇನ್ನೊಂದು ಪ್ರದೇಶದಲ್ಲಿ ಅಪರಿಚಿತವಿರಬಹುದು. ಇಂತಹ ಸಂದರ್ಭಗಳಲ್ಲಿ ಅನುವಾದದಲ್ಲಿ ಇವು ಪ್ರಕಾಟಗೊಂಡ ಬಗೆ ಹೇಗೆ ಎಂಬುವುದನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಹಾಗೂ ಇಂತಹ ತೊಡಕುಗಳ ಅನುವಾದಕರು ಮೀರಿ ನಿಂತದ್ದು ಹೇಗೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

**ಸಾಮಾಜಿಕತೆಗೆ ಸಂಬಂಧಿಸಿದಂತೆ :**

ಸಮಾಜದ ರಚನೆ, ಸಾಮಾಜಿಕ ಪದ್ಧತಿಗಳು, ಪರಂಪರೆ ಆಚಾರ-ವಿಚಾರಗಳು, ಜಾತಿ ಪದ್ಧತಿ, ವಿವಿಧ ಜಾತಿಗಳು ಅವುಗಳ ರೂಢಿ ಸಂಪ್ರದಾಯಗಳು ಬೇರೆಯ ಪ್ರದೇಶದಲ್ಲಿ ಅಪರಿಚಿತವಾದ ಸಂದರ್ಭದಲ್ಲಿ ಅನುವಾದಿಸುವುದು ಹೇಗೆ? ಎಂಬ ಹಿನ್ನಲೆಯಲ್ಲಿ ಮೂಲಕಾದಂಬರಿಗಳನ್ನು ಅನುವಾದಿತ ಕಾದಂಬರಿಗಳನ್ನು ತುಲನೆ ಮಾಡಿ ನೋಡಿ ತೊಡಕುಗಳ ಅಧ್ಯಯನ ಮಾಡಲಾಗಿದೆ.

**ಭಾಷಿಕ ರಚನೆಗೆ ಸಂಬಂಧಿಸಿದಂತೆ –**

ಪ್ರಾದೇಶಿಕ ಭಿನ್ನತೆಯನ್ನು ಹೊಂದಿರುವ ಒಂದು ಸೀಮಿತವಾದ ಪ್ರದೇಶದಲ್ಲಿ ವಾಸಿಸುವ ಜನರು ಆಡುವ ಭಾಷೆ, ಅವರ ಭಾಷೆಗಳಲ್ಲಿ ಬಳಸುವ ನುಡಿಗಟ್ಟುಗಳು, ಗಾದೆ ಮಾಡುಗಳು, ಭಾಷೆಯ ಗ್ರಾಮ್ಯ ರೂಪಗಳು – ಇನ್ನೊಂದು ವಿದೇಶಿ ಭಾಷೆಯಲ್ಲಿ ಲಭ್ಯವಾಗದೇ ಸಮಾನಂತರ ಶಬ್ದಗಳ ಕೊರತೆಯನ್ನು ಎದುರಿಸುತ್ತದೆ. ಹಾಗೂ ಮೂಲ ಪ್ರಾದೇಶಿಕ ಸೊಗಡನ್ನು ಹೊಂದಿರುವ ಈ ಭಾಷೆಯ ರಸಸ್ವಾಧ ಅನುವಾದದಲ್ಲಿ ಸಾಫಲ್ಯತೆಯನ್ನು ಗಳಿಸಕೊಂಡಿದೆಯೋ ಹೇಗೆ? ಹಾಗೂ ತೊಡಕುಗಳು ಉಂಟಾಗಿವೆಯೋ – ಈ ಕಾರಣದಿಂದಾಗಿಯೇ ಅನುವಾದ ಯಶಸ್ಸನ್ನು ಹೊಂದಿದೆಯೋ ಇಲ್ಲವೋ ಎಂಬುದರ ಅವಲೋಕನ ಮಾಡಬಹುದಾಗಿದೆ.

ಈ ವಿಭಜನೆಗಳು ಕೆಲವೊಮ್ಮ ಪರಿಸ್ಪರ ಪೂರಕವಾಗಿರುವುದರಿಂದ ಶುದ್ಧಾಂಗವಾಗಿ ಪ್ರಾದೇಶಿಕ, ನೈಸರ್ಗಿಕ ಸಾಂಸ್ಕೃತಿಕ, ಸಾಮಾಜಿಕ, ಭಾಷಿಕ ಎಂದು ಪ್ರತ್ಯೇಕಿಸಿ ವಿಶ್ಲೇಷಿಸುವುದು ಕಷ್ಟ ಸಾಧ್ಯ. ಮಾತ್ರವಲ್ಲದೇ ಸಾಂಸ್ಕೃತಿಕ ಎನ್ನುವ ಪರಿಕಲ್ಪನೆಗಳಿಗೆ ಎಲ್ಲಾ ಅಂಶಗಳು ಸೇರ್ಪಡೆಗೊಳ್ಳುವ ಸಾಧ್ಯತೆಗಳು ಇಲ್ಲದಿಲ್ಲ. ಹೀಗಾಗಿ ಈ ಮೇಲೆ ಚರ್ಚಿತವಾದ ವಿಚಾರಗಳನ್ನು ಪ್ರಮುಖ ಹಿನ್ನಲೆಯಾಗಿಟ್ಟುಕೊಂಡು ಕಾರಂತರ ಒಟ್ಟು ಆರು ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಇಂತಹ ಅಂಶಗಳನ್ನು ಮೂಲ ಕಾದಂಬರಿ ಹಾಗೂ ಅನುವಾದಿತ

ಕೃತಿಗಳನ್ನು ತುಲನೆ ಮಾಡುವ ಮೂಲಕ ಪ್ರತಿಪಾದಿಸಲಾಗಿದೆ. ಇಂತಹ ಅನೇಕ ತೊಡಕುಗಳು/ಉದಾಹರಣೆಗಳು ಎಲ್ಲಾ ಅನುವಾದಿತ ಕಾದಂಬರಿಗಳಲ್ಲೂ ಹೇರಳವಾಗಿ ಲಭ್ಯವಾಗುತ್ತವೆ. ಆದರೆ ಅಧ್ಯಯನದ ಅನುಕೂಲಕ್ಕಾಗಿ ಪ್ರತಿಯೊಂದು ಕಾದಂಬರಿಯಿಂದ ಪ್ರಾತಿನಿಧಿಕವಾಗಿ ಕೆಲವೊಂದು ಉದಾಹರಣೆಗಳನ್ನು ಚರ್ಚೆಗೆ ಆಯ್ದುಕೊಳ್ಳಲಾಗಿದೆ.

## ೧. ಮೂಲಕಾದಂಬರಿ : 'ಸರಸಮ್ಮನ ಸಮಾಧಿ'

## ಅನುವಾದ : THE SHRINE

## ಅನುವಾದಕರು : U.R. KALKUR

ಪ್ರಸುತ್ತ ಕಾದಂಬರಿಯನ್ನು ಅನುವಾದಿಸಿರುವ ಯು.ಆರ್. ಕಲ್ಕೂರ್‌ರವರು ೧೯೫೭ರಿಂದಲೂ ಪತ್ರಿಕೋದ್ಯಮದ ವೃತ್ತಿಯಲ್ಲಿದ್ದವರಾಗಿದ್ದು ಬನಾರಸ್ ಹಿಂದು ವಿಶ್ವ ವಿದ್ಯಾನಿಲಯದಿಂಧ ಇಂಗ್ಲೀಷ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದವರಾಗಿದ್ದಾರೆ. ಮೂಲಕಾದಂಬರಿಯಲ್ಲಿ ಒಟ್ಟು ೨೪ ಅಧ್ಯಾಯಗಳನ್ನು ಹೊಂದಿದ ಕೃತಿಯಾಗಿದ್ದು ಅನುವಾದದಲ್ಲಿ ಇವುಗಳನ್ನು ಕೇವಲ ೧೪ ಅಧ್ಯಾಯಗಳಿಗೆ ಅಡಕಗೊಳಿಸಲಾಗಿದೆ. ಹಾಗೂ ಮೂಲದಲ್ಲಿ ೨೪ ಅಧ್ಯಯಗಳಿಗೆ ಪ್ರತಿಯೊಂದು ಅಧ್ಯಾಯಕ್ಕೂ ಶೀರ್ಷಿಕೆಯನ್ನು ನೀಡಲಾಗಿದ್ದು ಅನುವಾದದಲ್ಲಿ ಶೀರ್ಷಿಕೆಗಳನ್ನು ನೀಡಲಾಗಿಲ್ಲ. ಮೂಲಕಾದಂಬರಿಯ ಮುನ್ನುಡಿಯಲ್ಲಿ ಕಾರಂತರು ರಜಪೂತಾನದಲ್ಲಿ ನಡೆದ ಘಟನೆಯನ್ನು ಉಲ್ಲೇಖಿಸಿ ರಜಪೂತಾನದ ರೂಪ ಕನ್ವರಳ ಸತಿ ಧ್ವಂಸ ಕಥಾನಕ 'ಸರಸಮ್ಮನ ಸಮಾಧಿ'ಯ ಮುಖ್ಯ ಆಶಯವನ್ನು ಎತ್ತಿಹಿಡಿಯುವುದನ್ನು ಪ್ರಸ್ತಾಪಿಸಿದ್ದಾರೆ. ಅನುವಾದದಲ್ಲಿ ಈ ಕುರಿತಾದ ವಿಚಾರಗಳು ಪ್ರಸ್ತಾಪವಾಗಿಲ್ಲ. ಆದರೆ ಈ ಕೃತಿಯನ್ನು ಸಂಪ್ರದಾಯದ ವಿರುದ್ಧ ಎತ್ತಿರುವ ಪ್ರತಿಭಟನೆಯ ಧ್ವನಿ ಎಂಬುದಾಗಿ ಗುರುತಿಸಿದ್ದಾರೆ.

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೧ | ಅಧ್ಯಾಯ ೧ ಪು. ೩<br>"ಜಾನಕಿಂಯು ವಸೂಲು ಮಾಡಿ ತಂದ ರೂಪಾಯಿಗಳನ್ನು ನಾಗಂದಿಗೆ ಮೇಲೆ ಇರಿಸಿ ಸ್ನಾನಕ್ಕೆ ಹೋಗಿದ್ದಳು....." | Chapter 1 P. 10<br>"She hid the money in a kitchen corner and went to bathe in the pond........" | 'ನಾಗಂದಿಗೆ' ಎಂಬ ಕನ್ನಡದ ಪ್ರಾದೇಶಿಕ ಶಬ್ದಕ್ಕೆ 'kitchen corner' ಎಂದು ಅನುವಾದಿಸಲಾಗಿದ್ದು ಮೂಲ ಪದದ ಸಾಂಸ್ಕೃತಿಕತೆಯನ್ನು ಶಕ್ತವಾಗಿ ಪ್ರತಿನಿಧಿಸುವುದಿಲ್ಲ. |
| ೦೨ | ಪು.೩<br>"ಕೇಳಿದ್ದು ಮೆತ್ತನೆಯೇ ......ಉತ್ತರ ಮಾತ್ರ 'ಉಪ್ರಳ್ಳಿ ಶೇಶ"ನ ರಾವಣನ ಕೇಕೆಂಯಲ್ಲಿಂಯೇ ದೊರೆಯಿತು....." | ಅನುವಾದಿಸಿರುವುದಿಲ್ಲ. | ಮೂಲದಲ್ಲಿ 'ಉಪ್ರಳ್ಳಿ ಸೇಶ' ಎಂದರೆ ಅಡಿ ಟಿಪ್ಪಣಿಯಲ್ಲಿ 'ಯಕ್ಷಗಾನ ಬಯಲಾಟದ ರಾಕ್ಷಸ ಭೂಮಿಕೆ ವಹಿಸುವವನೊಬ್ಬ' ಎಂಬುದಾಗಿ ವಿವರಿಸಲಾಗಿದೆ. ಇದು ಕರಾವಳಿ ಕರ್ನಾಟಕದ ಜನಪದ ಸಂಸ್ಕೃತಿಯ ಪ್ರತೀಕವಾದ ಯಕ್ಷಗಾನದ ಮಹತ್ವವನ್ನು ತಿಳಿಸುತ್ತದೆ. ಆದರೆ ಅನುವಾದದಲ್ಲಿ ಈ ವಿಚಾರವನ್ನು ಕೈ ಬಿಡಲಾಗಿದೆ. |
| ೦೩ | ಪು.೪<br>"ಈಗ ರಾವಣನ ಅಡಗಿದ್ದ, ಇನ್ನೊಂಭತ್ತು ಕಂಠಗಳು ಸೇರಿದವು". | P. 10<br>This only provoked a fresh volley from Thimmappayya who roared as Ravana | ಭಾರತದ ಪುರಾಣಗ್ರಂಥ, ಮಹಾಕಾವ್ಯಗಳ ಬಗ್ಗೆ ಅರಿವಿರುವ ಓದುಗರಿಗೆ ರಾವಣನ ದಶಕಂಠಗಳ ಬಗೆಗೆ ಅರಿವಿದ್ದು ಮೂಲದ ಮನಮುಟ್ಟಬಹುದು. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | would have with all his ten throats. | ಆದರೆ ಅನುವಾದವನ್ನೇ ಓದುವ ಅನ್ಯ ಸಂಸ್ಕೃತಿಯ ಭಾಷಿಕರಿಗೆ ರಾವಣ ಎಂಬ ಪುರಾಣ ಪುರುಷನು ಅಪರಿಚಿತನಾಗುವ ಸಾಧ್ಯತೆ ಇದೆ. |
| ೦೪ | ಪು. ೫<br>"ಜಾನಕಿ ಆಗ ಸೀತಕ್ಕ, ಪುರಾಣ–ಗಿರಾಣ ನಮ್ಮನ್ನೇನು ಮಾಡೀತು! ಕೈ ಬೇವಿನ ಗಿಡಕ್ಕೆ ಬೆಲ್ಲದ ಪಾನಕ ಎರೆದರೆ ಬೇವಿನ ಚಿಗುರು ಸಿಹಿ ಆದೀತೇ? ಹೇಳು ಎಂದಳು. | P. 11<br>"How can reading of holy books reform a man? Do neem buds turn sweet? if you pour syrup to the tree?" | ಕನ್ನಡದ ಭಾಷೆಯಲ್ಲಿ ವ್ಯರ್ಥ ಪ್ರಯತ್ನದ ಅರ್ಥವನ್ನು ಸೂಚ್ಯವಾಗಿ ಸಾಹಿತ್ಯವಾಗಿ ತಿಳಿಸುವ ಈ ಗಾದೆಯ ಮಾತನ್ನು ಇಂಗ್ಲೀಷಗೆ ಅನುವಾದಿಸಿರುವುದನ್ನು ಕಾಣಬಹುದು ತಕ್ಕ ಮಟ್ಟಿಗೆ ಇದು ಉದ್ದೇಶಿತ ಅರ್ಥವನ್ನು ನೀಡುವಲ್ಲಿ ಸಫಲವಾಗಿದೆ ಎನ್ನಬಹುದು. |
| ೦೫ | ಪು. ೫<br>"ಹೆಣ್ಣು ನೆಲ ನೋಡುತ್ತಿರಲಿ, ಮಾಣಿ ಗೋಡೆ ನೋಡುತ್ತಿರಲಿ ಫಲವೇನು?......." | ಅನುವಾದಿಸಿರುವುದಿಲ್ಲ | ಕನ್ನಡದಲ್ಲಿನ ನುಡಿಗಟ್ಟಾಗಿರುವ ಇದನ್ನು ಇಂಗ್ಲೀಷಿಗೆ ಅನುವಾದಿಸಿಲ್ಲ. |
| ೦೬ | ಪು. ೫<br>'ಈ ವಿಚಿತ್ರ 'ಮುಟ್ಟು'ನ್ನು ಯಾರೂ ಕಣ್ಣಿಂದ ಕಾಣಕೂಡದು | ಅನುವಾದಿಸಿರುವುದಿಲ್ಲ | ಮೂಲದಲ್ಲಿ – ಸರಸಮ್ಮನ ಸಮಾಧಿಗೆ ದಾಂಪತ್ಯ ಕ್ಲೇಶ ಹೊಂದಿರುವ ವಿಶೇಷವಾಗಿ ಹೆಂಗಸರು ಬಂದು ಯಾರಿಗೂ ಕಾಣದ ಹಾಗೆ ರಾತ್ರಿಯಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಸಲ್ಲಿಸುವ ಹರಕೆಯ ಕುರಿತು ಉಲ್ಲೇಖವಿದ್ದು 'ಮುಟ್ಸು' ಎಂದರೆ ಇದು ಗುಪ್ತ ಚಿಕಿತ್ಸೆ, ಇದರಲ್ಲಿ ಔಷಧ ಬಲಕ್ಕಿಂತ ಗೋಪ್ಯದಲ್ಲಿಯೇ ಹೆಚ್ಚಿನ ಬೆಲೆ. ಅದನ್ನು ವಿಶ್ವಾಸ ಚಿಕಿತ್ಸೆ ಎಂದರು ಸಲ್ಲುವುದು ಎಂಬುದಾಗಿ ಅಡಿ ಟಿಪ್ಪಣಿ ನೀಡಿ ವಿವರಿಸಲಾಗಿದೆ. ಆದರೆ ಅನುವಾದದಲ್ಲಿ ಈ ಪ್ರಸ್ತಾಪವೇ ಬರುವಲ್ಲಿ ಕರಾವಳಿ ಪ್ರದೇಶದ ಜನರಲ್ಲಿ ಮನೆ ಮಾಡಿದ್ದು ನಂಬಿಕೆಯೊಂದನ್ನು ಜಾಗತಿಕ ಮಟ್ಟಕ್ಕೆ ವಿವರಿಸುವುದು ಸಾಧ್ಯವಾಗಿಲ್ಲ. |
| ೦೭ | ಅಧ್ಯಾಯ 2; ಪು. 2<br>ಇಷ್ಟನ್ನು ಊರಿನ ಕ್ರೈಸ್ತ ಶಾನುಭಾಗರು ಮಾತ್ರ ಮೂಡಂಬೈಲಿನ ಪಡುಬದಿಯಲ್ಲಿರುವ 'ನಾಗನಬನ' ಎಂದು ರಿಕಾರ್ಡು ಮಾಡಿದ್ದಾರೆ. | Chapter 2; P 12<br>'....the village revenue collector, a christan, who had irreverently noted it merely as a Nag-grove, but that made no difference to the devotees". | 'ನಾಗಬನ' ಎನ್ನುವುದನ್ನು Nag-grove ಎಂದು ಅನುವಾದಿಸಿದ್ದು ಈ ಪದ ಪ್ರಯೋಗವು ಸಮರ್ಪಕವೆನಿಸುವುದಿಲ್ಲ. ನಾಗನಬನ ಕರಾವಳಿ ಪ್ರದೇಶದ ಸಂಸ್ಕೃತಿಯನ್ನು ಪ್ರತಿನಿದಿಸುವ ಸಾಂಸ್ಕೃತಿಕ ಅಂಶವಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೦೮ | ಪು. ೬<br>ಉಳಿದ ಪಂಚಪತಿವ್ರತೆಯರ ಹೆಸರನ್ನು ಮೂಡಂಬೈಲಿನವರು, ಏಕೆ ಉಳಿದ ಜನರೂ ಸಹ 'ಅಹಲ್ಯಾ ದ್ರೌಪದಿ ಸೀತಾ....." ಎಂದು ಒಂದು ಶ್ಲೋಕದಲ್ಲೇ ಮುಗಿಸಿಬಿಡತ್ತಾರೆ. | ಅನುವಾದಿಸಿರುವುದಿಲ್ಲ | ಭಾರತದ ಪುರಾಣದಲ್ಲಿ ಪ್ರಚಲಿತವಿರುವ ಪಂಚಪತಿವ್ರತೆಯರ ಹೆಸರುಗಳನ್ನು ಹೇಳುವ ಈ ಮಾತುಗಳನ್ನು ಅನುವಾದಿಸಿರುವುದಿಲ್ಲ. |
| ೦೯ | ಪು. ೬<br>"....ತೀರ ಹಣ್ಣು ಜಬ್ಬು ಮುದುಕಿಯರನ್ನು ಕೇಳಿದರೆ....." | P. 12<br>"....If one asked any of the many ripe old women in the village....." | 'ತೀರಾ ಹಣ್ಣು ಜಬ್ಬು ಮುದುಕಿಯರು' ಎನ್ನುವಲ್ಲಿ ಜಬ್ಬು ಎಂಬ ಪ್ರಾದೇಶಿಕ ಶಬ್ಧದ ಬಳಕೆ ಇದ್ದು ಅದು 'ತೀರಾ ವಯಸ್ಸಾಗಿರುವವರು' ಎಂಬ ಅರ್ಥ ನೀಡುತ್ತದೆ. ಇದನ್ನು ripe old women ಎಂದು ಭಾಷಾಂತರಿಸಲಾಗಿದೆ. ಸಾಮಾನ್ಯವಾಗಿ ripe ಎನ್ನುವ ಶಬ್ಧವನ್ನು ಇಂಗ್ಲಿಷ ಭಾಷೆಯಲ್ಲಿ 'ಪಕ್ವವಾದ' – ಎಂಬ ಅರ್ಥದಲ್ಲಿ ಬಳಸುವ ಪರಿಪಾಠವಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೧೦ | ಪು. ೮<br>'........ಮಾಚಿಯನ್ನು ಕಂಡರೆ ಗಂಡನಿಗೆ ಹಾಗಲಸೊಪ್ಪಿನ ರಸಕುಡಿಸಿದ ಹಾಗಂತೆ......" | P 13<br>".......To hime her mere sight was like the Juice of bitter gourd being forced down his gullet" | 'ಹಾಗಲಸೊಪ್ಪಿನ ರಸವನ್ನು ಕುಡಿಸಿದಂತೆ' ಎಂಬ ನುಡಿಗಟ್ಟು ಕನ್ನಡದಲ್ಲಿ ಆಡು ಭಾಷೆಯಲ್ಲಿ ಇದೆ. ಇಷ್ಟವಿಲ್ಲದನ್ನು ಮಾಡಲು ಹೇಳಿದಂತೆ, ಮನ ಒಪ್ಪದ್ದನ್ನು ಮಾಸ್ಟರನ್ನು ವ್ಯಕ್ತ ಪಡಿಸುವ ವಿಚಾರವಾಗಿದೆ. ಕನ್ನಡದ ಈ ನುಡಿಗಟ್ಟಿನ ಅನುವಾದ ಯಾಂತ್ರಿಕವಾಗಿ ಮೂಡಿ ಬಂದಿದೆ. |
| ೧೧ | ಪು. ೧೦<br>"ಇವರೆಲ್ಲ ಒಂದೊಂದು ಹಿಡಿಂಬೆಯೋ, ಶೂರ್ಪನಖಿಯೋ, ಪೂತನಿಯೋ ಇವರ ಕೈಯಲ್ಲಿ ಸಿಕ್ಕಿ ನರಳಿದವರು" | ಅನುವಾದಿಸಿರುವುದಿಲ್ಲ | ಭಾರತೀಯ ಪುರಾಣಗಳಲ್ಲಿ ಬರುವ ಈ ಪಾತ್ರಗಳು ಜನರ ದೈನಂದಿನ ಬದುಕಿನಲ್ಲಿ ಆಗಾಗ ಪ್ರಸ್ತಾಪವಾಗುವ ಹೆಸರುಗಳು. ಕೆಡುಕನ್ನು ಮಾಡುವ ವ್ಯಕ್ತಿಗಳನ್ನು ವಿಶೇಷವಾಗಿ ಹೆಂಗಸರ ಕೃತ್ಯವನ್ನು ದೂಷಿಸುವ ಸಂದರ್ಭದಲ್ಲಿ ಬಳಸುವಂತಹವುಗಳಾಗಿವೆ. |
| ೧೨ | ಪು. ೧೦<br>ಮಂಜುನಾಥಯ್ಯನ ಹೆಂಡತಿಯನ್ನು | P 12<br>"....And what kind of a woman was his wife? | ಮೂಲದಲ್ಲಿ ಬಳಸಿದ ಶಬ್ಧ 'ಅಪರಂಜಿ' ಯನ್ನು ವ್ಯಂಗ್ಯಾರ್ಥದಲ್ಲಿ ಬಳಸಲಾಗಿದ್ದು ಅವಳ ಸ್ವಭಾವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ವರ್ಣಿಸಿರುವುದು – "ಆದರೆ ಅವರಿಗೆ ಸಿಕ್ಕಿ ಅಪರಂಜಿ ಹೇಗಿನದು? ಕಾಣಲಿಕ್ಕೊಂದು ರೂಪವೂ ಇಲ್ಲ. ಬೆಳಗಿನಿಂದ ಸಂಜೆಯ ತನಕ ಇವರ ಬಾಯಿಂದ ಹೊರಟ ಮೂರು ಪಾಲಷ್ಟು ಸ್ವರ ಅವಳ ಬಾಯಿಂದ ಹೊರಡಬೇಕು....." | A tartar a regular tartar so evil looking, so saucy, So loquacious...." | ಗಂಡನಿಗಿಂತ ಭಿನ್ನ, ದಾಂಪತ್ಯದಲ್ಲಿ ಸಮಾನವಾದ ಸ್ಪಂಧನ ಇಲ್ಲವೆಂಬುವುದನ್ನು ತಿಳಿಸುತ್ತದೆ. tartar ಎಂಬ ಶಬ್ಧಕ್ಕೆ a person in a position of authority who has bad temper. ಎಂಬ ಅರ್ಥ ಇದೆ. Saucy, loquacious- ಮುತಾದ ಪದಗಳನ್ನು ಬಳಸಿ ಮಂಜುನಾಥಯ್ಯ ಹೆಂಡತಿಯ ವಾಚಾಳಿತನವನ್ನು ವರ್ಣಿಸಲಾಗಿದೆ. |
| ೧೩ | ಪು. ೧೧<br>ವೈದಿಕ ಸಂಪ್ರದಾಯಸ್ಥರಾದ ಮಂಜುನಾಥಯ್ಯ ಪ್ರತಿನಿತ್ಯ ಮಾಡುವ ಜಪ – "ಅಚ್ಚುತಾಯ ನಮ: ಅನಂತಾಯ ನಮ: ಕೇಶವಾಯ ನಮ: ಎಂದರೆ ಅವಳು....." | P 13<br>"Sulutation to Keshava, Salutation to Ananta, Salutation to Achuta" | ಇಲ್ಲಿ ಅನುವಾದದಲ್ಲಿ ಎದುರಿಸಬೇಕಾದ ಭಾಷಿಕ ತೊಡಕುಗಳನ್ನು ಗಮನಿಸಬಹುದಾಗಿದೆ. ಸಂಸ್ಕ್ರತದಲ್ಲಿರುವ ಮಂತ್ರವನ್ನು ಇಂಗ್ಲಿಷನಲ್ಲಿ ಗದ್ಯ ರೂಪಕ್ಕೆ ಭಾಷಾಂತರಿಸಲಾಗಿದೆ. ಅನುವಾದಕರು ಈ ಮೂಲಕ ಭಾಷಾಂತರದ ಮಿತಿಯನ್ನು ದಾಟುವ ಪ್ರಯತ್ನವನ್ನು ಮಾಡಿದ್ದಾರೆ. ಭಾಷೆಯ ತೊಡಕಿನಿಂದಾಗಿ ಮೂಲದಲ್ಲಿನ ಸಹಜತೆಯನ್ನು ಅನುವಾದದಲ್ಲಿ ತರುವುದು ಸಾಧ್ಯವಾಗಲಾರದೆಂಬುದನ್ನು ಕಾಣಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೪ | ಪು. ೧೦<br>'ಸೀರೆ, ಚಿನ್ನ, ಹೂವು ; ವಡೆ, ಪಾಯಸ. ಕಡಬು, ಚಕ್ಕುಲಿ, ಕೋಡ್ಬಳೆ ಮತ್ತೊಂದು....." ಅನ್ನುತ್ತಿರಬೇಕು. | P13<br>"was about saris, jewellery, meals, eatable and mundane things like that....." | ಭಾರತೀಯ ಮಹಿಳೆಯ ಸಾಮಾನ್ಯವಾದ ಬಯಕೆಗಳು ಹಾಗೂ ಕರ್ನಾಟಕ ಕರಾವಳಿಯ ಅಡುಗೆ ತಿಂಡಿ ತಿನಿಸುಗಳ ಪರಿಚಯವನ್ನು ನೀಡುವ ಈ ವಿಚಾರಗಳು ಅನುವಾದದಲ್ಲಿ ಕೇವಲ ಊಟ, ತಿಂಡಿ ತಿನಿಸುಗಳು ಹಾಗೂ ಲೌಕಿಕ ಲೋಕದ ವಸ್ತುಗಳು ಎಂದು ಅನುವಾದಿಸಲಾಗಿದ್ದು ಇದು ಮೂಲದ ಸಾಂಸ್ಕೃತಿಕ ವಿಚಾರವನ್ನು ಸಮರ್ಪಕವಾಗಿ ತಿಳಿಸಲಾರದು. |
| ೧೫ | ಪು. ೧೦<br>".....ಪಾಪ, ಮಂಜುನಾಥಯ್ಯನವರ ಕಿವಿ ಮರವಾಗಿದ್ದರೆ ಎಂದೇನೆ ಹೊಟ್ಟಿ ಹೋಗುತ್ತಿತ್ತು" ಎಂದು ಅನ್ನುತ್ತಾರೆ. | P 13<br>".....Had his ears been made of wood, they would have been exploded in no time....." | ಆಡುಭಾಷೆಯಲ್ಲಿ 'ಕಿವಿ ಹೊಟ್ಟಿ ಹೋಗುತ್ತಿತ್ತು' ಎಂದು ಕರಾವಳಿ ಕರ್ನಾಟಕದಲ್ಲಿ ಹೇಳುವ ರೂಢಿ ಇದೆ. ಇದನ್ನು ನೇರವಾಗಿ ಇಂಗ್ಲಿಷಗೆ ಅನುವಾದಿಸಿದ್ದನ್ನು ಕಾಣಬಹುದಾಗಿದೆ. |
| ೧೬ | ಪು. ೧೧<br>".....ಮತ್ತೊಂದು ತಿಂಗಳಲ್ಲಿ ಅವರೇ ಹೆಂಡತಿಯ | P 13<br>".....ritually whishpering into her ears the | ಸಂವಾದಿ ಶಬ್ದಗಳ ಕೊರತೆಯನ್ನು ಅನುವಾದದಲ್ಲಿ ಭಾಷಾಂತರಕಾರ ಎದುರಿಸುವುದನ್ನು ಇಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕಿವಿಯಲ್ಲಿ ಪಂಚಾಕ್ಷರಿ ಜಪವನ್ನು ಉಪದೇಶಿಸುವವಂತಾಯಿತು....." | five syllable holy chant....." | ಕಾಣಬಹುದಾಗಿದೆ ಒಂದು ವಿಭಿನ್ನವಾದ ಸಾಂಸ್ಕೃತಿಕ ಪರಿಸರವನ್ನು ಹೊಂದಿದ ಭಾಷೆಯಲ್ಲಿ ವೈದಿಕ ಸಂಸ್ಕೃತಿಯಲ್ಲಿ ಪಂಚಾಕ್ಷರಿ ಮಂತ್ರವನ್ನು five syllable holy chant' ಎಂದು ನೇರವಾಗಿ ಶಬ್ದಾನುವಾದ ಮಾಡಿರುವುದು ಕಂಡು ಬರುತ್ತದೆ. ಆದರೆ ಇಲ್ಲಿ ಭಾಷಿಕವಾದ ಸಾಂಸ್ಕೃತಿಕ ತೊಡಕನ್ನು ಮೀರುವುದು ಸಾಧ್ಯವಾಗಲಾರದು ಎಂಬುದನ್ನು ಅರಿಯಬಹುದಾಗಿದೆ. |
| ೧೭ | ಪು. ೧೧<br>ಜಾತ್ರೆಗೆ ಹಾಳು 'ಕೋಳಿ ಅಂಕಕ್ಕೆ' ಬರುವ ಜನರೇ ಹೆಚ್ಚಿದ್ದರೂ ಭಕ್ತಿ ಇದ್ದವರಿಗೆ 'ತಾವು ಬರುವುದು ಕೋಳಿಯ ಜೂಜಿಗಲ್ಲ, ಸರಸಮ್ಮನ ವರಪ್ರಸಾದ ಪಡೆಯಲಿಕ್ಕೆಂಬುದು ತಿಳಿದೇ ಇದೆ. | P 13<br>"most of them came, not from any sense of piety but to witness cock fight...." | ಮೂಲಕಾದಂಬರಿಯಲ್ಲಿ ಕಾರಂತರು ದೇವರ ಜಾತ್ರೆಗೆ ಬರುವ ಭಕ್ತರು ಧಾರ್ಮಿಕ ನಂಬಿಕೆಯನ್ನು ಹೊಂದಿದವರಾಗಿದ್ದರೂ, ಜಾತ್ರೆಯಲ್ಲಿ ಸೇರುವ ಹೆಚ್ಚಿನ ಜನರು ಜೂಜಾಡುವುದಕ್ಕೆ ಬರುತ್ತಿದ್ದರು. 'ಹಾಳು ಕೋಳಿ ಅಂಕಕ್ಕೆ' ಎಂದು ಹೇಳುವಲ್ಲಿ ಇದೊಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಸಾಮಾಜಿಕ ಅನಿಷ್ಟ ಎಂಬುದನ್ನು ಸೂಚ್ಯವಾಗಿ ಹೇಳುತ್ತಾರೆ ಹಾಗೂ ' ಕೋಳಿ ಅಂಕ' ಎಂಬುದಕ್ಕೆ ಮೂಲ ಕಾದಂಬರಿಯಲ್ಲಿ ಅಡಿ ಟಿಪ್ಪಣಿಯನ್ನು ನೀಡಿ 'ಕೋಳಿ ಅಂಕ ಎಂಬುದು ಕೋಳಿಗಳಿಗೆ ಕತ್ತಿಯನ್ನು ಕಟ್ಟಿಸಿ ಕಾದಾಟಕ್ಕೆ ನಿಲ್ಲಿಸುವ ವಿನೋದ ಎಂಬುದಾಗಿ ವಿವರಿಸಿದ್ದಾರೆ. ಆದರೆ ಅನುವಾದದಲ್ಲಿ ಈ ಬಗ್ಗೆ ಯಾವುದೇ ವಿವರಣೆ ಲಭ್ಯವಾಗುವುದಿಲ್ಲ ಹಾಗೂ to witness cock fight ಅನ್ನುವುದು ಕೇವಲ ಕೋಳಿ ಅಂಕವನ್ನು ನೋಡಲು ಬಂದವರು ಎಂಬ ಅರ್ಥ ಕೊಡುತ್ತದೆ. ಆದರೆ ಕಾರಂತರು ಹೇಳುವುದು ಜೂಜಿನಲ್ಲಿ ಪಾಲ್ಗೊಳ್ಳಲು – ಜೂಜಾಡಲು ಬರುವ ಜನರು ಎಂಬರ್ಥದಲ್ಲಿ ತಿಳಿಸಿದ್ದಾರೆ. ಇಲ್ಲಿ ಭಾಷಾಂತರಕಾರನ ಮಿತಿಯನ್ನು ಗುರುತಿಸಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೮ | ಅಧ್ಯಯ ೩ ಪು. ೧೧<br>'ಹಂಸ ಪಕ್ಷಿಯಿದ್ದಲ್ಲಿ ಕೆಸರೂ ಇರುತ್ತದೆ. ದೀಪವಿದ್ದಲ್ಲಿ ಕತ್ತಲೂ ಇರುತ್ತದೆ – ಎನ್ನುವ ಹಾಗೆ ನಮ್ಮ ಸರಸಮ್ಮನ ಗುಡಿ ಇರುವ ಊರಿನಲ್ಲೇ ಅಡಾಲುಡಿ ಚಂದ್ರಯ್ಯನ ಮನೆ ಇರುವುದು' | Chapter 3 P 14<br>In this hallowed village lived Chandrayya, as through to confirm the popular saying that there are swans there is dirt and beneath every lamp there is darkness ....." | ಕನ್ನಡ ಭಾಷೆಯಲ್ಲಿ ಪ್ರಚಲಿತವಿರುವ ಈ ಗಾದೆ ಮಾತನ್ನು ಇಂಗ್ಲಿಷಿಗೆ ಅನುವಾದಿಸಲಾಗಿದೆ. ಸಂವಾದಿ ಗಾದೆ ಮಾತು ಅನುವಾದಿತ ಭಾಷೆಯಲ್ಲಿ ಸಿಗಲಾರದಾಗ ಗಾದೆಯನ್ನೇ ಅನುವಾದಿಸಿರುವುದನ್ನು ಕಾಣಬಹುದಾಗಿದೆ. |
| ೧೯ | ಪುಟ ೧೩<br>'....ಚೌತಿಯ ದಿವಸ ಬಂದೀತೇ! ಆಳೆತ್ತರದ ಆವೆಮಣ್ಣಿನ ವಿನಾಯಕನನ್ನು ಮಾಡಿ ಮನೆಗೆ ಬಂದವರಿಗೆಲ್ಲ ಅರಳು ಪಂಚಕಜ್ಜಾಯವನ್ನು ಹಂಚುತ್ತಾನೆ....." | P 14<br>During chouti festival he would set up a life-size clay model of Vinayak and distribute the fried rice offerings to visitors. | ಚೌತಿ ಹಬ್ಬದ ಅಚರಣೆ, ಗಣಪತಿಯ ಮೂರ್ತಿಯನ್ನು ಮನೆಯಲ್ಲಿಟ್ಟು ಪೂಜಿಸುವುದು. ವಿಶೇಷವಾದ ಆವೆ ಮಣ್ಣಿನಿಂದ ಮಾಡುವ ಈ ಮೂರ್ತಿಯನ್ನು ಪೂಜಿಸಿ, ಅರಳು ಪಂಚಕಜ್ಜಾಯ ಹಂಚುವುದು ಕರಾವಳಿ ಕರ್ನಾಟಕ ಪ್ರದೇಶದ ಧಾರ್ಮಿಕತೆಯ ವಿಶೇಷತೆಯನ್ನು ಹೊಂದಿದೆ. ಇದು ಅನ್ಯ ಬಾಷಿಕರಿಗೆ ಅನುವಾದದ ಮೂಲಕ ತಲುಪುವುದು ಸಾಧ್ಯವಾಗದು. ವಿಶೇಷವಾಗಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ತಯಾರಿಸುವ ಅರಳು ಪಂಚಕಜ್ಜಾಯದ ವಿವರಗಳು ಕೂಡ ಸಮರ್ಪಕವಾಗಿ ವ್ಯಕ್ತವಾಗುವುದಿಲ್ಲ. |
| ೨೦ | ಪು. ೧೩<br>ಚಂದ್ರಯ್ಯನ ಮನೆಯಲ್ಲಿ ಇಲ್ಲದ ಸಾಮಾಗ್ರಿಯಿಲ್ಲ ಮುತ್ತಜ್ಜನ ಕಾಲದ ನೀಲಾಂಜನ, ಹಿರಿಯಜ್ಜ ಗದ್ದೆ ಸಾಗುವಳಿಗೆ ಹೋಗುವಾಗ ತೊಡುತ್ತಿದ್ದ "ಮಟ್ಟು ಹಾಳೆ" ಇವೆರಡೂ ಇವೆ. ಅವನ್ನು ಇರಿಸುತ್ತಿದ್ದ ಕೋಣೆಯಲ್ಲಿಯೇ ಹೊಸತಾಗಿ ಬಂದ 'ರೇಡಿಯೋ ಸೆಟ್' ಸಹ ಇದೆ....." | P 14<br>His house was a littel museum, stocked with articles his forefathers had used and jostling against them were a radio set and a gramophone'. | ಕೃಷಿ ಆಧಾರಿತ ಕುಟುಂಬದಲ್ಲಿ ಪೂಜೆ ಪುನಸ್ಕಾರಗಳಿಗೆ ಬಳಸುತ್ತಿದ್ದ ನೀಲಾಂಜನ, ಗದ್ದೆಗೆ ಹೋಗುವಾಗ ತೊಡುವ "ಮುಟ್ಟು ಹಾಳೆ" ಇವುಗಳನ್ನು ಅನುವಾದಿಸಿಲ್ಲ. ಸಂವಾದಿ ಶಬ್ಧಗಳ ಮಿತಿಯು ಇದಕ್ಕೆ ಕಾರಣವಾಗಿರುವುದು ಕಂಡು ಬರುತ್ತದೆ. ಭಾಷಾಂತರಕಾರ ಎದುರಿಸುವ ಭಾಷಿಕ ಮಿತಿಯುನ್ನು ಕಂಡು ಕೊಳ್ಳಬಹುದಾಗಿದೆ. ಗ್ರಾಮೀಣ ಬದುಕಿನ ಕೃಷಿ ಸಂಸ್ಕೃತಿಯನ್ನು ಜಾಗತಿಕ ಭಾಷೆಂರಾದ ಇಂಗ್ಲಿಷಗೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ತಲುಪಿಸುವುದು ಕಷ್ಟ ಸಾಧ್ಯವಾಗುವುದನ್ನು ತಿಳಿದುಕೊಳ್ಳಬಹುದಾಗಿದೆ. |
| ೨೧ | ಪು. ೧೩<br>ಚಂದ್ರಯ್ಯ ಹೊಸದಾಗಿ ತಂದ ರೇಡಿಯೋ ಸೆಟ್‌ನ್ನು ತಿರುಗಿಸಿದಾಗ ಭಟ್ಟರ ರೇಡಿಯೋದಲ್ಲಿ ಆಗಾಗ ಚಿಟಿಪಿಟಿ (atmospherics)ಗಳನ್ನು ಕೇಳಿ 'ಇದೇನು ಸಿಡಿಲು ಗುಡುಗು' ಎಂದು ಕೇಳಿದೆ ಚಂದ್ರಯ್ಯ ಉತ್ತರ ಕೊಡುವಾಗ ಆಡುವ ಮಾತು; 'ನಿಮ್ಮ ಇಂದ್ರನಿದ್ದಾನಲ್ಲ, ವಜ್ರಾಯುಧ ಹಿಡಿದು ಕೊಡುವ ತಕಲೀಪು' ಅನ್ನುವ! | P 14<br>'This is your God Indra swinging his weapon, the thunder bolt". | ಭಾರತೀಯ ಪುರಾಣ ಪ್ರಜ್ಞೆಯನ್ನು ವ್ಯಕ್ತಪಡಿಸುವ ಆ ವಿಚಾರವು ಭಾರತೀಯ ಓದುಗರಿಗೆ ತಲುಪುವುದಾದರೂ ಇದಾವುದರ ಅರಿವು ಇರದ ಅನ್ಯ ಭಾಷಿಕ ಓದುಗರ ಕಲ್ಪನೆಗೆ ಇದು ನಿಲುಕದೆ ಇರಬಹುದು. |
| ೨೨ | ಪು. ೧೪<br>'ನನಗೂ ಹಾಗೇ ಅನ್ನಿಸುತ್ತದೆ ಭಟ್ಟರೇ, ಐನ್‌ಸ್ಟಿನ್ ಅನ್ನುವವವನು ನಾಳೆ ಆಗುವುದನ್ನು ಇವತ್ತು | P 15<br>"I should think so Einstein says tomorrow's events can be seen today. Authors like | ವಾಸ್ತವವಾದಿ ನೆಲೆಯಲ್ಲಿ ಕಾದಂಬರಿಯನ್ನು ರಚಿಸುವ ಕಾರಂತರು ಸಮಾಜದಲ್ಲಿ ಮಡವುಗಟ್ಟಿದ್ದ ನಂಬಿಕೆಗಳನ್ನು ವೈಜ್ಞಾನಿಕ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕಾಣಬಹುದು ಅನ್ನುತ್ತಾನೆ. ಅದಲ್ಲದೆ ಆಲಿವರ್ ಲಾಜ್, ಕಾನಂ ಡಾಯಲ್ ಮುಂತಾದವರು ಈಗ ಪ್ರೇತ ಸಂಭಾಷಣೆ ಮಿಥ್ಯವಲ್ಲ ಎಂದು ಹೇಳುತ್ತಿದ್ದಾರೆ" | Oliver Lodge and conan Doyle have said that spritis are not Myths" | ದೃಷಿಕೋನದಿಂದ ನೋಡುವ ಪ್ರಯತ್ನ ಮಾಡಿದ್ದಾರೆ. ಪ್ರೇತ ಸಂಭಾಷಣೆ ವೈಜ್ಞಾನಿಕವಾಗಿ ಸಾಬೀತಾದ ಸಂಗತಿ ಎಂಬುದನ್ನು ಓದುಗರಿಗೆ ಮನದಟ್ಟು ಮಾಡುವ ಪ್ರಯತ್ನ ಇಲ್ಲಿದೆ. ಇಲ್ಲಿ ಅನುವಾದ ತಕ್ಕಮಟ್ಟಿಗೆ ಸಫಲವಾಗಿದೆ ಎಂದು ಹೇಳಬಹುದಾದರೂ ಪ್ರೇತ ಸಂಭಾಷಣೆ ಎಂಬುದನ್ನು spirits are not myths ಎಂದಷ್ಟೆ ಹೇಳಲಾಗಿರುವುದು ಮೂಲ ಕಾದಂಬರಿಯ ವಿಚಾರವನ್ನು ಸಮರ್ಪಕವಾಗಿ ಮೂಡಿಸುವುದಿಲ್ಲ. ಮೂಲ ಕಾದಂಬರಿಯಲ್ಲಿನ ನಾಲ್ಕನೆ ಅಧ್ಯಾಯದ ವಿಚಾರಗಳಾದ – ಈಶ್ವರ ಭಟ್ಟರು ಹಾಗೂ ಚಂದ್ರಯ್ಯನ ನಡುವೆ ನಡೆಯುವ ಪ್ರೇತದ ಕುರಿತಾದ ಮಾತುಕತೆಯನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಮೂಲಕಾದಂಬರಿಯಲ್ಲಿನ ಐದನೆಯ ಅಧ್ಯಯವಾದ 'ಸುನಾಲಿಯ ಸಂತಾಪ'ದ ವಿಚಾರಗಳಾದ – ಸುನಾಲಿನಿ – ಅಣ್ಣಪ್ಪ ಕಮ್ತಿಯವರ ದಾಂಪತ್ಯ ವಿರಸ, ಸ್ವಾತಂತ್ರ್ಯಕ್ಕಾಗಿ ಹಂಬಲಿಸುವ ಸುನಾಲಿಯ ಮನಸ್ಸು, ಕಲಿತ ಹೆಣ್ಣಿನ ಮನಸ್ಸು ಸಮಾನತೆಯನ್ನು ಹಂಬಲಿಸುವುದು – ಸಂಪ್ರದಾಯದ ಕೈಗೊಂಬೆಯಾಗಿ ವರ್ತಿಸಬೇಕಾದ ಅನಿವಾರ್ಯತೆ, ಸುನಾಲಿಯ ತಂದೆಯ ಕುರಿತಾದ ವಿಚಾರಗಳು, ಸುನಾಲಿಯ ಅತ್ತೆ ಸೊಸೆಯನ್ನು ಜರಿಯುವ ಸಂದರ್ಭಗಳನ್ನು ಕೂಡ ಅನುವಾದದಲ್ಲಿ ಕೈ ಬಿಡಲಾಗಿದೆ. ಅನುವಾದದ ೩ನೇ ಅಧ್ಯಾಯದಲ್ಲಿಯೇ ಮೂಲಕಾದಂಬರಿಯ ೬ನೇ ಅಧ್ಯಾಯದ ಕೆಲವು ವಿಚಾರಗಳನ್ನು ಸೇರಿಸಿಕೊಂಡು ಅನುವಾದದಲ್ಲಿ |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಕಾದಂಬರಿಯು ಮುಂದುವರಿದಿದೆ. ಚಂದ್ರಯ್ಯ ಮತ್ತು ಈಶ್ವರ ಭಟ್ಟರ ನಡುವೆ ನಡೆಯುವ ೬ನೇ ಅಧ್ಯಯದ ಕೊನೆಯ ಭಾಗವನ್ನು ೩ನೇ ಅಧ್ಯಯದಲ್ಲಿ ಸೇರಿಸಿಕೊಳ್ಳಲಾಗಿದೆ. |
| ೨೩ | ಪು. ೨೭<br>ಚಂದ್ರಯ್ಯನಿಗೆ ೨೪ನೇಯ ವಯಸ್ಸು ನಡೆಯುತ್ತಿದ್ದರೂ ಇನ್ನು ವಿವಾಹವಾಗದ ವ್ಯಥೆ ಇದ್ದೇ ಇದೆ.<br>"ಮದುವೆಯಾದರೆ ರೂಪ ಗೀಪ ಇರುವ ತಕ್ಕವಳನ್ನು ಮದುವೆಯಾಗಬೇಕೆಂದು ಯೋಚನೆ. ತಕ್ಕವಳು ಅವನ ಸುಟ್ಟ ಜಾತಿಯಲ್ಲಿಲ್ಲ. ಯಾವುದೇ ಅಡ್ಡಗೆರೆ ಬ್ರಾಹ್ಷಣರ ಕುಲ ಅವರದ್ದು. 'ಅಡ್ಡಗೆರೆ' ಬಂದವರು ಆ ಊರಲಿಲ್ಲ. ಇದ್ದವರ ಮಕ್ಕಳು 'ಕೆಸರು ಮುಕ್ಕ' ಮೋರೆಗಳು. ಅ.ಅ.ಇ.ಈ.ಯೂ | ಅನುವಾದಿಸಿರುವುದಿಲ್ಲ | ಕಾರಂತರು ಜಾತಿ ವ್ಯವಸ್ಥೆಯನ್ನು, ಇರುವ ವೈವಾಹಿಕ ಜೀವನ ನಡೆಸಲು ಬ್ರಾಹ್ಮಣ ಜಾತಿಯಲ್ಲಿ ಇರುವ ಕಟ್ಟು ಪಾಡುಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿಡಂಭಿಸಿದ್ದಾರೆ. ಇಲ್ಲಿ ಬರುವ 'ಅಡ್ಡಗೆರೆ ಬ್ರಾಹ್ಮಣ ಕುಲ' ರೂಪ ಇಲ್ಲದ ಹೆಣ್ಣು ಮಕ್ಕಳ ಕುರಿತಾಗಿ ಹೇಳುವ 'ಕೆಸರುಮುಕ್ಕ' ಮೋರೆಗಳು, ವಿದ್ಯಾವಂತರು ಅಲ್ಲ ಎನ್ನುವುದಕ್ಕೆ ಹೇಳುವ 'ಅ-ಆ-ಇ-ಈ ಯೂ ಅಗದವರು' ಎಂಬುದನ್ನು ಅನುವಾದದಲ್ಲಿ ಸೇರ್ಪಡೆ ಮಾಡಿಕೊಂಡಿಲ್ಲ. ಜಾತಿ ವ್ಯವಸ್ಥೆಯನ್ನು ಮೀರಿ, |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಅಗದವರು ಅವರನ್ನು ಕಟ್ಟಿಕೊಂಡು ಏನು ಮಾಡುವುದು?.... | | ಸಾಂಪ್ರದಾಯ, ಕಟ್ಟು ಪಾಡುಗಳನ್ನು ಮೀರಿ ನಿಲ್ಲುವ ಸಮಾಜದ ಸ್ಥಾಪನೆ ಆಗಬೇಕು ಎಂಬ ಕಾದಂಬರಿಕಾರರ ವಿಚಾರಗಳು ಅನುವಾದದಲ್ಲಿ ವ್ಯಕ್ತಗೊಳ್ಳದೇ ಹಾಗೆ ಉಳಿದುಕೊಂಡು ಬಿಡುತ್ತವೆ ಎಂಬುದನ್ನು ಗಮನಿಸಬಹುದಾಗಿದೆ. |
| ೨೪ | ಹಾಗೆ ಊರಲ್ಲೆಲ್ಲಾದರೂ 'ಚಂದ್ರಯ್ಯನಿಗೆ ಇಷ್ಟೆಲ್ಲಾ ಆಸ್ತಿ ಇದ್ದು ಅವನು ಮದುವೆಯಾಗಿಲ್ಲ ಯಾಕೆ?' ಎಂದರೆ 'ಅಯ್ಯೋ ಮದುವೆಯೆಂದರೆ ಮೇಬಳ್ಳಿ ಹಾಕಿದ ಹಸುವಿನ ಹಾಗಾಯಿತು. ಇದೇನಿಲ್ಲ ಗೋಬಿಟ್ಟ ಬಸವನಂತೆ ತಿರುಗಬಹುದಲ್ಲ' ಅನ್ನಿತ್ತಿದ್ದರು. ಈ ಮಾತು ಚಂದ್ರಯ್ಯನ ಕಿವಿಗೆ ಮುಟ್ಟದಿರಲಿಲ್ಲ. ಅವನು ನಗುತ್ತ 'ಮನುಷ್ಯನೂ ಒಂದು ಗೂಳಿಯೇ ಏನು ಹೆಚ್ಚು? ಏನು ಕಡಿಮೆ? | P-15<br>All this did not make a good impression on the people. Some made snide remarks. To be a bachelor was to be free like a stud bull at large whenever such comments reached his ears, he would say "Man is a beast, neither less, nor more. I know of enough married people, Merely by walking seven steps around the | 'ಮೇಬಳ್ಳಿ ಹಾಕಿದ ಹಸುವಿನ ಚಿತ್ರಣವನ್ನು ಕರಾವಳೀ ಪ್ರದೇಶದಲ್ಲಿ ಕಾಣಬಹುದಾಗಿದೆ ಹಸುವಿನ ಕೊರಳಿಗೆ ಹಗ್ಗ ಹಾಕಿ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಮೇಯಲು ಬಿಟ್ಟ ಹಸುವನ್ನು ಕಾರಂತರು ನೀಡುವಲ್ಲಿ ಕಡಿವಾಣ ಹಾಕಿದ ಗಂಡಸಿನ ಚಿತ್ರಣವನ್ನು ನೀಡಿದ್ದಾರೆ. ಮದುವೆಯೆಂಬ ಕಡಿವಾಣವನ್ನು ತೊಡಿಸಿ ಗಂಡಸಿಗೆ ಒಂದೇ ಹೆಣ್ಣಿನ ಸಾಮಿಪ್ಯ ಸಿಗುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮದುವೆಯಾದವರನ್ನು ನೋಡಿದ್ದೇನೆ ಆಗದವರನ್ನೂ ನೋಡಿದ್ದೇನೆ. ಸಂಸಾರ ಹಾಗಿಲ್ಲವಾಗಿದ್ದರೆ ಬೆಳ್ಳಿಮ್ಮನ ಹಾಗಿನವರು ಇರುತ್ತಲೇ ಇರಲಿಲ್ಲ. ಬೆಂಕಿಯ ಮುಂದೆ ಏಳು ಹೆಜ್ಜೆ ಬಂದ ಸಂಸಾರಗಳೆಲ್ಲ ಸಂಭಾವಿತನದಲ್ಲಿ ಮುಳುಗಿಯೂ ಇಲ್ಲ' ಎಂದು ಬಿಡುತ್ತಿದ್ದ. | sacred fire one doesnot get soaked in virtue or good sense" | ಹಾಗೆ ಮಾಡುವುದು. ಆದರೆ ಗೋ ಬಿಟ್ಟ ಬಸವ ಎಂದಾಗ ಈ ಕಡಿವಾಣಗಳೂ ಇಲ್ಲದೇ ಬೀದಿಯಲ್ಲಿ ತಿರುಗುವ ಬಸವನ ಚಿತ್ರವನ್ನು ನೀಡುತ್ತದೆ. ಇದು ಅನುವಾದದಲ್ಲಿ ಸ್ಪಷ್ಟವಾಗಿ ಮೂಡುವುದಿಲ್ಲ. ಹಾಗೂ ವಿವಾಹದ ಸಂದರ್ಭದಲ್ಲಿ ವೈದಿಕ ಸಾಂಪ್ರದಾಯದಂತೆ ಸಪ್ತಪದಿಯನ್ನು ತುಳಿಯುವುದು – ವರ ವಧುವನ್ನು ಕೈಯನ್ನು ಸ್ವಯಂವರ ಮಂಟಪದಲ್ಲಿ ಏಳು ಹೆಜ್ಜೆಗಳನ್ನು ಹಾಕಿವುದು ಇಲ್ಲಿನ ವಿವಾಹ ಪದ್ಧತಿಯನ್ನು ಪ್ರತಿನಿಧಿಸುತ್ತದೆ. ಆದರೆ ಅನುವಾದದಲ್ಲಿ 'merely walkikng seven steps around the sacred fire' ಎನ್ನುವಲ್ಲಿ ಇಲ್ಲಿನ ಈ ಸಂಸ್ಕೃತಿಯ ಪರಿಚಯವಿಲ್ಲದ ಓದುಗರಿಗೆ ಇದರ ಅರ್ಥ ಅಪೂರ್ಣವಾಗಿಯೇ ಉಳಿದು ಬಿಡಬಹುದು. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೨೪ | ಅಧ್ಯಾಯ ೪ ಪು. ೨೩<br>ಅಣ್ಣಪ್ಪ ಕಮ್ತಿಯ ತಾಯಿ ಮಗನ ಪರವಾಗಿ ಸೊಸೆಯ ಕುರಿತಾಗಿ ಆಡುವ ಮಾತುಗಳು – "…..ಅಣ್ಣಪ್ಪ, ನಾಳೆಯಿಂದ ನೀನು ಅಂಗಡಿಗೆ ಹೋಗಬೇಡ, ಏನು; ನಿನ್ನ ಈ ಬೀಸಣಿಗೆ ಒಟ್ಟಿಗೆ ಕೂತು ಇಂಗ್ಲೀಷ್ ಪೇಪರು ಓದು….. ಅಂಗಡಿಯನ್ನು ಹುಲಿ ತಿನ್ನಲಿ….. ಆ ಮೇಲೆ ಏನಾದೀತೆಂದು ನೋಡಿಕೊಳ್ಳುವ….." | Chapter 4 P 18<br>Annappa, don't go to the shop from tomorrow; instead you stay with this decoration piece and read English newspapers. Let the shop go to dogs. We shall see what happens afterwards". | ಇಲ್ಲಿ 'ಬೀಸಣಿಕೆ' ಎಂದರೆ ಸೊಸೆಯನ್ನು ವ್ಯಂಗ್ಯವಾಗಿ ಜರಿಯುವುದು. ಮನೆಯಲ್ಲಿ ಹೆಂಡತಿಯನ್ನು ರಮಿಸುತ್ತ ಕುಳಿತರೆ ಜೀವನ ಸಾಗಲಿಕ್ಕಿಲ್ಲ. ಅಂಗಡಿಯಲ್ಲಿ ವ್ಯಾಪಾರ ಮಾಡುವವರು ಯಾರು – ಎಂಬ ಸೂಚ್ಯಾರ್ಥವಿದೆ. ಹಾಗೂ ಆಡು ಭಾಷೆಯಲ್ಲಿ ಇರುವ – ಗಾದೆಮಾತು – 'ಅಂಗಡಿಯನ್ನು ಹಣು ತಿನ್ನಲಿ' ಇಲ್ಲಿ 'ಹುಲಿ ತಿನ್ನಲಿ' ಎಂದರೆ ಹಾಳಾಗಿ ಹೋಗಲಿ ಎಂಬ ಅರ್ಥ ಇದಕ್ಕೆ ಸಂವಾದಿಯಾಗಿ ಇಂಗ್ಲೀಷನಲ್ಲಿ 'go to dogs' ಎಂಬ ನುಡಿಕಟ್ಟು ಇದೆ. ಹೀಗೆ ಸಮಾನವಾದ ಸಂವಾದಿ ಪದಗಳು / ಗಾದೆಗಳು / ನುಡಿಗಟ್ಟುಗಳು ಅನುವಾದಿತ ಭಾಷೆಯಲ್ಲಿ ಲಭ್ಯವಿದ್ದಾಗ ಅನುವಾದ ಸಮರ್ಪಕವಾಗಿ ಮೂಡಿ ಬರುವುದು ಸಾಧ್ಯವಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೨೬ | ಅಧ್ಯಾಯ ೭ ಪು. ೨೯<br>ರಾಮಣ್ಣಯ್ಯ ಚಂದ್ರಯ್ಯ ತನ್ನದೆ ಮನೇಗೆ ಭೂತ ನೋಡುವ ಕುತೂಹಲದಿಂದ 'ಬಂದಾಗ ರಾಮಣ್ಣಯ್ಯನಿಗೆ ಚಂದ್ರಯ್ಯನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳುವ ಮನಸ್ಸಿನಲ್ಲಿ ಯೋಜನೆ ಇದ್ದುದರಿಂದಾಗಿ ಅವನನ್ನು ಉಪಚರಿಸುತ್ತಾನೆ. ಅವನ ಉಪಚಾರಕ್ಕೆ ಪ್ರತಿಕ್ರಿಯೆಯಾಗಿ ಚಂದ್ರಯ್ಯ ಪ್ರತಿಕ್ರಿಯಿಸುವುದು. 'ರಾಮಣ್ಣಯ್ಯ, ನಾನು ಭೂತ ನೋಡಲು ಬಂದವನು! ನೀವು ನನ್ನನ್ನೆ ಭೂತ ಎಂದು ತಿಳಿದು ಈ ಕೋಲ ಕೊಟ್ಟರೆ ಹ್ಯಾಗೆ? 'ಎಂದು ಕೇಳಿದನು | ಅನುವಾದಿಸಿರುವುದಿಲ್ಲ. | ಅನುವಾದಕರು ಮೂಲಕೃತಿಯನ್ನು ಅಧ್ಯಾಯಗಳನ್ನು ಸಂಕ್ಷಿಪ್ತಗೊಳಿಸಿದ್ದಾರೆ. ಕೆಲವು ವಿಚಾರಗಳನ್ನು ತೆಗೆದುಕೊಂಡು ಅವುಗಳನ್ನು ಇತರ ಅಧ್ಯಾಯಗಳಲ್ಲಿ ಸೇರಿಸಿದ್ದಾನೆ. ಮೂಲಕೃತಿಯಲ್ಲಿ ಕಾರಂತರು ಕೋಲದ ಬಗ್ಗೆ ಅಡಿ ಟಿಪ್ಪಣಿಯನ್ನು ನೀಡಿ "ಭೂತ ಪ್ರೇತಗಳಿಗೆ ಒಪ್ಪಿಸುವ ಸಮಾರಾಧನೆ' ಎಂದು ವಿವರಿಸಿದ್ದಾರೆ. ಇದು ಕರಾವಳಿ ಸಂಸ್ಕೃತಿಯಲ್ಲಿ ಭೂತರಾಧನೆ ವಿಶಿಷ್ಟವಾಗಿದ್ದು ಇಲ್ಲಿನ ಸಾಂಸ್ಕೃತಿಕತೆಯನ್ನು ಎತ್ತಿ ತೋರಿಸುತ್ತದೆ. ಅನುವಾದದಲ್ಲಿ ಈ ವಿಚಾರವನ್ನು ಕೈ ಬಿಡಲಾಗಿದೆ. |
| ೨೭ | ಅಧ್ಯಾಯ ೮ ಪು. ೩೮<br>ವೆಂಕಟರಮಣಯ್ಯ ತನ್ನ ಹೆಂಡತಿಯ | P 21<br>".....you can talk to here when she is grown | ಇಲ್ಲಿ ಕನ್ನಡದಲ್ಲಿನ ಗಾದೆ ಮಾತಿನ ಸಾರಾಂಶವನ್ನು ಇಂಗ್ಲಿಷನಲ್ಲಿ ಹೇಳುವ ಪ್ರಯತ್ನವನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮುಖಾಂತರ ಮಗ ಹಿರಣ್ಯನಿಗೆ ಹೆಂಡತಿಯ ಜೊತೆ ಹೆಚ್ಚು ಸಲಿಗೆ ಮಾಡಬಾರದು ಎಂದು ಹೇಳಿಸುವ ಸಂದರ್ಭದಲ್ಲಿ ಹಿರಣ್ಯನ ತಾಯಿ ಹಿರಣ್ಯನಿಗೆ ಹೇಳುವ ಮಾತುಗಳು – ‘ನಾಳೆ ಅವಳು ದೊಡ್ಡವಳಾದ ಮೇಲೆ ಮಾತನಾಡಿಸಬಹುದಲ್ಲ, ಈಗಾಲೇ ಏನು ಅವಸರ? ಅಲ್ಲದೆ ಈಗಲೇ ಸಲಿಗೆಯನ್ನು ತೋರಿಸಿದರೆ ‘ನೆಸೆಕೊಟ್ಟ ನಾಯಿ ನೊಸಲು ನಕ್ಕೀತು’ ಎಂಬಂತಾದರೆ ಕಷ್ಟ. ಅದಕ್ಕೇನೆ ಅವರೆಂದದ್ದು ಕಾಲಿಗಿರುವುದು ಕಾಲಿಗೇ ಇರಬೇಕು.” | up. Why are you in such a hurry. If you dote on her right now, she will soon start taking liberties with you. It will be quite a problem. That is why your father said what is fit for the feet is not fit for the head” | ಅನುವಾದಕರು ಮಾಡಿದ್ದಾರೆ ಹಾಗೂ “ಕಾಲಿಗಿರುವುದು ಕಾಲಿಗೇ ಇರಬೇಕು” ಎಂಬುದನ್ನು ಕೂಡ ಗ್ರಾಂಥಿಕವಾಗಿ ಅನುವಾದಿಸಿರುವುದು ಕಂಡು ಬರುತ್ತದೆ. ಮೂಲ ಭಾಷೆಗೆ ಸಂವಾದಿಯಾದ ಗಾದೆ ಮಾತುಗಳು, ಶಬ್ಧಗಳು, ನುಡಿಗಟ್ಟುಗಳು ಸಿಗದೇ ಇರುವಾಗ ಮೂಲದ ವೈಶಿಷ್ಟ್ಯವನ್ನು ಅನುವಾದದಲ್ಲಿ ತರುವುದು ಸಾಧ್ಯವಾಗುವುದಿಲ್ಲ ಎಂಬುದನ್ನು ಕಾಣಬಹುದಾಗಿದೆ. ಇಲ್ಲಿ ಭಾಷಾಂತರದ ಮಿತಿಯನ್ನು ಗುರುತಿಸಬಹುದಾಗಿದೆ. |
| ೨೮ | ಅಧ್ಯಾಯ ೬ ಪು. ೪೩<br>ಬೆಳ್ಯಮ್ಮನು ಹಿರಣ್ಯನ ಮುಖವನ್ನು ಕಂಡು ‘ಸಣ್ಣ ಧನಿಯರ ಕಣ್ಣೆಲ್ಲ ಇಷ್ಟಿಷ್ಟು ದೊಡ್ಡದಾಗಿದೆ. ಏನು, ನಿನ್ನೆ ಎಲ್ಲಾದರೂ ತಾಳಮದ್ದಲೇ ಇದ್ದಿತ್ತೊ? ಎಂದಳು. | Chapter 6 P 24<br>Belliamma looked at Hiranya's face and said: “Why are junior master's eyes so swollen. Did he attend any music and discourse performance last - night?” | ಕರಾವಳಿ ಕರ್ನಾಟಕದ ಕಲೆಗಳಲ್ಲಿ ಯಕ್ಷಗಾನವೂ ಒಂದು. ಇದರ ಭಾಗವಾದ ‘ತಾಳಮದ್ದಲೆ”ಯೂ ಕೂಡ ಅಲ್ಲಲ್ಲಿ ನಡೆಯುತ್ತದೆ. ಹಿಮ್ಮೇಳದೊಂದಿಗೆ ಅರ್ಥದಾರಿಗಳು ಕುಳಿತು ಯಕ್ಷಗಾನ ಪ್ರಪಂಚದ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಪದ್ಯಗಳಿಗೆ ಅರ್ಥವನ್ನು ಹೇಳುವುದು ಇದರ ವೈಶಿಷ್ಟವಾಗಿದೆ. ಇದಕ್ಕೆ ಸಂವಾದಿಯಾಗಿ ಇಂಗ್ಲಿಷನಲ್ಲಿ ಪರಿಸರದ ಕಾರಣದಿಂದಾಗಿ "music and discourse performance' ಎಂದು ಅನುವಾದಿಸಿದ್ದು ಇದು ಸಮರ್ಪಕವಾದ ಅರ್ಥವನ್ನು ನೀಡುವುದಿಲ್ಲ. ಅಡಿ ಟಿಪ್ಪಣಿಯನ್ನಾದರೂ ನೀಡಿ ಸ್ಪಷ್ಟಪಡಿಸ ಬಹುದಾಗಿತ್ತು. |
| ೨೯ | ಅಧ್ಯಾಯ ೧೦ ಪು. ೪೮<br>ಚಂದ್ರಯ್ಯ ಸರಸಮ್ಮನ ಕೆರೆಯ ಹತ್ತಿರ ರಾತ್ರಿ ಕಾಯುತ್ತ ಕೂತಿದ್ದಾಗ ಎರಡು ಹೆಣ್ಣುಗಳ ನಡುವಿನ ಸಂಭಾಷಣೆ ಕೇಳುತ್ತಾನೆ. ಒಬ್ಬಳು ಹೇಳುವ ಮಾತು – 'ಸರಸಮ್ಮ ಕಾಯದಿದ್ದರೆ, ಅವಳ ತೀರ್ಥದಲ್ಲಿ ಹಾರಿ ಪ್ರಾಣ ಬೀಡುತ್ತೇನೆ'. | ಅಧ್ಯಾಯ ೭ ಪು. ೨೭<br>'If Sarasamma does not profect me, I shall drown myself in her tank" | ಇಲ್ಲಿ 'ತೀರ್ಥ' ಎಂಬ ಪದಕ್ಕೆ 'tank' ಎಂದು ಬಳಸಲಾಗಿದೆ. ಇದು ತೀರಾ ಭಿನ್ನವಾಗಿ ಕಾಣುವ ಅರ್ಥವನ್ನು ನೀಡುತ್ತದೆ. ಭಾಷಾಂತರಕಾರನ ಮಿತಿಯನ್ನು ಎತ್ತಿ ತೋರಿಸುತ್ತದೆ. ತೀರ್ಥ ಎಂದಾಗ holy water, sacred pond ಈ ಅರ್ಥದಲ್ಲಿ ಬಳಸಬಹುದಾಗಿತ್ತು. |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೦ | ಪು. ೪೯<br>'ಅವರಿಬ್ಬರ ಎದೆ ಧಸಕ್ಕೆಂದಿತು, 'ಅಯ್ಯೋ' ಎಂದು ಕೂಗಿದರು....." | Chapter 8 P 28<br>The two women, one quite young with a striking but sad face and the other aged about forty and stumpy, let - out a muffled cry : "Ayyo," They stood still, immobilised by fear, | ಮೂಲದಲ್ಲಿರುವ ಭಾಷೆಯ ಸೊಗಡನ್ನು ಅನುವಾದದಲ್ಲಿ ಪಡಿ ಮೂಡಿಸಲು ಸಾದ್ಯವಾಗದೇ ಇರುವುದನ್ನು ಕಾಣಬಹುದು. ಅನುವಾದದ ಮೂಲದ ಸಹಜವಾದ ಭಾಷಾ ಸೌಂದರ್ಯವನ್ನು ಕಾಯ್ದುಕೊಳ್ಳುವುದು ಇಂತಹ ಸಂದರ್ಭದಲ್ಲಿ ಕಷ್ಟಸಾಧ್ಯವಾಗುತ್ತದೆ. |
| ೩೧ | ಪು. ೫೦<br>".....ಬಾಂಬಾರಿದ ಅರಬ್ಬರ ಒಂಟೆ, ಜಲಾಂಯವನ್ನೇ ಬರಿದು ಮಾಡುವ ಆತುರದಿಂದ ಬಾಯ್ದೆರೆಯುವಂತೆ ಅವಳ ಕಣ್ಣುಗಳಲ್ಲಿ ಅತೃಪ್ತ ಆಸೆಯೊಂದು ಉರಿಯುತ್ತಿತ್ತು....." | P 29<br>".....wearing a white sari, she seemed to be taking in his features as a thirsty camel drinks water." | ಸುನಾಲಿಯು ತನ್ನ ಮನೆಯ ಕೆಲಸದವಳಾದ ಲಚ್ಮಿಯ ಉಪದೇಶವನ್ನು ಕೇಳಿ, ಅವಳನ್ನು ಕೂಡಿಕೊಂಡು ಗುರುವಾರ ರಾತ್ರಿಯಲ್ಲಿ ಸರಸಮ್ಮನ ಗುಡಿಗೆ ಹರಕೆಯನ್ನು ಸಲ್ಲಿಸಲು ಬರುತ್ತಾಳೆ. ಕತ್ತಲೆಯಲ್ಲಿ ಸಲ್ಲಿಸುವ ಈ ಹರಕೆಯನ್ನು ಯಾರೂ ಕಾಣಬಾರದೆಂದು ನಂಬಿಕೆಯಿದೆ. ಆದರೆ ಚಂದ್ರಯ್ಯ ಆ ರಾತ್ರಿಯಲ್ಲಿ ಟಾರ್ಚನ್ನು ಅವರ ಮುಖಕ್ಕೆ ಹಿಡಿದು ಗಾಬರಿ ಹುಟ್ಟಿಸುತ್ತಾನೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | 'ಅಯ್ಯೋ' ಎಂದು ಕೂಗುತ್ತಾರೆ ಇಂಗ್ಲೀಷನ ಭಾಷಾಂತರದಲ್ಲಿಯೂ 'Ayyo' ಎಂದು ಬಳಸಿರುವುದು ಕನ್ನಡ ಭಾರದ ಇಂಗ್ಲೀಷ ಓದುಗರಿಗೆ ಇದು ಅರ್ಥವಾಗದೇ ಹೋಗಬಹುದು. |
| ೩೨ | ಪು. ೫೧<br>'.....ಛೀ – ಇದು ಕನಸು....." ಎಂದು ಎಣಿಸಿ ಚಂದ್ರಯ್ಯ ಮನೆಯ ಹಾದಿ ಹಿಡಿದ. | P 29<br>"Che! Che! This is a dream", Chandrayya thought and wended his way home. | ಕನ್ನಡದಲ್ಲಿ 'ಛೀ' ಎಂಬ ಉದ್ಗಾರವನ್ನು ತೆಗೆಯುವುದು, ನಾವು ಎಣಿಸಿರುವುದು ಸುಳ್ಳು ಎಂತಾದಾಗ ಈ ರೀತಿಯ ಉದ್ಗಾರ ತೆಗೆಯುತ್ತೇವೆ. ಇಂಗ್ಲಿಷನಲ್ಲಿಯೂ 'Che' ಎಂದು ಬಳಸಲಾಗಿದೆ. ಇಂಗ್ಲಿಷ ಭಾಷೆಯಲ್ಲಿ ಅನುವಾದಗೊಂಡ ಈ ಕಾದಂಬರಿಯನ್ನು ಓದುವವರಿಗೆ ಇಂತಹ ಕನ್ನಡದ ಉದ್ಗಾರಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗದೇ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಹೋಗಬಹುದು. ಅನುವಾದ ಅಪೂರ್ಣ ಎಂಬಂತೆ ಭಾಸವಾಗುತ್ತದೆ. |
| ೩೩ | ಅಧ್ಯಾಯ ೧೧ ಪು. ೫೨<br>ಅವನ ಬಾಡಿದ ಮುಖವನ್ನು ಕಂಡು ತಂದೆಯು 'ಏನು ನಿದ್ರೆಯಿಲ್ಲವೇ? ಹೊಟ್ಟೆ ಸರಿಯಿಲ್ಲವೇ? ಹೊಟ್ಟೆ ಸರಿ ಇಲ್ಲವಾದರೆ ಒಂದು ಸಾಸಿವೆಯಷ್ಟು – ಇಡಿ ಬೇಡ – ಜಾಪಾಳ ಮಾತ್ರೆಯನ್ನು ತೆಯ್ದು ತೆಗೆದುಕೊ, ಜಾಸ್ತಿ ತೆಗೆದುಕೊಂಡರೆ ಪೂರ್ವಾಷಢ ಸುರುವಾದೀತು....." | Chapter 8 P 30<br>"What have you slept badly"? or is it stomach upset ? If it is stomach trouble, grate a little of japla tablet and take it. Now don't swallow a whole tablet, but just as much as a mustard seed. If you take more, you will have purgation like July rain. | ಕರಾವಳಿ ಭಾರತದ ಗ್ರಾಮೀಣ ಜನರಲ್ಲಿ ಪ್ರಚಲಿತವಿದ್ದ ಔಷಧಿಯ ಪದ್ಧತಿಯ ಪರಿಚಯ ಇದರಿಂದ ಆಗುತ್ತದೆ. ಹೊಟ್ಟೆ ಸರಿ ಇಲ್ಲದಿದ್ದಾಗ ನೀಡುವ ಮನೆಮದ್ದು ಇದನ್ನು ಅನುವದದಲ್ಲಿಯೂ 'Japla' ಎಂದು ನೇರವಾಗಿ ಅನುವಾದಿಸಲಾಗಿದೆ. ಜಾಸ್ತಿ ತೆಗೆದುಕೊಂಡರೆ ಪೂರ್ವಾಷಢ ಸುರುವಾದಿತು ಎನ್ನುವಲ್ಲಿ ಭೇದಿ ಸುರುವಾಗಬಹುದು. ಎಂಬುದನ್ನು ಸೂಚ್ಯವಾಗಿ ನುಡಿಗಟ್ಟನ್ನು ಬಳಸಿ ಹೇಳಲಾಗಿದ್ದು ಅನುವಾದದಲ್ಲಿ 'like July rain' ಎಂದು ಬಳಸಲಾಗಿದೆ. ಅನುವಾದ ಯಾಂತ್ರಿಕವಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೪ | ಅಧ್ಯಾಯ ೧೪ ಪು. ೬೬<br>ವೆಂಕರಮಣಯ್ಯ ಮಗನಿಗೆ ಇನ್ನೊಂದು ಮದುವೆ ಮಾಡಿಸುವ ತರಾತುರಿಯಲ್ಲಿರುವಾಗ – ಮಗ ಮನಸ್ಸು ಮಾಡದಿರುವಾಗ ಮನೆಯಲ್ಲಿ ರೌದ್ರವತಾರ ತಾಳಿದ ಅವರ ವರ್ತನೇಯು ವಿವರಣೆಯ ಸಂದರ್ಭದಲ್ಲಿ ಅವರ ಕುರಿತಾದ ವರ್ಣನೆ ಈ ರೀತಿ ಬರುತ್ತದೆ.<br>“.....ಅನ್ನ ಬಿದ್ದಂತೆ ದಮ್ಮು ಹೊರಡಿಸುವುದು ಕಷ್ಟವಾಯಿತು. ಮಾತಾಡುತ್ತ ಊಟ ಮಾಡಿ ಗಂಟಲಿಗೆ ಎರಡು ಮೂರಾವರ್ತಿ ಅನ್ನದ ಅಗಳು ಸಿಲುಕಿ ಹತ್ತು ನಿಮಿಷ ಕೆಮ್ಮಿ, ಎರಡು ಬಿಂದಿಗೆ ನೀರನ್ನು ಕುಡಿದು ಅರ್ಧ ಔನ್ಸ್ ಕಣ್ಣೀರು ಸುರಿಸಿ – ‘ಹಾಳು ಊಟ ಇದೊಂದು’ ಎಂದು ಎದ್ದರು. ಊಟ ಮಾಡಿ ಎಲೆ ಅಡಿಕೆಯನ್ನು ತಿನ್ನಲಿಲ್ಲ. | Chapter 8 P 33<br>He bolted down mouthfuls, while his tongue kept going, interrupted by bouts of coughing due to the escape of food particles into his wind pipe. He drank two pails of water, shed half a pint of tears and got up cursing the meal. He tucked a length of cloth in his armpit and was gone. | ‘ಸಿಟ್ಟಿನಲ್ಲಿ ಊಟ ಮಾಡವಾಗ ಅದು ಉಸಿರಿಗೆ ಸಿಲುಕಿ ಕೆಮ್ಮುವುದು ಪರಿಣಾಮವಾಗಿ ಕಣ್ಣಲ್ಲಿ ನೀರು ಬರುವುದು ಊಟವನ್ನು ಶಪಿಸುವುದು’ ಈ ವಿಚಾರಗಳನ್ನು ಮೂಲದಲ್ಲಿನ ಹಾಗೆ ಅನುವಾದದಲ್ಲಿ ಸಾಹಿತ್ವಾಗಿ ಅಭಿವ್ಯಕ್ತಿಗೊಳಿಸಲು ಸಾಧ್ಯವಾಗಿಲ್ಲ ಕೊಡೆ ಮತ್ತು ಪಂಚೆಯನ್ನು ಕಂಕುಳಲ್ಲಿ ತುರುಕಿಕೊಂಡು ನಡೆದಾಡುವವರನ್ನು ವಿಶೇಷವಾಗಿ ಬ್ರಾಹ್ಮಣ ಸಮುದಾಯದಲ್ಲಿ ಕರಾವಳಿಯ ಪ್ರದೇಶದಲ್ಲಿ ಕಾಣಬಹುದಾಗಿದೆ. ಆದರೆ ಕನ್ನಡದ ‘ಪಂಚೆ’ ಎಂಬ ಶಬ್ದಕ್ಕೆ ‘a length of piece’ ಎಂದು ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಹಾಗೂ ಕೊಡೆಯನ್ನು ಕೂಡ ಕಂಕುಳದಲ್ಲಿಯೇ ತುರುಕಿಕೊಂಡಿರುವ ಕುರಿತಾದ ವಿವರಣೆ ಅನುವಾದದಲ್ಲಿ ಬರುವುದಿಲ್ಲ. ಉಡುಗೆ ತೊಡುಗೆಯ ಕುರಿತಾದ ವಿವರಣೆ |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಒಂದು ಕೊಡೆಯನ್ನು ಒಂದು ಪಂಚೆಯನ್ನು ಕಂಕುಳದಲ್ಲಿ ತುರುಕಿಸಿಕೊಂಡು ನಡದೇ ಬಿಟ್ಟರು....." | | ಅಪೂರ್ಣವಾಗಿದೆ ಎನಿಸುತ್ತದೆ. ಪಂಚೆ ಎಂಬುದಕ್ಕೆ a length of peice ಎಂಬುದು ಸಂವಾದಿಯಾಗಿ ಬಳಕೆಯಾಗಿಲ್ಲ. |
| ೩೫ | ಪು. ೬೮<br>".....ಭಾಗೀರಥಿಯು ಕಾಫಿ, ಉಪ್ಪಿಟ್ಟನ್ನು ತಂದಿರಿಸಿ ಸಟಕ್ಕನೆ ಒಳಗೆ ನಡೆದಳು....." | Chapter 10 P 38<br>Bhagirathi brought coffee and uppittu, placed them before here husband and swept in again...." | ಭಾಗೀರಥಿಯು ತನ್ನ ಗಂಡ ಹಿರಣ್ಯ ಬಂದಾಗ ತಂದೆಯ ಒತ್ತಾಯದ ಮೇರೆಗೆ ಕಾಫಿ ಮತ್ತು ಉಪ್ಪಿಟ್ಟನ್ನು ತಂದು ಅವನ ಮುಂದೆ ಇಟ್ಟು ಹೋಗುತ್ತಾಳೆ. ಇಲ್ಲಿ ಕನ್ನಡದ ಉಪ್ಪಿಟ್ಟು ಶಬ್ಧಕ್ಕೆ ಇಂಗ್ಲೀಷನಲ್ಲಿಯೂ uppittu ಎಂದೇ ಬಳಸಿರುವುದನ್ನು ಗಮನಿಸಬಹುದಾಗಿದೆ. ಕನ್ನಡದ ಕೆಲವು ಪಾನೀಯ / ತಿಂಡಿಗಳಿಗೆ ಇಂಗ್ಲಿಷನಲ್ಲಿ ಪರ್ಯಾಯ ಶಬ್ಧಗಳಿದ್ದು ಇನ್ನೂ ಕೆಲವಕ್ಕೆ ಯಾವುದೇ ಪರ್ಯಾಯ ಶಬ್ಧಗಳು ಲಭ್ಯವಿಲ್ಲದಿರುವುದನ್ನು ತಿಳಿದುಕೊಳ್ಳಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೬ | ಅಧ್ಯಾಯ ೧೫ ಪು. ೩೧<br>'ನನಗೆ ಮೊದಲು ಕೊಟ್ಟಿದ್ದು ಎಂಜಲು ಅನ್ನ. ಧಾರೆಯ ಮಂಟಪದಿಂದ ಇಲ್ಲಿಗೆ ಬರುವ ತನಕ ಎಂಜಲೇ ಗತಿ. ಈಗ ಅನ್ನ ಕೊಡುವವರೊಬ್ಬರು ದೊರೆತಿದ್ದಾರೆ. ಪ್ರೀತಿಸಲು ಬಂದವರು; ಬೆಲೆಯರಿಯದೆ ಕೊಂಡವರಲ್ಲ....." | P 39<br>"well, you offered me only the leavings, and I lived on it from the day I married to the day I returned to this home. Now I have been offiered something whole-some. That is love . I know its worth and have accepted it. | ಇಲ್ಲಿ 'ಎಂಜಲು ಅನ್ನ' ಎಂದರೆ ಬಿಟ್ಟಿ ಅನ್ನ, 'ಹಂಗಿನ ಅನ್ನ' ತಿನ್ನುವುದು – ಎಂದು ತಿರಸ್ಕಾರದಿಂದ ಹೇಳುವ ಭಾಗೀರಥಿ – ತನ್ನನ್ನು ನಿಜವಾಗಿ ಪ್ರೀತಿಸುವವರು ಈಗ ದೊರೆಕಿದ್ದಾರೆ ಎಂಬ ಅವಳ ಅಭಿಪ್ರಾಯವು ಅನುವಾದದಲ್ಲಿಯೂ ಸಮರ್ಪಕವಾಗಿ ಮೂಡಿ ಬಂದಿದೆ ಎನ್ನಬಹುದು. |
| ೩೭ | ಪು. ೩೧<br>ಗೋಪಾಲಯ್ಯನ ತಲೆ ಬಿಸಿಯಾಯಿತು. ತನ್ನ ಮಗಳು ಪತಿವಿರಹಿಂರಾಗಿ ಇರುವುದು ಸಾಧ್ಯವಿದಲೆಂದೂ, ಅವಳಂಥವಳು ಕಾಮಕ್ಕೆ ಬಲಿಯಾದರೆ ಅದು ಮಾಂಸದ ಶೀಲವೆಂದೂ ಬಲ್ಲರು. ಆದರೆ ಅದು ಅಂತರಂಗದಲ್ಲಿ | P 39<br>Then in a moment of lucidity he under-stood her woe and fell - pity, To be living like a spinister even after marriage was no joy. If she had succumbed to the urgings of the flesh, it could not be held against her. | ಮೂಲದಲ್ಲಿನ ಕಾರಂತರ ಭಾಷಾ ಶೈಲಿ – 'ಮಾಂಸದ ಶೀಲ' ಈ ಪದ ಪ್ರಯೋಗಗಳು ಅನುವಾದದಲ್ಲಿ ಸಹಜವಾಗಿ ಬರಲು ಸಾಧ್ಯವಾಗಿಲ್ಲವಾದರೂ ಕಾರಂತರ ವಿಚಾರಗಳನ್ನು ವ್ಯಕ್ತ ಪಡಿಸುವಲ್ಲಿ ಅನುವಾದದ ಈ ಸಾಲುಗಳು ಸಮರ್ಪಕವಾಗಿ ಮೂಡಿಬಂದಿವೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಬಹಿರಂಗದಲ್ಲಿ ಹಾಗೆ ಅನ್ನಲು ಬಂದೀತೆ? ಒಪ್ಪಲು ಬಂದೀತೇ? | | |
| ೩೪ | ಪು. ೭೨<br>"ಸುಮ್ಮನೆ ಯಾರ್‍ಯಾರು ಅವಳ ಕಿವಿಯನ್ನು ಚುಚ್ಚಿರಬೇಕು" | P 40<br>Someone has poisoned her mind. | ಅವಳಿಗೆ ಚಾಡಿ ಹೇಳಿ ಮನಸ್ಸನ್ನು ಹಾಳು ಮಾಡಿದ್ದಾರೆ ಎಂಬುದರ ಸಂವಾದಿಯಾಗಿ ಇಂಗ್ಲಿಷನಲ್ಲಿ ಈ ಮಾತು ಸಮರ್ಪಕವೆಸಿತ್ತುದೆ. ಅನುವಾದದ ಯಶಸ್ಸನ್ನು ಎತ್ತಿ ಹಿಡಿಯಲು ಇಂತಹ ನುಡಿಗಟ್ಟುಗಳ ಲಭ್ಯತೆ ಉದ್ದಿಷ್ಟ ಭಾಷೆಯಲ್ಲಿ ಇದ್ದಲ್ಲಿ ಸಾಧ್ಯವಾಗುತ್ತದೆ. |
| ೩೫ | ಪು. ೭೨<br>ಅದೇ ಕಿರುಮನೆಯಲ್ಲಿ ನಾಲ್ಕುದಿನ ನಡೆದ ಉರುಟಣಿ ಆರತಿಯ ಸಂಭ್ರಮಗಳು, ಆ ಜನರ ಸಮುದಾಯದಲ್ಲಿ ಒಬ್ಬರು ಇನ್ನೊಬ್ಬರನ್ನು ಕದ್ದು ನೋಡಲು ಮಾಡಿದ ಯತ್ನಗಳು, ಅವನ ಮನಸ್ಸಿಗೆ | P 40<br>It was in that very room that he had first set his eyes on her two years ago. The picture of a coy girl ravishing in her bridal attire and Jewellery, stood tremulously | 'ಉರುಟಣೆ' 'ಶೋಭಾನೆ ಹಾಡುಗಳು' ಮುಂತಾದುವುಗಳು ಮದುವೆಯ ಸಂದರ್ಭ ಆಚರಣೆಗಳನ್ನು ಪ್ರತಿನಿಧಿಸುತ್ತದೆ. ಸಾಂಸ್ಕೃತಿಕತೆಯನ್ನು ಅನುವಾದದಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸರಳವಾದ ಅನುವಾದ ಮಾತ್ರ ಸಾಧ್ಯವಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಹಸುರಾಗಿ ಹೊಳೆದುವು. ಕಣ್ಣೆದುರಿಗೆ ಮದುವಣ ಗಿತ್ತಿ, ಭಾಗೀರಥಿಯೇ ಕಾಣಿಸಿದಳು. ಕಿವಿಗೆ 'ಮಧು ಬೇಕೇ ಚಪ್ಪರಿಕೆ.....' ಎಂಬ ಶೋಭಾನೆ ಹಾಡು ನಾಗಸ್ವರದಂತೆ ಕೇಳುತ್ತಿತ್ತು. | before his mind's eye . He recalled how he had avidly savoured here stealthy cursory glances. The soft music of the wedding song rang in his ears, and a medley of emotions raged within him as he saw Bhagirathi sitting beside an oil lamp here head bent. | |
| ೩೬ | ಪು. ೮೧<br>ಎಲ್ಲ ಮಾಡಿಸಲಿಕ್ಕೆ ಹಾಗೆ ಬಂದಿದ್ದೇನೆ. ನಮ್ಮಲ್ಲಿ ವಕೀಲ ರಾಮಭಟ್ಟರಲ್ಲಿ ಒಬ್ಬ ಹುಷಾರಿನ ಅಕ್ಕಸಾಲಿ ಇದ್ದಾನೆ' ಎಂದರು. 'ಅಲ್ಲೇ ವಕೀಲರ ಹತ್ತಿರ ಸಾಲ ಮಾಡಿ ಪವನಿಗೆ ೨೩ರಂತೆ ದಂಡಕೊಟ್ಟು ಬುಗುಡಿ, ಸರಪಳಿ, ಒಂದು ಜಡೆ ಬಳೆ, ಗೆಜ್ಜೆಟಿಗೆ ಇಷ್ಟೆಲ್ಲಾ ಮಾಡಲು ಹಾಕಿ ಬಂದಿದ್ದೇನೆ' ಎಂದರು. | Chapter 11 P 42<br>"I have ordered everything. Our advocate Ram Bhat knows of an accomplished goldsmith. I have bought gold worth rupees two hundred and given it to the goldsmith to prepare the ornaments; a bugudi a chain, a pair of bangles" | ಇಲ್ಲಿ ಕರಾವಳಿ ಪ್ರದೇಶದ ಜನರು ತೊಡುವ ಆಭರಣಗಳ ಕುರಿತಾದ ವಿವರ ಸಿಗುತ್ತದೆ. ಮದುವೆಯಂತಹ ಸಂದರ್ಭದಲ್ಲಿ ಯಾವ ರೀತಿಯ ಆಭರಣಗಳನ್ನು ತೊಡುತ್ತಿದ್ದರು – ಎಂಬ ಸಾಂಸ್ಕೃತಿಕ ವಿಚಾರ ಇನ್ನೊಂದು ಸಾಂಸ್ಕೃತಿಕ ಪರಿಸರಕ್ಕೆ ಅನುವಾದದ ಮೂಲಕ ತಲುಪಿಸಲು ಸಾಧ್ಯವೇ ಎಂಬ ಪ್ರಶ್ನೆ ಹುಟ್ಟುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಇಲ್ಲಿ –ಬುಗುಡಿಗೆ – Bugudi, ಸರಪಳಿಗೆ a chain, ಒಂದು ಜತೆ ಬಳೆ - a pair of bangles 'ಗೆಜ್ಜೆಟ್ಟಿಗೆ' ಇದನ್ನು ಅನುವಾದಿಸಿಲ್ಲ. ಗೆಜ್ಜೆಟ್ಟಿಗೆ ಎಂದರೆ ಒಂದು ಬಗೆಯ ಕಂಠಾಭರಣ ಇದಕ್ಕೆ ಉದ್ದಿಷ್ಟ ಭಾಷೆಯಲ್ಲಿ ಪರ್ಯಾಯ ಶಬ್ದ ಇಲ್ಲದಿರುವುದು ಕಂಡು ಬರುತ್ತದೆ. ಆದರೆ ಬುಗುಡಿ ಇದನ್ನು Bugudi ಎಂದೇ ಬಳಸಿದ್ದು ಇದು ಯಾವ ಬಗೆಯ ಆಭರಣ ಎಂಬುದು ಕೇವಲ ಇಂಗ್ಲಿಷ ಬಲ್ಲ ಓದುಗರಿಗೆ ಅರ್ಥವಾಗಲಾರದು. ಅಡಿ ಟಿಪ್ಪಣಿಯ ಮೂಲಕ ವಿವರಣೆ ನೀಡುವ ಸಾಧ್ಯತೆ ಇತ್ತು. ಹೀಗೆ ಒಂದು ಪ್ರದೇಶದ ವಿಶಿಷ್ಟವಾದ ಉಡುಗೆ ತೊಡುಗೆಯನ್ನು ಇನ್ನೊಂದು ಭಿನ್ನ ಪ್ರದೇಶಕ್ಕೆ ಪರಿಚಯಿಸುವಲ್ಲಿ ಈ ರೀತಿಯ ಸಾಂಸ್ಕೃತಿಕ ತೊಡಕುಗಳನ್ನು ಎದುರಿಸಬೇಕಾಗುವುದನ್ನು ಅರಿಯಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೭ | ಪು. ೮೩<br>ಅಂಗಳ, ಜಗುಲಿ, ಅಡುಗೆಮನೆ ಎಲ್ಲ ಧೂಳೆಬ್ಬಸುತ್ತಿದಾರೆ. 'ಏ ಇವಳೆ, ಇವಳೇ ಎಂದು ಒದರುತ್ತಿದ್ದಾರೆ. | P 44<br>He bounded about the court yard, shouting "Hey, my woman! my woman". | ಹೆಂಡತಿಯನ್ನೇ ಕರೆಯುತ್ತಿರುವುದು ಎಂಬುದು ಅನುವಾದದಲ್ಲಿ ಸ್ಪಷ್ಟವಾಗುವುದಿಲ್ಲ. "ಇವಳೇ, ಇವಳೇ" ಎನ್ನುವುದನ್ನು "My woman my woman" ಎಂದು ಕರೆಯುವುದು ಕೃತ್ರಿಮವಾಗಿ ಕಾಣಿಸುತ್ತದೆ. |
| ೩೮ | ಪು. ೮೩<br>'ಅಷ್ಟು ತಿಳಿಯಲಿಕ್ಕೆ ತಲೆ ಎಲ್ಲಿಂದ ಬರಬೇಕು? ಹೋಗಾಚೆ, ಹಪ್ಪಳ, ಸಂಡಿಗೆ ಸ್ವಲ್ಪ ಮಾಡಿದರೆ ಸಾಕು. ನಾಲ್ಕು ದಿವಸದ ಲಗ್ನವೆಂದು ನೆಲವನ್ನೆಲ್ಲ ಪಾಯಸದಿಂದ ಸಾರಿಸುವುದು ಬೇಡ. ಅದು ಅವರಿಗೂ ಇಷ್ಟವಾಗದು ತಿಳಿಯಿತೇ. ವಕೀಲ ರಾಮ ಭಟ್ಟರೆಂದರೆ ಊರಿಂದೂರಿಗೇ ಗೊತ್ತು. ಅವರ ಸಂಬಂಧ ಎಂದರೆ ನಾಲ್ಕು | P 44<br>"How can you understand when you are bereft of human faculties? Get away and start preparations for the wedding. No extravangance. A wedding does not mean that the house should overflow with porridge. The boy's side would not like to see wastage. Advocate Ram Bhat is known all over the land. To him every- | ಕರಾವಳಿ ಕರ್ನಾಟಕದಲ್ಲಿ ಬ್ರಾಹ್ಮಣ ಕುಟುಂಬಗಳಲ್ಲಿ ನಾಲ್ಕು ದಿನಗಳವರೆಗೆ ನಡೆಯುವ ಮದುವೆಯ ಸಂದರ್ಭದಲ್ಲಿ ತಯಾರಿಸುವ ಅಡುಗೆಯ ಕುರಿತಾಧ ವಿವರಗಳು ಮೂಲದಲ್ಲಿ ಸಹಜವಾಗಿ ಮೂಡಿಬಂದಿವೆ. "ನೆಲವನ್ನೆಲ್ಲ ಪಾಯಸದಿಂದ ಸಾರಿಸುವುದು ಬೇಡ" ಎಂದರೆ ಅವಶ್ಯಕತೆಗಿಂತ ಹೆಚ್ಚಾಗಿ ಪಾಯಸವನ್ನು ತಯಾರು ಮಾಡುವುದು ಬೇಡ ಎಂಬುದನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಹೋಳಿಗೆಗಳಿಗಿಂಥ ಹೆಚ್ಚಾಗಲಿಕ್ಕಿಲ್ಲ; ಎರಡು ಸುಕ್ಕಿನುಂಡೆಗಳಿಂದ ಕಡಿಮೆಯಾಗಲಿಕ್ಕಿಲ್ಲ.....ಲಗ್ನ ಇಲ್ಲಲ್ಲ ಇಲ್ಲಿ ಬರಿಯ ಒಂದು ಆರತಿ, ಅಕ್ಷತೆ ಇಷ್ಟೆ. ಅದೂ ಚುಟುಕಿನಲ್ಲಿ. ಲಗ್ನವಾಗುವುದು ಕಣ್ವ ತೀರ್ಥದಲ್ಲಿ. ಅವರು ಆ ದಿನ ರೈಲಿಗೆ ಬರುತ್ತಾರೆ. ನಾವು ಬೆಳಗಿನ ಜಾವಕ್ಕೆ ಅಲ್ಲಿಗೆ ಹೋದರಾಯಿತು. ಎಲ್ಲಿ ಗಳಿಗೆ ಒಂದರಲ್ಲಿ ಪಡ್ಚ..... ತಿಳಿಯಿತೇ?' | thing should be within set limits. Not a grain should go waste, not one piece of sweet meat . The wedding won't be here. Here we shall have only a small function to bless the couple, and that too very fru-gally. The wedding would be al Kanwa Tirth. They would come there that day by train. We have to start from here at day break. Everything will finish off in no time Do you understood?" | ಹೇಳುತ್ತದೆ. 'ಹೋಳಿಗೆ'ಯನ್ನು ತಯಾರು ಮಾಡುವುದು– 'ಸುಕ್ಕಿನುಂಡೆ' ಇದು ವಿಶೇಷವಾಗಿ ಇಲ್ಲಿನ ಪ್ರಾದೇಶಿಕ ತಿಂಡಿಯ ವಿವರಣೆ ಕೊಡುತ್ತದೆ. ಅನುವಾದದಲ್ಲಿ – ಅನುವಾದದಲ್ಲಿ ಈ ಆಹಾರ ಪದಾರ್ಥಗಳ ಹೆಸರುಗಳನ್ನು ಅನುವಾದಿಸಲಾಗಿಲ್ಲ. "Sweet meat' ಎಂದು ಬಳಸಿರುವುದು ಮೂಲದಲ್ಲಿರುವ ವಿಚಾರವನ್ನು ಸಮರ್ಪಕವಾಗಿ ಅಭಿವ್ಯಕ್ತಗೊಳಿಸುವುದಿಲ್ಲ. ಹೀಗೆ ಒಂದು ಪ್ರದೇಶಕ್ಕೆ ಸೀಮಿತವಾದ, ಜನರು ತಯಾರಿಸುವ ಅಡುಗೆಯ ವಿಧಾನಗಳು ಇನ್ನೊಂದು ಪರಿಸರಕ್ಕೆ ಪರಿಚಯಿಸುವಾಗ ಎದುರಾಗುವ ತೊಡಕನ್ನು ಗುರುತಿಸಬಹುದಾಗಿದೆ. |
| ೩೧ | ಪು. ೮೪<br>"ಸುಮ್ಮನೆ ಸಂಸಾರವೆಂಬೊಂದು ಕೋದಂಟಿ" | ಅನುವಾದಿಸಿರುವುದಿಲ್ಲ | ರಾಮ ಭಟ್ಟರ ತಮ್ಮ ಸೀತಾರಾಮನ ವ್ಯಕ್ತಿ ಚಿತ್ರಣದ ಸಂದರ್ಭದಲ್ಲಿ ಬರುವ ಈ ಮಾತುಗಳು, |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಕೊದಳಿಗೆ ಕಟ್ಟಿಕೊಂಡರೆ ಸ್ವಾತಂತ್ರ್ಯಕ್ಕೊಂದು ತಡೆ....." | | ಸೀತಾರಾಮನಿಗೆ ಮದುವೆಯ ಕುರಿತಾಗಿ ಇರುವ ವಿಚಾರಗಳು – ಸಂಸಾರ ಎಂಬುದು ಕೊರಳಿಗೆ 'ಕೊದಂತಿ" ಕಟ್ಟಿಗೊಂಡ ಹಾಗೆ ಎಂಬ ಹೋಲಿಕೆಯನ್ನು ಮೂಲದಲ್ಲಿ ನೀಡಲಾಗಿದೆ. ಇದನ್ನು ಅನುವಾದಕರು ಅನುವಾದಿಸಿಲ್ಲ. 'ಕೊದಂತಿ' ಎಂಬ ಪ್ರಾದೇಶಿಕ ಶಬ್ಧಕ್ಕೆ ಕಾರಂತರು ಮೂಲ ಕಾದಂಬರಿಯಲ್ಲಿ ದನಕರುಗಳು ಓಡಿ ಹೋಗದಂತೆ ಕೊರಳಿಗೆ ಕಟ್ಟುವ ಮರದ ಬಡಿಗೆ ಎಂಬ ವಿವರಣೆ ನೀಡಿದ್ದಾರೆ. |
| ೩೨ | ಅಧ್ಯಾಯ ೧೯ ಪು. ೯೬<br>ಮಧ್ಯಾಹ್ನದ ಹೊತ್ತು ನಡುನೆತ್ತಿಗೇರಿತ್ತು. ಪುಟ್ಟು ಮಣಿಯು ಜಾನಕಿಯನ್ನು ಕರೆದು "ಅಮ್ಮ, ಅಕ್ಕನೂ ಭಾವನೂ ಬಂದರು' ಎಂಬ ಸುವಾರ್ತೆಯನ್ನು ಸಾರಿದಳು. | Chapter 11 P 51<br>It was midday, when Puttumani ran inside to her mother and announced; "Mother, sister and here husband are coming". | ಕನ್ನಡ ಭಾಷೆಯಲ್ಲಿನ ಸಂಬಂಧ ವಾಚಕಗಳಿಗೆ ಪರ್ಯಾಯವಾಗಿ ಇಂಗ್ಲಿಷ ಭಾಷೆಯಲ್ಲಿ ಸಂಬಂಧ ವಾಚಕಗಳು ಸಿಗಲಾರವು. ಅಕ್ಕನ ಗಂಡನನ್ನು ಕನ್ನಡದಲ್ಲಿ 'ಭಾವ' ಎಂದು ಕರೆದರೆ ಇಂಗ್ಲೀಷನಲ್ಲಿ "her husband" ಎಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಸಾಂಸ್ಕೃತಿಕವಾಗಿ ಇಂತಹ ತೊಡಕುಗಳು ಒಂದು ಭಾಷೆಯಿಂದ ಇನ್ನೊಂದು ಬಾಷೆಗೆ ಅನುವಾದಿಸುವಾಗ ಎದುರಾಗುವುದು. |
| ೩೩ | ಅಧ್ಯಾಯ ೨೧ ಪು. ೧೦೨<br>"ಮದುವೆಯಾದ ಬಳಿಕ ತಾನು ತನ್ನ ಮನುಷ್ಯತ್ವ ಇವೆಲ್ಲವನ್ನೂ ಗಂಡನ ಕಾಲ ತುಳಿತಕ್ಕೆ ಬಲಿಕೊಡಬೇಕು. ಹಾಗೆ ಮಾಡಿದರೆ ಕತ್ತೆ, ನಾಯಿ, ಕೋತಿಯೆಂದು ಯಾವ ಬೈಗಳನ್ನೂ ಸಹಿಸಬಹುದು, ಒದೆಯನ್ನು ತಾಳಬಹುದು. ಅಷ್ಟು ನಿಂದೆಯಿಂದ ಕಂಡ ಸ್ತ್ರೀ ಜಂತು ಉಚ್ಚ ಪೀಠದ ಮೇಲೆ ಕುಳಿತ ಪುರುಷ ದೇವನಿಗೆ ರಾತ್ರಿ ಕಾಲಕ್ಕೆ ಅನಿವಾರ್ಯ, ಭೂತಕ್ಕೆ ಸುಳಿದೆಸೆಯುವ ಕೋಳಿಯಂತೆ, ಕಾಮಕ್ಕೆ ಸುಳಿದೆಸೆಯುವ ಕೋಳಿ ಹೆಣ್ಣಲ್ಲವೇ? | Chapter 13 P 53<br>Once married, women had to erase their egos and suppress their self - esteem. To neither had they any right - and the only justification of their existence was the satiation of their husband's lust. Men were gods, gods on high pedestats, and women only offerings to them. | ಕಾರಂತರು ಇಲ್ಲಿ ಸುನಾಲಿಯ ಪಾತ್ರದ ಮೂಲಕ ಹೆಣ್ಣಿನ ಮನಸ್ಸಿನಲ್ಲಿ ನೆಲೆನಿಂತಿರುವ ಕಹಿ ಭಾವನೆಗಳನ್ನು ಪುರುಷ ದೌರ್ಜನ್ಯವನ್ನು ಚಿತ್ರಿಸಿದ್ದಾರೆ. ಗಂಡನಿಂದ ಶೋಷಣೆಗೆ ಒಳಗಾಗುವ ಹೆಣ್ಣು, ಗಂಡಿನ ಕಾಮದ ದಾಹಕ್ಕೆ ಮಾತ್ರಬೇಕೇ ಹೊರತು ಅವಳಿಗೆ ಸ್ವತಂತ್ರವಾದ ಸ್ಥಾನಮಾನ ಇಲ್ಲದಿರುವುದು. ಅವಳು ಬಲಿಪಶುವಾಗುವ ಚಿತ್ರಣ ಇದೆ. ಈ ವಿಚಾರಗಳನ್ನು ಕಾರಂತರು ಕರಾವಳಿ ಕರ್ನಾಟಕದಲ್ಲಿ ಇರುವ ಭೂತಾರಾಧನೆ, ಭೂತಕ್ಕೆ ಕೋಳಿಯನ್ನು ಸುಳಿದು ಎಸೆಯುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಸಂದರ್ಭದೊಂದಿಗೆ ಹೋಲಿಸಿದ್ದಾರೆ. ಅನುವಾದದಲ್ಲಿ ಈ ಹೋಲಿಕೆಗಳು ಕಂಡು ಬರುವುದಿಲ್ಲ. "ಭೂತಾರಾಧನೆ" ವಿಶಿಷ್ಟವಾದ ಕರಾವಳಿ ಸಂಸ್ಕೃತಿಯ ಭಾಗವಾಗಿದೆ. ಹೆಣ್ಣನ್ನು ಭೂತಕ್ಕೆ ಸುಳಿದು ಎಸೆಯುವ ಕೋಳಿಗೆ ಕಾರಂತರು ಹೋಲಿಸಿದ್ದಾರೆ. |
| ೩೪ | ಪು. ೧೦೩<br>ರಾಜೀವಿ 'ನಿನಗೆ ಮಾನವಿಲ್ಲ, ಮರ್ಯಾದೆಯಿಲ್ಲ. ಮೀಸೆ ಬಂದ ಗಂಡಸಿಗಿಂತ ಪೌರುಷ ಮಾತನಾಡುತ್ತೀ.....ನಿನ್ನನ್ನು ತವರು ಮನೆಗೆ ಕಳುಹಿಸುತ್ತೇವೆ'. ಎಂದಳು. | P 54<br>She told sunalini: "You have no self - respect, no sense of shame. You are more conceited than a man. We shall you out of this house". | ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮೀಸೆ ಪೌರುಷದ ಸಂಕೇತ ಎಂಬುದು ರೂಢಿಯಲ್ಲಿರುವ ವಿಚಾರ ಆಗಾಗ 'ಮೀಸೆ ಹೊತ್ತ ಗಂಡಸು ಪರಾಕ್ರಮಿ' ಎಂಬ ವಿಚಾರಗಳನ್ನು ಆಡು ಮಾತಿನಲ್ಲಿ ಬಳಕೆಯಲ್ಲಿದೆ. ಅನುವಾದದಲ್ಲಿ ಇದನ್ನು ಯಥಾವತ್ತಾಗಿ ಅನುವಾದಿಸಿಲ್ಲ. ಭಾಷೆಯ ಮಿತಿಯನ್ನು ಗುರುತಿಸಬಹುದಾಗಿದೆ. |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೫ | ಪು. ೧೦೪<br>'....ನಿಮ್ಮ ಅಪ್ಪನ ಹತ್ತಿರ ಹೋಗಿ – ಇದು ನಮ್ಮಿಂದ ಬಾಳಿಸಲು ಬಾರದು ಮಾಲು – ಎಂದು ಬರುತ್ತೇನೆ'. | P 54<br>'I shall take you back to your parents in Mangalore tomorrow and tell them it is impossible for me to live with you". | 'ನಮ್ಮಿಂದ ಬಾಳಿಸಲು ಬಾರದ ಮಾಲು' ಎಂಬ ಪ್ರಾದೇಶಿಕ ಭಾಷೆಯ ಶೈಲಿ ಅನುವಾದದಲ್ಲಿ ವ್ಯಕ್ತವಾಗಲಿಲ್ಲ. ಸರಳವಾದ ಅನುವಾದವನ್ನು ಕಾಣಬಹುದಾಗಿದೆ. ಮೂಲದ ಸೊಗಡನ್ನು ಕಾಯ್ದುಕೊಳ್ಳುವುದು ಸಾಧ್ಯವಾಗಿಲ್ಲ– ಈ ರೀತಿಯ ನುಡಿಗಟ್ಟುಗಳನ್ನು ಭಿನ್ನ ಸಂಸ್ಕೃತಿಯನ್ನು ಹೊಂದಿರುವ ಭಾಷೆಯಲ್ಲಿ ಅನುವಾದಿಸುವುದು ಸುಲಭದಲ್ಲಿ ಸಾಧ್ಯವಾಗಲಾರದು. |
| ೩೬ | ಅಧ್ಯಾಯ ೨೨ ಪು. ೧೦೨<br>'ಮೆಲ್ಲಗೇನು ಬೇಡ.....ಸರಸಮ್ಮನಿಂದ ಮಣ್ಣು ಸಹ ಅಗಲಿಲ್ಲ. ಅವಳು ಮನುಷ್ಯರಿಗೆ ಬುದ್ಧಿ ಕೊಟ್ಟಾಳೋ ಏನೋ; ರಾಕ್ಷಸರನ್ನು ಏನು ಮಾಡಿಯಾಳು' ಎಂದಳು. | P 56<br>"Why do you speak in an under tone? Sarasamma has done me no good, absolutely no good. She can perhaps reform man, not demons" | 'ಸರಸಮ್ಮನಿಂದ ಮಣ್ಣು ಸಹ ಆಗಲಿಲ್ಲ'; ಎಂಬ ಭಾಷೆಯಲ್ಲಿನ ತೀಕ್ಷ್ಣತೆ, ಹರಿತ – ಅನುವಾದದಲ್ಲಿ ಕಂಡು ಬರುವುದಿಲ್ಲ. ಈ ಮೇಲೆ ತಿಳಿಸದ ಒಂದು ಭಾಷೆಯಲ್ಲಿ ಪರಿಣಾಮಕಾರಿಯಾಗಿ ಓದುಗರ ಮನಸ್ಸನ್ನು ತಟ್ಟಬಲ್ಲ ಕೆಲವು ನುಡಿಗಟ್ಟುಗಳು, ಭಾಷಾ ಪ್ರಯೋಗಗಳು ಇನ್ನೊಂದು ಭಾಷೆಯಲ್ಲಿ ಸಾಧ್ಯವಾಗದಾದಾಗ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದ ಯಾಂತ್ರಿಕವಾಗುತ್ತದೆ. |
| ೩೭ | ಅಧ್ಯಾಯ ೨೩ ಪು. ೧೧೨<br>ಆಕೆ ಸಿಟ್ಟಿನಿಂದ 'ನನಗ್ಯಾರಿಲ್ಲ ಯಜಮಾನರು' ಎಂದಳು | Chapter 13 P 59<br>"No, I have no husband" | ಆಡುಮಾತಿನಲ್ಲಿ 'ಯಜಮಾನರು' ಎಂದರೆ ಗಂಡ ಎಂದೇ ಅರ್ಥ. ನೇರವಾಗಿ ಇದನ್ನು ಅನುವಾದಿಸಿದಲ್ಲಿ owner ಎಂದು ಆಗುತ್ತಿತ್ತು ಅನುವಾದಕರು ಮೂಲದ ಅರ್ಥವನ್ನು ನೀಡುವ ಸಲುವಾಗಿ "husband" ಎಂದೇ ಬಳಸಿರುವುದು – ಸಮರ್ಪಕವಾಗಿದೆ. |
| ೩೮ | ಅಧ್ಯಾಯ ೨೪ ಪು. ೧೧೮<br>'ಹಾಗೆಂದು ಆಸೆ ಅದರಿಂದಲೇ ನಿನ್ನನ್ನು ಒಪ್ಪಲಾರೆ..... ನೋಡು ನಾನು ಮಾಂಸಬದ್ಧ ಜೀವಿ. ಬರಿಯ ಮನಸ್ಸಲ್ಲ; ನನಗೆ ಶರೀರವಿದೆ. ಅವೆರಡೂ ಪ್ರೇಮ, ಸುಖ ಬಯಸುತ್ತವೆ. | Chapter 14 P 62<br>'But how can I love you? I am a living being in flesh and blood, not merely a mind. But mind and body both yearn for love and happiness and that is what I have been searching for....." | ಪ್ರೇತ ಹಾಗೂ ಮನುಷ್ಯರ ನಡುವಿನ ವ್ಯತ್ಯಾಸಗಳ ಕುರಿತಾದ ಚರ್ಚೆ ಇಲ್ಲಿದೆ. ಚಂದ್ರಯ್ಯ ಬೆಳ್ಯಕ್ಕನ ಪ್ರೇತದ ಕುರಿತಾಗಿ ಹೇಳುವಾಗ – 'ತಾನು ಮಾಂಸ ಬದ್ಧ ಜೀವಿ' ಎಂಬ ಕಾರಂತರ ಪರಿಣಾಮಕಾರಿಯಾದ ಭಾಷೆಯ ಸೊಗಡನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದದಲ್ಲಿ ಯಥಾವತ್ತಾಗಿ ಪಡಿ ಮೂಡಿಸುವುದು ಸಾಧ್ಯವಾಗದಿದ್ದರೂ ತಕ್ಕಮಟ್ಟಿಗೆ ಸಮರ್ಪಕಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಅನುವಾದದ ಯಶಸ್ಸನ್ನು ಕಾಣಬಹುದು – ಮೂಲದ ಆಶಯವನ್ನು ಕಾಯ್ದುಕೊಳ್ಳಲಾಗಿದೆ. |
| ೩೯ | ಅಧ್ಯಾಯ ೨೪ ಪು. ೧೨೦<br>'ಅದು ನನ್ನದೇ ಮನೆ – ನನ್ನ ಪತಿ ನನ್ನನ್ನು ಈ ಅವಸ್ಥೆಗೆ ಇಳಿಸಿದವನು, ನೀಲಾಚಲ ಮಲಗಿದ್ದ ಸ್ಥಳ ! ಅವನ ಪ್ರೇತ ನನ್ನನ್ನು ಅಲ್ಲಿ ಅಂಕೆಯಲ್ಲಿರುತ್ತದೆ! ನಾನು ಬೇಡೆಂದು ರೋಧಿಸಿದರೂ, ಅವನ ರೋಗಿಷ್ಟ ಶರೀರದೊಡನೆ ನನ್ನನ್ನು ಸುಟ್ಟರು. ನರಘಾತಕರು ನನ್ನನ್ನು ಸುಟ್ಟು ಮಹಾ ಸತಿಯನ್ನಾಗಿ ಮಾಡಿದರು....." | P 63<br>"True that is in a way my home. That was the place where my husband Nilachal, who has reduced me to this plight was cremated. Inspite of my protests, pleadings and screanings, pelple pushed me into his pyre and burnt me along with his body. They burnt me alive, those murderous people, and then idolised me | ಸರಸಮ್ಮನ ಸಮಾಧಿಯ ಗುಟ್ಟನ್ನು ಕಾರಂತರು ಪ್ರೇತದ ಮೂಲಕವೇ ಮಾಡುತ್ತಾರೆ. ಹೆಣ್ಣಿನ ಮೇಲೆ ನಡೆಯುವ ಶೋಷಣೆ ಮಣ್ಣಿನಲ್ಲಿ ಹೂತು ಹೋಗುವುದನ್ನು ಬೆಳಕಿಗೆ ತಂದಿರುತ್ತಾರೆ. ಹೇಗೆ ಬಲಾತ್ಕಾರ ಪೂರ್ವಕವಾಗಿ ಚಿತೆಗೆ ತಳ್ಳಿ ಅವಳನ್ನು ಮಹಾಸತಿ ಮಾಡಿದರು ಎಂಬ ವಿಚಾರಗಳು ಅನುವಾದದಲ್ಲಿಯೂ ಸಮರ್ಪಕವಾಗಿಯೇ ಮೂಡಿಬಂದಿವೆ. 'ಮಹಾಸತಿ' ಎಂಬುದಕ್ಕೆ 'an |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | and began to worship me as an epitome of wifely dedication". | epitome of wifely dedication' ಎಂದು ಬಳಸುವುದನ್ನು ಗಮನಿಸಬಹುದು. ಕನ್ನಡದಲ್ಲಿರುವ – 'ಮಹಾಸತಿ' ಪದಕ್ಕೆ ಪರ್ಯಾಯ ಪದ ಇಂಗ್ಲಿಷಿನಲ್ಲಿ ಲಭ್ಯವಾಗದಿರುವುದನ್ನು ಕಾಣಬಹುದು – ಭಾಷೆಯನ್ನು ಮಿತಿಯನ್ನು ಇಲ್ಲಿ ಗುರುತಿಸಬಹುದಾಗಿದೆ. |

## ೨. ಮೂಲಕಾದಂಬರಿ : 'ಚೋಮನ ದುಡಿ'

## ಅನುವಾದ : CHOMA'S DRUM

## ಅನುವಾದಕರು : U.R. KALKUR

'ಸರಸಮ್ಮನ ಸಮಾಧಿ' ಕಾದಂಬರಿಯನ್ನು ಅನುವಾದಿಸಿರುವ ಯು.ಆರ್. ಕಲ್ಕೂರ್‌ರವರೇ 'ಚೋಮನದುಡಿ' ಕಾದಂಬರಿಯನ್ನೂ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಅನುವಾದಕರು ಪುಸ್ತಕದಲ್ಲಿ ಪ್ರಸ್ತುತ ಕಾದಂಬರಿಯ ಕುರಿತಾಗಿ ಆರಂಭದಲ್ಲಿ ಕಿರು ಪರಿಚಯನ್ನು ನೀಡಿ ೧೯೭೬ರಲ್ಲಿ ರಾಷ್ಟ್ರಪತಿಗಳ ಪದಕವನ್ನು ಪಡೆದ ಕಾದಂಬರಿ ಇದಾಗಿದೆ ಎಂಬುದನ್ನು ಪ್ರಸ್ತಾಪಿಸಿದ್ದಾರೆ. ಮೂಲ ಕಾದಂಬರಿಯಲ್ಲಿ ಕಾರಂತರು ತಾವೇ ಬರೆದ ಮುನ್ನುಡಿಯಲ್ಲಿ ಪುಸ್ತಕ್ಕೆ ಪ್ರಸ್ತಾವನೆಯ ಅಗತ್ಯಕತೆ ಕಾಣುವುದಿಲ್ಲ ಎನ್ನುವ ಅಭಿಪ್ರಾಯ ಪಡುತ್ತಾ 'ಕಾದಂಬರಿಯಲ್ಲಿ ಚಿತ್ರವಾದ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯರ ಜೀವನ ಚಿತ್ರಣ ಇವಾಗಿದೆ. ಹೊಲೆಯರಲ್ಲಿ ಮೇರ, ಬೈರ, ಅಜಿಲ. ಮಾರಿ ಹೀಗೆ ನಾಲ್ಕಾರು ವಿಭಾಗಗಳಿವೆ. ತೀರ ಕೆಳಗಿನವರೆಂದು ಸಮಾಜದಲ್ಲಿ ಎಣಿಸಲ್ಪಡುವ ಮಾರಿ ಹೊಲೆಯರಿಗೆ ಸಾಗುವಳಿ ಮಾಡುವ ಅವಕಾಶದಿಂದ ವಂಚಿತರಾಗಿರುವ ಸಂದರ್ಭವನ್ನು ತಿಳಿಸುತ್ತಾರೆ. ಹಾಗೂ ಕಾದಂಬರಿಯಲ್ಲಿ ಬರುವ ಚೋಮ ಮಾರಿ ಹೊಲೆಯರ ವಿಭಾಗಕ್ಕೆ ಸೇರಿದವನೆಂಬುದನ್ನು ತಿಳಿಸಿದ್ದಾರೆ. 'ಸರಸಮ್ಮನ ಸಮಾಧಿ'ಯಲ್ಲಿ ಮೂಲ ಕಾದಂಬರಿಯ ಅಧ್ಯಾಯಗಳನ್ನು ಸಂಕ್ಷಿಪ್ತಗೊಳಿಸಿರುವುದು ಕಂಡು ಬಂದರೆ 'ಚೋಮನದುಡಿ'ಯ ಅನುವಾದದಲ್ಲಿ ಮೂಲ ಕಾದಂಬರಿಯಲ್ಲಿರುವಂತೆ ಎಲ್ಲ ೧೮ ಅಧ್ಯಾಯಗಳನ್ನು ಒಳಗೊಂಡಿದೆ ಹಾಗೂ ಅನುವಾದದಲ್ಲಿ 'ಸರಸಮ್ಮನ ಸಮಾಧಿ' ಹಾಗೂ 'ಚೋಮನ ದುಡಿ' ಈ ಎರಡು ಕಾದಂಬರಿಗಳು ಒಂದೇ ಪುಸ್ತಕದ ರೂಪದಲ್ಲಿ ಪ್ರಕಟಣೆಗೊಂಡಿವೆ.

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೧೧ | ಅಧ್ಯಾಯ ೧, ಪು. ೧<br>ಕಾಡುವ್ಯುಗಗಳು ಅವುಗಳಿಗೇನು ದಾಡಿ ಬಡಿಯಿತು? ಅವೂ ಏಕಾದಶಿ ವ್ಯತವನ್ನು ಕೈಗೊಂಡಿವೆಯೇನು? ಯಾರಿಗೆ ಗೊತ್ತು? ಪ್ರತಿ ರಾತ್ರಿಯೂ ಒಂದಲ್ಲ ಒಂದು ಮೂಲೆಯಿಂದ ಕೇಳಿ ಬರುವ ಹುಲಿಯ ಘರ್ಜನೆ ಇಂದು ಪೂರ್ಣ ಅಡಗಿ ಬಿಟ್ಟಿದೆ. ಅಪರಾತ್ರೆಯನ್ನು ಅಣಕಿಸಿ ಕೂಗುವ ಗೂಬೆಯ ಧ್ವನಿಯೂ ಕೇಳಿಸದಾಗಿದೆ ಏನಿಲ್ಲ! ಕಿವಿಯನ್ನು ಒಡೆಯುವಷ್ಟು ನಿಷ್ಕರುಣೆಯಿಂದ, ಹಗಲೆನ್ನದೆ, ರಾತ್ರಿಯೆನ್ನದೆ ಕೂಗುತ್ತಿರುವ ಹೆಂಟೆಗೊದ್ದಗಳು ಸಹ ತೀರ ಬೇಸರಿಂದ ಮೌನ ತಾಳಿರಬೇಕು. | Chapter 1 P 67<br>The jungle creatures seem to have vowed silence. The panther that growls nightly from one corner of the jungle or the other, the owls that challenge the nocturnal silence, the insects that fill the air with ear splitting screech - all are hushed. | 'ಏಕಾದಶಿ ವ್ಯತ' ಹಿಂದುಗಳು ಅಚರಿಸುವ ಉಪವಾಸ ವ್ಯತ –. ಕಾಡಿನಲ್ಲಿ ಯಾವುದೇ ಪ್ರಾಣಿಯ ಸುಳಿವು ಸಿಗದೇ ಇರುವುದನ್ನು, ಆಹಾರವನ್ನು ಹುಡುಕಿಕೊಂಡು ಬರುವ ಅವುಗಳು ಕಾಣದಿರುವುದನ್ನು ಕಾರಂತರು ಹೀಗೆ ಸೂಚ್ಯವಾಗಿ ವಿವರಿಸಿದ್ದಾರೆ. ಅನುವಾದದಲ್ಲಿ – The Jungle creatures seem to have vowed silence ಎಂದಷ್ಟೇ ಅನುವಾದಿಸಿರುವುದರಿಂದ ಮೂಲಕ ಭಾಷೆಯ ಸೊಗಡು ಹಾಗೂ ಸಾಂಸ್ಕೃತಿಕ ವಿಚಾರ ಅನುವಾದದಲ್ಲಿ ಅಭಿವ್ಯಕ್ತಗೊಂಡಿಲ್ಲ. 'ಏಕಾದಶಿ ವ್ಯತಕ್ಕೆ' ಇಂಗ್ಲಿಷನಲ್ಲಿ ಸಂವಾದಿಯಾಗಿ ಪರ್ಯಾಯ ಶಬ್ಧ ಇಲ್ಲದಿರುವುದನ್ನು ಮನಗಾಣಬಹುದಾಗಿದೆ. ಹಾಗೂ ಭಿನ್ನವಾದ ಭಾಷೆಯಲ್ಲಿ – ಭಿನ್ನ ಸಾಂಸ್ಕೃತಿಯಲ್ಲಿ ಒಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಪ್ರದೇಶದ ಸಾಂಸ್ಕೃತಿಕ ವಿಚಾರವನ್ನು ಅನುವಾದಿಸುವುದು ಕಷ್ಟಸಾಧ್ಯವಾಗುತ್ತದೆ. |
| ೦೨ | ಪು. ೨<br>'ಹತ್ತೆಂಟು ನಿಮಿಷಗಳ ತನಕವೂ ಈ ವಿಚಿತ್ರ ಧ್ವನಿಯು "ಡಮ ಢಮ್ಮಡಕ ಢಕ್ಕ" ಎಂದು ಮೊಳೆತು, ಹಾಯ್ದು ಅಡರಿದರೆ – ಇನ್ನಷ್ಟೇ ಸಮಯ ಸೊಲ್ಲೆತ್ತದೆ ಅಡಗಿ ಬಿಡುತ್ತದೆ | P 67<br>Damadhamma, dakadhakka, It goes on for eight or ten minutes, sometimes slow like the fall of a hammer at a smithy, sometimes frantic like the pounding heart of an animal in its last gasp. | ಮೂಲದಲ್ಲಿ ಕಾರಂತರು ಕಾದಂಬರಿಯುದ್ದಕ್ಕೂ ಚೋಮನ ದುಡಿಯಿಂದ ಹೊರಹೊಮ್ಮುವ "ಡಮ ಢಮ್ಮ ಡಕ ಢಕ್ಕ" ಧ್ವನಿಯನ್ನು ಇಂಗ್ಲೀಷ ಅನುವಾದದಲ್ಲಿಯೂ "Damadhamma, dakadhakka" ಎಂದೇ ಅನುವಾದಿಸಿರುವುದು ಕಂಡು ಬರುತ್ತದೆ. |
| ೦೩ | ಪು. ೩<br>ಇನ್ನು ಮರಳುವುದು ರಾತ್ರಿಯ ಉತ್ಸವವಾಗಿ ದೇವರು ಗುಡಿಗೆ ಬಂದು, ಮಂಗಳವಾಗಿ, ವಸಂತವಾಗಿ, ಪನಿವಾರ ಪಾನಕಗಳು ಗಂಟಲಿಗೆ ಬಿದ್ದು, ನಿದ್ದೆಯಿಂದ ರುಂಡ ಕಳಚಿ ಕೈ ಮೇಲೆಯೋ ಬೀಳುತ್ತದೆ ಎಂದಾದ ಬಳಿಕ | P 68<br>The villagers return only at the end of the various ceremonies at the temple; after the idol is back in the temple, the **final arati** is performed, **drinks** and **victuals** are served, and they get so drowsy as to | ಭಾಷೆಯಲ್ಲಿ ಅಡಕವಾಗಿರುವ ಸಂಸ್ಕೃತಿಯನ್ನು ಬೇರ್ಪಡಿಸುವುದು ಸಾಧ್ಯವಾಗಲಾರದು ಹಾಗೂ ಒಂದು ಪ್ರಾದೇಶಿಕವಾದ ಸಾಂಸ್ಕೃತಿಕತೆಯನ್ನು ಪ್ರತಿನಿಧಿಸುವ ಶಬ್ಧಕ್ಕೆ ಇನ್ನೊಂದು ಪ್ರದೇಶದಲ್ಲಿ ಆ ಆಚರಣೆಗಳು ಇಲ್ಲದೇ ಇದ್ದಾಗ ಅನುವಾದ ಸಾಂಸ್ಕೃತಿಕವಾದ ತೊಡಕನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | feel their heads ready to roll off their shoulders. | ಎದುರಿಸಬೇಕಾಗುತ್ತದೆ ಎನ್ನುವುದಕ್ಕೆ ಇಲ್ಲಿ ಬರುವ ವಿಚಾರಗಳು ಉದಾಹರಣೆಗಳಾಗಿವೆ – 'ದೇವರು ಗುಡಿಗೆ ಬಂದು' ಅನ್ನುವುದಕ್ಕೆ 'after the idol is back' ಎಂದೂ, 'ಮಂಗಳವಾಗಿ' ಎಂದರೆ 'ಮಂಗಳಾರತಿ' ಬೆಳಗುವುದು ಅದು ಪೂಜೆಯ ಕೊನೆಯ ಆರತಿ – ಇದನ್ನು **the final arthi** ಎಂದೂ, 'ಪನಿವಾರ ಪಾನಕಗಳ' ಎಂಬುದನ್ನು ಎಂದೂ ಅನುವಾದಿಸಿರುವುದನ್ನು ಕಾಣಬಹುದಾಗಿದೆ ಇದು ಸಮರ್ಪಕವಾದ ಪದಗಳಾಗಿ ಮೂಡಿ ಬಂದಿಲ್ಲ – ಮೂಲದ ಸಾಂಸ್ಕೃತಿಕತೆಯನ್ನು ಕಟ್ಟಿಕೊಡುವಲ್ಲಿ ಇದು ವಿಫಲವಾಗಿವೆ ಎಂಬುವುದನ್ನು ಕಂಡುಕೊಳ್ಳಬಹುದಾಗಿದೆ. ಹಾಗೂ 'ನಿದ್ದೆಯಿಂದ ರುಂಡ ಕಳಚಿ ಕೈ ಮೇಲೆಯೇ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಬೀಳುತ್ತದೆ' ಎಂಬುದನ್ನು ಅನುವಾದಕರು ನೇರವಾಗಿ they get so drowsy as to feel their heads ready to roll off their shoulders" ಎಂದು ನೇರವಾಗಿ ಅನುವಾದಿಸಿದ್ದಾರೆ. ಮೂಲದ ಸಹಜವಾದ ಓದು ಅನುವಾದದಲ್ಲಿ ಅಸ್ಪಷ್ಟವಾಗುತ್ತದೆ. ಹಾಗೂ ಅಪೂರ್ಣವಾದ ಅರ್ಥವನ್ನು ನೀಡುತ್ತದೆ. |
| ೦೪ | ಅಧ್ಯಾಯ ೧, ಪು. ೬<br>'ಅವನ ಹೆಂಡತಿ, ಹೆಂಡತಿಯೆಂದರೆ ಗೌರವದ ವಸಾತಾಯಿತು. ಅವನ ಹೊಲತಿಂಯು ತೀರಕೊಂಡು ಐದು ವರ್ಷಗಳಾದವು. ಗುಳಿಗನ ಉಪದ್ರದಿಂದ ರಕ್ತಕಾರಿ ಸತ್ತಳಂತೆ! | P 70<br>Choma's wife - wife is probably too digni-fied a word for a lowly untouchable's mate had been dead five years. It was being said that, tormented by the spirit Guliga, he had coughed up blood and died. | ಸಾಮಾಜಿಕ ವ್ಯವಸ್ಥೆಯಲ್ಲಿ ಹೊಲೆಯ ಜನಾಂಗದ ಸ್ಥಾನವಮಾನದ ಕುರಿತ ವಿಚಾರವಾಗಿದೆ. ಚೋಮನ ಹೆಂಡತಿ ತೀರಿಕೊಂಡಿದ್ದು 'ಗುಳಿಗ'ನ ಉಪದ್ರದಿಂದ. 'ಗುಳಿಗ' ಎಂದರೆ 'ಒಂದು ದೈವ' ಎಂದು ಕಾರಂತರು ಮೂಲಕಾದಂಬರಿಯಲ್ಲಿ ಅಡಿ ಟಿಪ್ಪಣಿ ನೀಡಿದ್ದಾರೆ – ಅನುವಾದದಲ್ಲಿ – by the 'spirit Guliga' ಎಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದಿಸಿದ್ದಾರೆ. ಇದು ತಕ್ಕಮಟ್ಟಿಗೆ ಸಮರ್ಪಕವೆನಿಸಿದರೂ ಅಡಿಟಿಪ್ಪಣಿಯನ್ನಾದರೂ ನೀಡಿ ಇದು ಕರಾವಳಿಯಲ್ಲಿ ಪ್ರಚಲಿತವಿರುವ ಕಾರಣಿಕ ದೈವ ಎಂಬುದರ ಕುರಿತಾಗಿ ವಿವರಿಸುವ ಸಾಧ್ಯತೆ ಇತ್ತು. |
| ೧೫ | ಪು. ೭<br>ಶಿವನ ಕೈಯಲ್ಲಿ ಡಮರು ಇದ್ದಂತೆ ಚೋಮನ ಕೈಯ್ಯ ಈ ದುಡಿ | P 71<br>The drum was to him what the damaru was to Lord Shiva | ಇಲ್ಲಿ 'ಡಮರು' ಮತ್ತು 'ದುಡಿ' ಈ ಎರಡು ಶಬ್ಧಗಳು ಕನ್ನಡದಲ್ಲಿ ಬಳಕೆಯಾಗುವ ವಾದ್ಯ ಪರಿಕರಗಳಿಗೆ ಸಂಬಂಧಿಸಿದವುಗಳು. 'ದುಡಿ. ಎಂಬ ಶಬ್ಧಕ್ಕೆ 'Drum' ಎಂಬ ಆಂಗ್ಲಬಾಷೆಯ ಶಬ್ಧವನ್ನು ಪರ್ಯಾಯವಾಗಿ ಬಳಸಿದ ಅನುವಾದಕರು 'ಡಮರು' ಎಂಬುದನ್ನು ಇಂಗ್ಲಿಷನಲ್ಲಿ 'damaru' ಎಂದೇ ಬಳಸಿರುವುದನ್ನು ಕಾಣಬಹುದು. ಪುರಾಣದಲ್ಲಿ ಹಿಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ದೇವರಾದ ಶಿವನ ಕೈಯಲ್ಲಿರುವ 'ಡಮರು' ಪುರಾಣ ಪ್ರಜ್ಞೆ ಇರುವ ಓದುಗರಿಗಷ್ಟೇ ಅರಿವಾಗುವ ಸಾಧ್ಯತೆ ಇದ್ದು ಕನ್ನಡೇತರ ಓದುಗರಿಗೆ, ಅನ್ಯಭಾಷಿಕರಿಗೆ ಇದು ಅರ್ಥವಾಗುವ ಸಾಧ್ಯತೆ ಕಡಿಮೆಯಾಗಿದೆ. |
| ೦೬ | ಅಧ್ಯಾಯ ೨ ಪು. ೯<br>"ದೀಪ ಉರಿಸಲು ಅವರೇನು ಮುತ್ತು ಸುರಿಯುತ್ತಾರೆಯೇ?" | Chapter 2 P 32<br>What Precious thing did they have to do at night to need a lamp? | ಚೋಮನ ಕುಟುಂಬದ ಚಿತ್ರಣವನ್ನು ನೀಡುವಲ್ಲಿ ಕಾರಂತರು ಚೋಮನ ಸಂಸಾರಕ್ಕೆ ಹೊತ್ತು ಮುಳುಗಿದ ಮೇಲೆ ರಾತ್ರಿಯಲ್ಲಿ ದೀಪ ಉರಿಸಿದವರಿಲ್ಲ, ದೀಪ ಉರಿಸುವಷ್ಟೆ ಅನುಕೂಲಸ್ಥರು ಅವರಲ್ಲಿ ಎಂಬ ವಿಚಾರವನ್ನು ಈ ನುಡಿಗಟ್ಟಿನೊಂದಿಗೆ ಸೂಚ್ಯವಾಗಿ ವಿವರಿಸಿದ್ದಾರೆ. ಅನುವಾದದಲ್ಲಿ ಅದರ ಭಾವಾರ್ಥವನ್ನು ಮೂಡಿಸಲು ಪ್ರಯತ್ನಿಸಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೭ | ಪು. ೧೦<br>ಚೋಮನ ಸಾಲ ಬಿರುಮನ ಗಡಂಗಿನಲ್ಲಿಯೇ ವಸೂಲಾಗುವುದೆಂದು. ಅಂಥದ್ದಾಗಿ ಒಂದೆರಡು ಕಾಸು ಕೈತಪ್ಪಿ ಅವನಿಗೆ ಹೆಚ್ಚಿಗೆ ಹೋದದಿದ್ದರೆ ಅದು ತುಳಸಿ, ನೀರಿನೊಂದಿಗೆ ಕೊಟ್ಟಂತೆಯೇ ಸರಿಯೆಂದು. | Chapter 2 P 33<br>".....But the only place where choma paid up was Biruma's shop and the land lord knew this too well to treat any small sums that puchance passed to hime as anything but charity. | ತುಳಸಿ ನೀರಿನೊಂದಿಗೆ ಕೊಡುವುದು ಎಂದರೆ ವೈದಿಕ ಧರ್ಮದ ಅನುಯಾಯಿಗಳಲ್ಲಿ ದಾನವಾಗಿ ನೀಡುವುದು – ಅದನ್ನು ಮರಳಿ ಪಡೆಯುವ ಹಾಗಿಲ್ಲ – ಆಡುಮಾತಿನಲ್ಲಿ 'ತುಳಸಿ ನೀರನ್ನು ಬಿಟ್ಟುಕೊಡುವುದು' ಎಂದರೆ ಅದನ್ನು ಪುನ: ಪಡೆಯುವ ಆಶೆಯನ್ನೇ ಕೈ ಬಿಡುವುದು – ಉದ್ಧಿಷ್ಟ ಭಾಷೆಯಲ್ಲಿ ಪರ್ಯಾಯ ನುಡಿಗಟ್ಟನ್ನು ಬಳಸದೇ ಇರುವುದನ್ನು ಕಾಣಬಹುದು. |
| ೦೮ | ಪು. ೧೨<br>ಬರಿಯೊಂದು ಡಮರು! ಕಿರಯ ಮರದ ಕಡ್ಡಿಯನ್ನು ಹಿಡಿದು 'ಡಮಢಮ್ಮ ಡಕಢಕ್ಕ' ಎಂದು ಮೆಟ್ಟಿದರಾಯಿತು. ಹೊಸ ಸದ್ದಿಲ್ಲ ಹೊಸ ಮಿಡಿತವಿಲ್ಲ. ಚೋಮನ ಮನಸ್ಸಿಗೆ ತಾನೊಬ್ಬ | P 74<br>It was a dumb - bell shaped instrument; with a stick in hand, he coaxed out of it the monotonous sound, damadhamma dakadhakka. There was never a new | ಅನುವಾದದಲ್ಲಿ 'ಚೋಮನ ದುಡಿ'ಯ ವರ್ಣನೆ ಕಂಡು ಬರುತ್ತದೆ. ದುಡಿಯನ್ನು ವಿವರಣೆಯಿಂದ ಕಲ್ಪಿಸಿಕೊಳ್ಳುವುದು ಸಾಧ್ಯವಿದೆ. ಅದರ ಆಕಾರವನ್ನು ವಿವರಿಸಲಾಗಿದೆ. ಹೀಗಾಗಿ ಪ್ರಾದೇಶಿಕ ಸಂಸ್ಕೃತಿಯ ವಾದ್ಯ ಪರಿಕರವೊಂದನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮೃದಂಗವನ್ನು ಬಾರಿಸುವ ಪಂಡಿತನೆಂಬಷ್ಟು ಹಿಗ್ಗು ಬಾರಿಸುತ್ತಾನೆ. 'ಡಮಢಮ್ಮ ಡಕಢಕ್ಕ" ಎಂದು. | rhythm, never a new timbre in the sound. But he played it with all the pride of a mridangum pundit. | ಅನ್ಯಭಾಷಿಕರಿಗೆ ಪರಿಚಯಿಸುವಲ್ಲಿ ಈ ಇಂತಹ ವಿವರಣೆಗಳು ಪೂರಕವಾದ ಪರಿಣಾಮವನ್ನು ನೀಡುತ್ತವೆ. |
| ೦೯ | ಪು. ೧೩<br>ತೋಟದ ಸೇರೆಗಾರ ಕಣ್ಣು ಕೆಂಪು ಮಾಡಿದ "ಏನು, ಇಪ್ಪತ್ತು ರೂಪಾಯಿಯಲ್ಲವೇ! ಕೊಟ್ಟ ಹಣಕ್ಕೆ ಬಡ್ಡಿಗಿಡ್ಡಿ ಇಲ್ಲವೆಂದು ತಿಳಿದೆಯಾ? ಕೊಂಡದ್ದು ಕೊಡುವ ಯೋಚನೆಯಿಲ್ಲದ ಬರಿ ಪಟಿಂಗರಿಗೆ .....! ಹೂಂ ಹೇಳು! ಯಾವಾಗ ತೋಟಕ್ಕೆ ಹೊರಡುತ್ತಿ!" | P 75<br>"Not twenty rupees?" Manuel cut him short, his eyes blood shot. "Don't you know that loans carry interest? sheer ras-cals who never think of repaying a loan.....Hm! Tell me when will you start for the plantation?" | ಕಣ್ಣು ಕೆಂಪು ಮಾಡುವುದು ಅಂದರೆ ಸಿಟ್ಟಾಗುವುದು. ಸಿಟ್ಟು ಬಂದಿರುವುದು ಆ ವ್ಯಕ್ತಿಯ ಕಣ್ಣುಗಳ ಮೂಲಕವೇ ತಿಳಿದು ಹೋಗುತ್ತದೆ. Blood shot ಇದರ ಅರ್ಥ ಕೆಂಪೊರೆದ, ರಕ್ತದಿಂದ ಕೆಂಪೇರಿದ (ಕಣ್ಣು) ಎಂದಷ್ಟೇ ಅರ್ಥವಾಗುವುದರಿಂದ ಇದು ಸಿಟ್ಟನ್ನೇ ವ್ಯಕ್ತಪಡಿಸುತ್ತದೆ ಎಂದು ಸ್ಪಷ್ಟವಾಗುವುದಿಲ್ಲ. ಇದು ಸಮರ್ಪಕವಾದ ಪರ್ಯಾಯ ಪದವಾಗಿ ಮೂಡಿಬಂದಿಲ್ಲ. |
| ೧೦ | ಅಧ್ಯಾಯ ೩, ಪು. ೧೬<br>ಕಾಫಿ ತೋಟದ ಚಳಿಜ್ವರ ಮತ್ತು ಸಾಲಗಳೆರಡೂ | Chapter 3 P 76<br>Plantation debts were like plantation once | ಅನುವಾದದಲ್ಲಿ ಮೂಲದ ಆಶಯವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದ್ದರೂ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಸಮ; ಹಿಡಿದರೆ ಅವು ಬಿಡುವುದೊಂದೇ ದಿನ | malaria; in their grip no release till death. | ಭಾಷಿಕವಾದ ಮಿತಿಯಿಂದ ಭಾಷೆಯ ಸೊಗಡನ್ನು ಕಾಯ್ದುಕೊಳ್ಳುವುದು ಸಮರ್ಪಕವಾಗಿ ಸಾಧ್ಯವಾಗುವುದಿಲ್ಲ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. |
| ೧೧ | ಪು. ೧೮ – ೧೯<br>ಧನಿಗಳು ಊಟಮಾಡಿ ಹೆಬ್ಬಾಗಲಿಗೆ ಬಂದು ಕುಳಿತಿದ್ದಾರಷ್ಟೆ. ಪ್ರಸನ್ನವದನರಾಗಿ ಎಲೆಯಡಿಕೆಯನ್ನೂ, ಒಂದು ಚೂರು ಹೊಗೆಸೊಪ್ಪಿನ ತುಂಡನ್ನು ಅವನ ಕಡೆಗೆ ಎಸೆದರು. ಹೊಗೆಸೊಪ್ಪೆಂದರೆ ಚೋಮನ ಎರಡನೆಯ ಜೀವ. ಈ ದಿವಸ ಸಂಕಪ್ಪಯ್ಯನವರು ಸ್ವತಃ ತಾವು ತಿನ್ನುವ ಹೊಗೆಸೊಪ್ಪಿನ ತುಂಡನ್ನು ಅವನ ಕಡೆಗೆ ಎಸೆದಿದ್ದರು. ಅದರಿಂದ ಚೋಮನಿಗೂ ಬಹಳ ಹರುಷ. ಎಲೆಯಡಿಕೆ ಮೆಲ್ಲುತ್ತ, ಹೊಗೆಸೊಪ್ಪಿನ | P 78<br>Sankappayya, having just finished his lunch, was silting in the out house, his face glowing with contentment. As he began to chew betel, he tossed a quid of tobacco to Choma. Choma, who loved tobacco second only to his life, was beside himself with joy', the more so because the piece was very one which the landlord had intended to use. He began to knead the piece on his palm with lime. "Hey, | 'ಪ್ರಸನ್ನವದನರಾಗಿ' ಎಂಬುದಕ್ಕೆ his face glowing with contentment ಎಂಬುದಾಗಿ ಅನುವಾದಿಸಲಾಗಿದೆ. 'ಹೆಬ್ಬಾಗಿಲಿನಲ್ಲಿ' ಎಂಬುದಕ್ಕೆ – 'out house' - 'ಹೊಗೆಸೊಪ್ಪೆಂದರೆ ಚೋಮನ ಎರಡನೆಯ ಜೀವ' - 'Choma who loved tobacco second only to his life'.<br>- 'ಎತ್ತುಗಳನ್ನು ದೇವರಿಗೆ ಬಿಡುವುದು' 'Consecrated the oxen to God' – ಈ ಅನುವಾದಗಳು ಭಾಷಿಕವಾದ ಹಾಗೂ ಸಾಂಸ್ಕೃತಿಕವಾದ ತೊಡಕುಗಳನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ತುಂಡಿನ ಚೂರಿಗೆ ಸುಣ್ಣವನ್ನು ತೀಡುತ್ತ ಕುಳಿತ. ಸಂಕಪ್ಪಯ್ಯನವರು ಒಮ್ಮೆಗೇ "ಹೌದೋ ಚೋಮ, ಆ ನಿನ್ನ ಎತ್ತುಗಳನ್ನು ದೇವರಿಗೆ ಬಿಟ್ಟಿದ್ದಿಯೇನು?" ಎಂದರು. | Choma, "sankappayya asked, "have you consecrated the oxen to God?" | ಎದುರಿಸಿರುವುದು ಕಂಡು ಬರುತ್ತದೆ. – ಹಿಂದು ಸಾಂಪ್ರದಾಯದಲ್ಲಿ ಎತ್ತುಗಳನ್ನು ದೇವರಿಗೆ ಬೀಡುವ ಪದ್ಧತಿ ಇದೆ. ಅವುಗಳನ್ನು ಉಳುಮೆಗೆ ಬಳಸುವ ಹಾಗಿಲ್ಲ – ಎಲೆ ಅಡಿಕೆಯನ್ನು ತಂಬಾಕಿನೊಂದಿಗೆ ಸೇರಿಸಿಕೊಂಡು ತಿನ್ನುವ ಕರಾವಳಿ ಸಾಂಸ್ಕೃತಿಯ ಪದ್ಧತಿಗಳು – ಅನ್ಯ ಭಾಷಿಕರಿಗೆ ಹಾಗೂ ಈ ಪದ್ಧತಿಗಳು ರೂಡಿಯಲ್ಲಿಲ್ಲದ ಸಾಂಸ್ಕೃತಿಕ ಪರಿಸರದ ಓದುಗರಿಗೆ ಇದು ಸ್ಪಷ್ಟವಾಗಿ ಅರ್ಥವಾಗದೇ – ಮೂಲ ಕಾದಂಬರಿಯಲ್ಲಿ ವಿವರಿಸಲ್ಪಟ್ಟಿರುವ ಸಾಂಸ್ಕೃತಿಕ ಚಿತ್ರಣಗಳು ಅನುವಾದದಲ್ಲಿ ಅಭಿವ್ಯಕ್ತಿಗೊಳ್ಳಲು ಸಾಧ್ಯವಾಗುವುದಿಲ್ಲ, ಅನುವಾದದಲ್ಲಿನ ಬಾಷಿಕ ಮಿತಿಯಿಂದಾಗಿ ಮೂಲದ ಆಶಯುವನ್ನು ಕಟ್ಟಿಗೊಡಲು ಸಾಧ್ಯವಾಗುವುದಿಲ್ಲ ಎಂಬುದನ್ನು ಗಮನಿಸಬಹುದು. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೨ | ಪು. ೧೯<br>"ನೇಗಿಲಿಗೆ ಕಟ್ಟದೆ ಇರಲಿಕ್ಕೆ ನಾನೇನು ಬಸವನಾಡಿಸುವವನೇ?" ಎಂದ. | P 79<br>"Are they for show, if not for ploughing?" | ಎತ್ತನ್ನು ಶೃಂಗಾರ ಮಾಡಿಕೊಂಡು ಊರೂರು ಅಲೆಯುವುದು – ಮನೆಯ ಮುಂದೆ ನಿಂತು ಬಸವನನ್ನು ಆಡಿಸಿ ಮನೆಯವರು ನೀಡಿದ ಪಡಿಯನ್ನು ಪಡೆದು (ದವಸ ಧಾನ್ಯ/ಹಣ ಇತ್ಯಾದಿ) ಜೀವನ ಸಾಗಿಸುವುದು ಬಸವನಾಡಿಸುವವರ ಕಸುಬಾಗಿರುತ್ತದೆ. ಇದು ಮೂಲ ಕಾದಂಬರಿಯಲ್ಲಿ 'ಬಸವನಾಡಿಸುವವನೇ' ಎಂಬ ಒಂದೇ ಶಬ್ಧದಿಂದ ಸ್ಪಷ್ಟವಾಗುತ್ತದೆ. ಅನುವಾದದಲ್ಲಿ 'Are they for show' ಎಂದು ಬಳಸಿರುವುದರಿಂದ ಇದರ ಅರ್ಥ ಅಸ್ಪಷ್ಟವಾಗಿರುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೩ | ಪು. ೨೧<br>"ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೇ" ಎಂದು ಶಪಿಸುತ್ತಿದ್ದಳು. | ಪು. ೮೦<br>"Abba, the involence of these holeyas!" | ಇಲ್ಲಿ ಕನ್ನಡ ಭಾಷೆಯಲ್ಲಿ ಆಶ್ಚರ್ಯವನ್ನು ಸೂಚಿಸುವ ಪದ – ಅಬ್ಬಾ! ಎಂಬುದನ್ನು ನೇರವಾಗಿ ಇಂಗ್ಲೀಷ್‌ನಲ್ಲಿಯೂ ಬಳಸಲಾಗಿದೆ. 'ಹೊಲೆಯ' ಎಂಬುದನ್ನು ಕೂಡ holeya – ಎಂದೇ ಅನುವಾದಿಸಿರುವುದನ್ನು ಕಾಣಬಹುದು. ಕನ್ನಡದಲ್ಲಿ ಹೊಲೆಯ ಎಂಬುದು ಒಂದು ಜನಾಂಗವನ್ನು ಸೂಚಿಸುವ ಪದ ಎಂಬುದು ಅರ್ಥವಾದರೆ ಇಂಗ್ಲೀಷ್‌ನಲ್ಲಿ ನೇರವಾಗಿ ಬಳಸುವುದರಿಂದ ಈ ರೀತಿಯ ಜನಾಂಗದ ಅರಿವು ಓದುಗರಿಗೆ ಸ್ಪಷ್ಟವಾಗುವುದಿಲ್ಲ. |
| ೧೪ | ಅಧ್ಯಾಯ ೪, ಪು. ೨೩<br>'ಬಾಯಿಗೆ ನಂಜಿಕೊಳ್ಳಲು ಏನಾದರು ಇದೆಯೋ?' ಎಂದು ವಿಚಾರಿಸಿದ ಅಷ್ಟು ಹೊತ್ತಿಸಲ್ಲಿ ಏನು ಉಳಿಯುತ್ತದಂತೆ! ಬೆರಳನ್ನು ಕಚ್ಚಿಕೊಳ್ಳಬೇಕು'. | Chapter 4 P 81<br>"Anything to bite? Choma asked. | ಹೆಂಡ ಕುಡಿಯುವಾಗ ಏನಾಧರೂ ತಿನ್ನುತ್ತ, ಚೀಪುತ್ತ ಕುಡಿಯುವುದು ರೂಢಿ. 'ನಂಜುವುದು' ಎಂಬ ಪ್ರಾದೇಶಿಕ ಶಬ್ಧವನ್ನು 'anything to bite' ಎಂದು ಅನುವಾದಿಸಿರುವುದರಿಂದ ಮೂಲದ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅರ್ಥ ಸ್ಪಷ್ಟವಾಗುವುದಿಲ್ಲ. ಹಾಗೂ 'ಅಷ್ಟು ಹೊತ್ತಿನಲ್ಲಿ ಏನು ಉಳಿಯುತ್ತದಂತೆ! ಬೆರಳನ್ನು ಕಚ್ಚಿಕೊಳ್ಳಬೇಕು' ಎಂಬುದನ್ನು ಅನುವಾದಿಸಿಲ್ಲ. |
| ೧೫ | ಪು. ೨೩<br>'ಇಷ್ಟೇ ಸರಿಯೇ, ಮೂರುವರೆ ಪಾವಿಗೆ' ಎಂದು ಕೇಳಿದ ಚೋಮ. | P 81<br>"Is this all for three and a half paves of rice?" | ಕನ್ನಡ ಭಾಷೆಯಲ್ಲಿ ಅಳತೆಯ ಮಾಪನಕ್ಕೆ ಕರೆಯುವ ಶಬ್ಧ 'ಪಾವು' ಇದನ್ನು ನೇರವಾಗಿ ಇಂಗ್ಲಿಷನಲ್ಲಿಯೂ 'paves' ಎಂದು ಬಳಸಿರುವುದನ್ನು ಕಾಣಬಹುದು. ಇಂಗ್ಲೀಷಿನಲ್ಲಿ paves ಎಂಬ ಶಬ್ಧ ಬಳಕೆಯಲ್ಲಿ ಇಲ್ಲ. |
| ೧೬ | ಪು. ೨೬<br>"ಕೇಳಿದೆನಪ್ಪ ನೀನು ತೋಟಕ್ಕೆ ಬರುವುದು ಸಾಧ್ಯವಿಲ್ಲವಾದರೆ ನಮ್ಮ ಹಣಕ್ಕೆ ಯಾವುದಾದರೂ ಒಂದು ಸಾಲಜೇಡು ಬೇಡವೇ?" | P 81<br>"What was wrong in my asking? If you can't come to the plantation I must have some gurantee for my money" | 'ಸಾಲಜೇಡು' ಎಂಬ ಶಬ್ಧಕ್ಕೆ 'gurantee' ಎಂಬ ಶಬ್ಧವನ್ನು ಪರ್ಯಾಯ ಪದವನ್ನಾಗಿ ಬಳಸಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೭ | ಪು. ೨೬<br>"ನೋಡಿ, ನಿಮಗೇನೂ ಹೆದರಿಕೆ ಬೇಡ. ಇಬ್ಬರೆಂದರೆ, ಎರಡು ಕಬ್ಬಿಣದ ತುಂಡಿದ್ದ ಹಾಗಿದ್ದಾರೆ....." | P 83<br>"Look at them" Choma said pointing to his sons. "You need have no fear. The boys are like two rods of steel...." | 'ಎರಡು ಕಬ್ಬಿಣದ ತುಂಡಿದ್ದ ಹಾಗದ್ದಾರೆ' ಎಂದರೆ ಗಟ್ಟಿಮುಟ್ಟಾದ ದೇಹವನ್ನು ಹೊಂದಿದ್ದವರು, ಕಟ್ಟುಮಸ್ತಾದ ದೇಹವನ್ನು ಹೊಂದಿದವರು ಎಂಬ ಅರ್ಥ ನೀಡುತ್ತದೆ. ಇದನ್ನು ಇಂಗ್ಲಿಷಗೆ ಶಬ್ಧಾನುವಾದ ಮಾಡಲಾಗಿದೆ. "The boys are like two rods of steel" ಇದರಿಂದ ಮೂಲ ಭಾಷೆಯ ಸೊಡಗು ಅನುವಾದದಲ್ಲಿ ಸಿಗುವುದಿಲ್ಲ. ಮೂಲದಲ್ಲಿನ ಅರ್ಥವನ್ನು ಸಮರ್ಪಕವಾಗಿ ಕಟ್ಟಿಕೊಡುವುದಿಲ್ಲ. |
| ೧೮ | ಅಧ್ಯಾಯ ೫, ಪು. ೨೯<br>"ತಲೆಗೂದಲುಗಳಂತು ತಾಮ್ರದ ಸರಿಗೆಗಳಂತಾಗಿವೆ....." | Chapter 5 P 85<br>".....their hair looked like bronze wires....." | ಶಬ್ಧಶ: ಅನುವಾದ ಮೂಡಿರುವುದನ್ನು ಕಾಣಬಹುದಾಗಿದೆ. ಮೂಲದ ಸೊಗಡು ಅನುವಾದದಲ್ಲಿ ಕಂಡು ಬರುವುದಿಲ್ಲ. |
| ೧೯ | ಪು. ೩೩<br>"ಅದು ಮನೆಯ ಮುಂದಿನ 'ಪಂಜುರ್ಲಿ'ಯ ಉಪದ್ರವೆಂದು ನಿಶ್ಚಯವಾಯಿತು" | P 85<br>".....and came to the conclusion that the deaths was due to the malevolence of the spirit Panjurli....." | ಮೂಲಕಾದಂಬರಿಯಲ್ಲಿ 'ಪಂಜುರ್ಲಿ' ಎಂದರೆ ಅಡಿ ಟಿಪ್ಪಣಿಯಲ್ಲಿ 'ಒಂದು ದೆವ್ವ' ಎಂದು ವಿವರಿಸಿದ್ದಾರೆ. ಅನುವಾದದಲ್ಲಿ the spirit Panjurli ಎಂದು ಅನುವಾದಿಸಿದರೂ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಅಡಿಟಿಪ್ಪಣಿಯಲ್ಲಿ ಸ್ಪಷ್ಟವಾಗಿ ತಿಳಿಸಬೇಕಾದ ಅವಶ್ಯಕತೆ ಇತ್ತು. |
| ೨೦ | ಅಧ್ಯಾಯ ೬, ಪು. ೩೬<br>"ಬೆಳ್ಳಿ, ತನ್ನ ತಮ್ಮಂದಿರನ್ನು ಕರೆದುಕೊಂಡು ಮುಂಜಾನೆಯ ಸೊಪ್ಪನ್ನು ತರಲು ಹೋಗಿದ್ದಾಳೆ. ನಿತ್ಯವೂ ಧನಿಗಳಲ್ಲಿಗೆ ತಂದು ಹಾಕುವ ಸೊಪ್ಪನ್ನು ಹಾಕದಿದ್ದರೆ, ಕೈ ಬಾಯಿಯ ತನಕ ಓಡುವ ಆಸೆಯುಂಟೆ?....." | Chapter 7 P 89<br>Belli, having taken here two brothers out to carry leaves to the landlord's house....." | ಯಜಮಾನನ ಮನೆಯ ಕೊಟ್ಟಿಗೆಗೆ ಸೊಪ್ಪನ್ನು ತಂದು ಹಾಕುವುದು – ಕೃಷಿಯಾಧಾರಿತ ಕುಟುಂಬಗಳಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿದೆ. ಇಂಗ್ಲಿಷನ ಅನುವಾದದಲ್ಲಿ ಕೇವಲ – 'to carry leaves to the landlord's house' ಎಂದಷ್ಟೇ ಅನುವಾದವಾಗಿರುವುದರಿಂಧ ಅಸ್ಪಷ್ಟತೆ ಎದ್ದು ಕಾಣುತ್ತದೆ. ಹಾಗೂ ಮೂಲ ಕಾದಂಬರಿಯಲ್ಲಿ ಬರುವ ನುಡಿಗಟ್ಟು – 'ಕೈ ಬಾಯಿಯ ತನಕ ಓಡುವ ಆಸೆಂಯುಂಟೆ?' ಎಂಬುದನ್ನು ಅನುವಾದದಲ್ಲಿ ಪರಿಗಣಿಸಲಾಗಿಲ್ಲ. ಭಾಷೆಯ ಮಿತಿಯಿಂದಾಗಿ ಅನುವಾದದಲ್ಲಿ ಆಗುವ ತೊಡಕನ್ನು ಇದರಿಂದ ಅರಿಯಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೨೧ | ಪು. ೩೯<br>"ಚೋಮ, ನಮ್ಮ ಹಾಸುಗೆಗೆ ಸರಿಯಾಗಿ ಕಾಲು ನೀಡಬೇಕು. ನಮ್ಮ ಹಣೆಯಲ್ಲಿ ಬರೆಯದಿದ್ದುದಕ್ಕಾಗಿ ಅತ್ತರೆ ಉಪಯೋಗವುಂಟೇ?" ಎಂದರು. | P 62<br>"Choma" he said in pity, "one must stretch one's legs Just as much as one's bed allows. What is the use of weeping over what fate has reserved for you?" | ಕನ್ನಡದ ಗಾದೆಮಾತನ್ನು ಯಥಾವತ್ತಾಗಿ ಅನುವಾದಿಸಲಾಗಿದೆ. ಕನ್ನಡ ಭಾಷೆಯಲ್ಲಿ ಪ್ರಚಲಿತವಿರುವ ಗಾದೆ ಮಾತು ನೀಡುವ ಸೂಚ್ಯಾರ್ಥ ಅದನ್ನು ಇಂಗ್ಲೀಷಿನಲ್ಲಿ ನೇರವಾಗಿ ಅನುವಾದಿಸುವುದರಿಂದ "ಅದೇ ಅರ್ಥವನ್ನು ನೀಡದೇ ಹೋಗಬಹುದು. ಪರ್ಯಾಯವಾದ ಗಾದೆ ಮಾತು ಅನುವಾದಿತ ಭಾಷೆಯಲ್ಲಿ ಲಭ್ಯವಿಲ್ಲದಿದ್ದಾಗ ಈ ರೀತಿಯ ತೊಡಕುಗಳು ಎದುರಾಗುವುದು. |
| ೨೨ | ಪು. ೪೦<br>"ಚೋಮ, ನೀನು ಹಾಳಾದ ಅವರಿವರ ಚಾಕರಿ ಮಾಡಿಕೊಂಡಿರುವ ಬದಲು ಕ್ರಿಶ್ಚನನಾಗಿ ಸ್ವತಂತ್ರನಾಗಬಾರದೇ?" ಎಂದರು. | P 62<br>"Choma instead of being a minion of some wretch or other, why not join our religion and be independent?" | ಚೋಮನಿಗೆ ಉಳುಮೆ ಮಾಡಲು ಹೊಲವನ್ನು ನೀಡುವ ಅಮಿಷವೊಡ್ಡಿ ಅವನನ್ನು ಮತಾಂತಕ್ಕೆ ಪ್ರಚೋದನೆ ನೀಡುವ ಪಾದ್ರಿಗಳ ಮಾತುಗಳು ಅನುವಾದದಲ್ಲಿಯೂ ಪರಿಣಾಮಕಾರಿಯಾಗಿ ಮೂಡಿ ಬಂದಿವೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೨೩ | ಅಧ್ಯಾಯ ೭, ಪು. ೪೧<br>"ಇತ್ತ ಹೊಲಗಳಲ್ಲಿ ನೀರು ನಿಲ್ಲಲು ತೊಡಗಿದೆ ಗದ್ದೆಗಳನ್ನೆಲ್ಲ ಉತ್ತು, ಅಗೆಯನ್ನು ನಡಲು ಸಿದ್ಧತೆಯಾಗಬೇಕು...." | Chapter 7 P 93<br>The fields were submerged and had to be ploughed and prepared for paddy transplantation. | ಮೂಲಕಾದಂಬರಿಯಲ್ಲಿ ಕಾರಂತರು ಅಗೆ ಎಂಬ ಪ್ರದೇಶಿಕ ಶಬ್ಧಕ್ಕೆ ಅಡಿ ಟಿಪ್ಪಣಿ ನೀಡಿ 'ಬತ್ತದ ಸಸಿ' ಎಂದು ಅರ್ಥ ನೀಡಿದ್ದಾರೆ ಅನುವಾದದಲ್ಲಿ 'paddy transplantation' ಎಂದು ಅನುವಾದಿಸಲಾಗಿದೆ. ಪ್ರಾದೇಶಿಕ ಶಬ್ಧಕ್ಕೆ ಸಂವಾದಿಯಾಗಿ ಶಬ್ಧ ಸಿಗಲಾರದಾದಾಗ ಅನುವಾದದ ಕೇವಲ ಯಾಂತ್ರಿಕವಾಗುತ್ತದೆ. |
| ೨೪ | ಪು. ೪೨<br>ತನ್ನ ಎತ್ತುಗಳು ಧನಿಯ ಹೊಲದಲ್ಲಿ ಇಡುವ ಪ್ರತಿಯೊಂದು ಹೆಜ್ಜೆ ತನ್ನ ಎದೆ ಮೇಲೆ ಇಡುವ ಹೆಜ್ಜೆಯೆಂದು ಕಾಣುತ್ತಿದೆ. | P 93<br>Everytime his oxen put their feet forward, he felt as though they were trampling on his chest. | ಮೂಲಕಾದಂಬರಿಯಲ್ಲಿ ಚೋಮನ ಎದೆಯನ್ನು ಹಿಂಡಿದಂತೆ ಆಗುವ ಅನುಭವದ ಪರಿಣಾಮ ಅನುವಾದದಲ್ಲಿ ಕಂಡುಬರುವುದಿಲ್ಲ. ಕೇವಲ ಯಾಂತ್ರಿಕವಾಗಿ ಮೂಡಿಬಂದಿದೆ. |
| ೨೫ | ಪು. ೪೪<br>"ಅಪ್ಪ, ನಾವು ನಮ್ಮ ಯೋಗ್ಯತೆಗೂ ಮೀರಿ ಆಸೆ ಮಾಡಿದರೆ ನಡೆದೀತೆ? ಬೇಸಾಯ | P 95<br>"Father, it is useless to aspire for more than our just desert. To be a farmer one | ಮೂಲಕಾದಂಬರಿಯಲ್ಲಿ 'ಬಂಟರಾಗಿಯೋ' ಎಂಬ ಶಬ್ಧಕ್ಕೆ 'ಕನ್ನಡ ಜಿಲ್ಲೆಯ ರೈತರಲ್ಲಿ ಪ್ರಾಮುಖ್ಯವಾದೊಂದು ವರ್ಗ' ಎಂದು ಅಡಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮಾಡಬೇಕಾದರೆ, ಬ್ರಾಹ್ಮಣರಾಗಿಂಯೋ, ಬಂಟರಾಗಿಂಯೋ, ಗೌಡರಾಗಿಂಯೋ ಹುಟ್ಟಬೇಡವೇ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೇ? ಧನಿಗಳಾದರೂ ಏನು ಮಾಡುತ್ತಾರೆ ? ಊರಿನ ಕಟ್ಟಕಟ್ಟಳೆಯಿಲ್ಲವೇ? ಅದನ್ನವರು ಮುರಿದರೆ ಅವರಿಗೆ ಯಾರೇನೆಂದಾರು?....." | has to be born a Brahmin, or a Banta, or a Gowda. Having been born accursed holeyas, how is it possible for us to become farmers? What could even the, landlord do? There are customs and traditions that have to be respected. If the land lord breaks them what will the people say of him?....." | ಟಿಪ್ಪಣಿ ನೀಡಿ ವಿವರಿಸಿದ್ದಾರೆ. ಅನುವಾದದಲ್ಲಿ ಈ ರೀತಿಯ ವಿವರಣೆ ಕಂಡು ಬರುತ್ತಿಲ್ಲ. |
| ೨೬ | ಅಧ್ಯಾಯ ೮, ಪು. ೪೬<br>"ಒಂದು ಬಾಗಿಲೆಂದರೆ ಒಂದು ಕೋಣೆ. ಕೋಣೆಯ ಒಳಕ್ಕೆ ಕಾಲು ಇರಿಸಲು ತುಂಬಾ ಭಯ ಭಕ್ತಿ ಬೇಕು. ವಿನಯದಿಂದ ಕತ್ತನ್ನು ನಡುವನ್ನು ಬಗ್ಗಿಸಿಕೊಂಡು ಒಳಕ್ಕೆ ಹೋಗದಿದ್ದರೆ ರುಂಡವೇ ಕಳಚಿ ಬೀಳಬಹುದು" | Chapter 8 P 96<br>Each door marked a room, and the doors were just as apart as each one's width. One must indeed be brave to step into the murky rooms. Unless one bent low while entering, one risked ones head | ಕಾಫಿ ತೋಟದಲ್ಲಿ ಕೆಲಸಗಾರರಿಗೆ ಉಳಿದ ಕೋ ನೀಡುತ್ತಿದ್ದ ಕೋಣೆಗಳ ವಿವರ ಇಲ್ಲಿದೆ. ತೀರಾ ಇಕ್ಕಟ್ಟಾಗಿರುವ ಕೋಣೆಗಳಲ್ಲಿ ಅವರು ವಾಸಿಸಬೇಕಾದ ಅನಿವಾರ್ಯತೆಯನ್ನು ವ್ಯಂಗ್ಯ ಮಿಶ್ರಿತ ಭಾಷೆಯಲ್ಲಿ ಮೂಲಕಾದಂಬರಿಯಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | beiing knocked off. | ವಿವರಿಸಿದ್ದಾರೆ. ಮೂಲಕಾದಂಬರಿಯಲ್ಲಿ ಬಳಸಿದ ಭಾಷೆಯ ಬೆಡಗು ಅನುವಾದದಲ್ಲಿ ಕಂಡುಬರುವುದಿಲ್ಲ. |
| ೩೦ | ಪು. ೫೦<br>ಊರಿನ ಆಸೆಯಿದ್ದವರೆಲ್ಲ ಪಾತ್ರೆ, ಪರಡಿ, ಗಂಟು, ಮೂಟೆಗಳನ್ನು ಕಟ್ಟಿ ಹೊರಡಲು ಅಣಿಯಾದರು. | ಅನುವಾದಿಸಿರುವುದಿಲ್ಲ. | ಅನ್ಯಭಾಷೆಯಲ್ಲಿ ಅನುವಾದಿಸಲು ಸಂವಾದಿ ಶಬ್ಧಗಳ ಕೊರತೆಯನ್ನು ಎದುರಿಸಬೇಕಾಗುತ್ತದೆ ಭಾಷೆಯ ಮಿತಿಯನ್ನು ಅರಿಯಬಹುದಾಗಿದೆ. |
| ೩೧ | ಅಧ್ಯಾಯ ೯, ಪು. ೫೪<br>"ಮಗು, ಗುರುವ, ದೈವ ಅನುಕೂಲ ಮಾಡಿದರೆ ಮುಂದಿನ ವರ್ಷ ನಿನಗೂ ಮದುವೆಯನ್ನು ಮಾಡಿಸುವ. ಈ ಸಾರಿಯೇ ಹುಡುಕಿದೆ. ಒಯಿನಾದ ಹುಡುಗಿ ಸಿಗಲಿಲ್ಲ. ಅಲ್ಲದೆ, ನಮ್ಮ ಕೂಡುಕಟ್ಟಿನೊಂದಿಗೆ ಸರಿ ಬೀಳುವಂಥವರು | Chapter 9 P 101<br>"My child Guruva, God willing, you too will marry within a year. I am already looking for a suitable girl. I must find a lass who fits our creed, caste and station in life. We cant just pick any girl we may come across. I know of a lass, the daughter of | ಅನುವಾದದಲ್ಲಿ 'ದೈವ ಅನುಕೂಲ ಮಾಡಿದರೆ' ಎಂಬುದಕ್ಕೆ 'God willing' 'ಮುಂದಿನ ವರ್ಷ ನಿನಗೂ ಮದುವೆಯನ್ನು ಮಾಡಿಸುವ' ಎಂಬುದನ್ನು 'You too will marry within a year' – ಹುಡುಗಿ – 'Lass' ಕೂಡುಕಟ್ಟಿನೊಂದಿಗೆ 'Who fits our creed, caste and station in life' ಎಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಬೇಕಲ್ಲ. ಎಂಥದ್ದಾದರೂ ಹುಡುಗಿಯಾದರೆ ಸಾಕೆ? ಹಾಗೆ, ಗುತ್ತಿಗಾರಿನಲ್ಲಿ ಕೆಳಕೊಪ್ಪದಲ್ಲಿ ಓ ಅವನ ಮಗಳಿಲ್ಲವೇ" | that fellow in the lower koppe" | ಸಂವಾದಿಂಯಾಗಿ ಬಳಸಲಾಗಿದ್ದು ಇವು ಸಮರ್ಪಕವಾಗಿ ಮೂಲದ ವಿಚಾರಗಳನ್ನು ಅಭಿವ್ಯಕ್ತಿಗೊಳಿಸುವುದಿಲ್ಲ. |
| ೩೨ | ಪು. ೫೪<br>'ಮಕ್ಕಳು, ಮಕ್ಕಳು ಎಂದು ಬಡಿದು ಕೊಳ್ಳುವುದೋ? ಇವುಗಳಿಗೆ ಕುಡಿ ಮೀಸೆ ಮೊಳೆಯಿತೆಂದರೆ ದಿಕ್ಕು ದೇಶ ಕಾಣಿಸುವುದಿಲ್ಲ" ಎಂದ | P 102<br>".....Is it for nothing that I so much love my childern? They seem to lose their heads and cease to care for anyone the moment they grow moustaches" | 'ಕುಡಿ ಮೀಸೆ ಮೊಳೆಯಿತೆಂದರೆ ದಿಕ್ಕು ದೇಶ ಕಾಣಿಸುವುದಿಲ್ಲ.' ಎನ್ನುವುದ ಕನ್ನಡ ಭಾಷೆಯ ಆಡುನುಡಿಯಲ್ಲಿ ಬಳಕೆಯಲ್ಲಿದೆ ಇದನ್ನು ಯಥಾವತ್ತಾಗಿ ಅನುವಾದಿಸುವುದು ಭಾಷೆಯ ಮಿತಿಯಿಂದಾಗಿ ಸಾಧ್ಯವಾಗಲಾರದು. ಮೂಲದ ಭಾಷೆಯ ಸೊಗಡು ಅನುವಾದದಲ್ಲಿ ಬರಲಾರದು. |
| ೩೩ | ಅಧ್ಯಾಯ ೧೦, ಪು. ೫೯<br>ಅವಳು ಗ್ರಾಮದ ಭೂತಕ್ಕೆ ಎರಡು ತೆಂಗಿನ ಕಾಯಿಗಳನ್ನು ಸುಳಿದು ಇರಿಸಿದಳು. ಅಣ್ಣನ | Chapter 10 P 105<br>She waved two coconuts before chaniya and put them by as offerings to the principal spirit of the village As Chaniya's | ಗ್ರಾಮದ ಭೂತ – ಇದನ್ನು principal spirit of the village ಎಂದು ಅನುವಾದಿಸಲಾಗಿದೆ. ಕರಾವಳಿಯಲ್ಲಿ ಪ್ರಚಲಿತವಿರುವ ಭೂತಾರಾಧನೆಯ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಬೊಬ್ಬೆ ಹೆಚ್ಚಿದಂತೆ, ಎರಡು ಕೋಳಿಗಳನ್ನು ಕೊಡುತ್ತೇನೆಂಬ ಹರಕೆ ಹೊತ್ತಳು | groaning increased she prayed and pledged.to sacrifice two chickens to the same spirit. | ಕುರಿತು ಅರಿವಿರುವ ಓದುಗರಿಗೆ ಮಾತ್ರ ತಕ್ಕ ಮಟ್ಟಿಗೆ ಅನುವಾದವು ಅರ್ಥವಾಗಬಹುದಾಗಿದೆ. |
| ೩೪ | ಪು. ೬೦<br>ಆ ಬಳಿಕ ಅವನು ಏನೇನೋ ಕಡ್ಡಿ, ಕವಡೆ, ಹೂವುಗಳನ್ನು ತಂದಿರಿಸಿ, ಕುಳಿತು, ನಿಂತು, ಮಾಟಮಂತ್ರ ಮಾಡಿ, ಒಳ್ಳೆಯ ಗಂಭೀರ ನುಡಿಯಿಂದ – "ಪಂಜುರ್ಲಿ ಭೂತಕ್ಕೆ ನೇಮವಾಗಬೇಕು. ಕೋಳಿಯಾಗಬೇಕು, ಹಂದಿಯಾಗಬೇಕು, ಅಕ್ಕಿಯಾಗಬೇಕು ಎಂದು ಆ ಭೂತದ ಕಡೆಯಿಂದ ದೊಡ್ಡ ಪಾರುಪತ್ಯ ನಡೆಯಿಸಿದ. ಬೆಳ್ಳಿ " ಪಂಜುರ್ಲಿ, ನೀನೇ ನಮ್ಮ ಕುಟುಂಬವನ್ನು ಕಾಯಬೇಕು" ಎಂದು ಬೇಡಿಕೊಂಡು ತನ್ನ ಮನೆಗೆ ಮರಳಿದಳು. | P 106<br>Then he collected some sticks, cowries, and flowers and sat down. After performing some rites, he announced : "Panjurli demands a special worship, a chicken, a pig and some rice !" He announced this with great solemnity as if he were himself managing the affairs of panjurli. "O Panjurli", Belli; prayed, "please protect my brother". She returned to her hut. | ಕರ್ನಾಟದದ ಕರಾವಳಿಯಲ್ಲಿ ಪ್ರದೇಶದಲ್ಲಿ ಇಂದಿಗೂ ಪ್ರಚಲಿತವಿರುವ ಭೂತಾರಾಧನೆ ದೈವಗಳನ್ನು ಪೂಜಿಸುವುದು, ಜಡ್ಡು – ಜಾಪತ್ರಯಗಳ ನಿವಾರಣೆಗಾಗಿ ವಿಶೇಷವಾಗಿ ಹರಕೆ ಹೊರುವುದು – ಈ ವಿಚಾರಗಳು ಇಲ್ಲಿವೆ. ದೈವಗಳಿಗೆ ಅರ್ಪಿಸುವ ಹರಕೆಗಳ ಕುರಿತಾದ ವಿವರಣೆಯೂ ಇಲ್ಲಿ ಸಿಗುತ್ತದೆ. ಕೋಳಿ ಹಾಗೂ ಹಂದಿ ಮುಂತಾದವುಗಳನ್ನು ಬಲಿಕೊಡುವ ಪದ್ಧತಿಯೂ ಇದೆ. ಇಂತಹ ವಿಶಿಷ್ಟವಾದ ಧಾರ್ಮಿಕ ಆಚರಣೆಯ ಬಗೆಗೆ ಅನ್ಯ ಭಾಷಿಕರಿಗೆ ಪರಿಚಯಿಸಿದಂತಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೫ | ಪು. ೬೧<br>"ಇವತ್ತು ಏನು ಮಾಡುವುದು ಬೇಡ. ವಾರ ಚೆನ್ನಾಗಿಲ್ಲ. ನಾಳೆ ಬೆಳಿಗ್ಗೆ ಬರುತ್ತೇನೆ. ಒಂದು ಬಳಿ ತೆಗೆಯುವ" ಎಂದು "ಅದಕ್ಕಾಗಿ, ಒಂದು ಬಾಳೆಯ ದಿಂಡು, ಕುಂಬಳ ಕಾಯಿ, ಎಲ್ಲಾ ತಯಾರಿರಲಿ" ಎಂದು ಹೇಳಿ, ಅವರನ್ನು ಕಳುಹಿಸಿಕೊಟ್ಟ. | P 106<br>"Dont do anything today", he told the boys. "The day is inauspicious. I shall come to your place tomorrow morning to perform exorcism. Keep a plantain stem and an ashgourd ready for the purpose" | ಮೂಲದಲ್ಲಿ ಭೂತೋಚ್ಚಾಟನೆಯ ಸಂಬಂಧವಾಗಿ ಬರುವ ವಿವರಣೆ ಇದಾಗಿದೆ. 'ಬಳಿ' ತೆಗೆಯುವುದರ ಕುರಿತಾಗಿ ಕಾರಂತರು ಮೂಲ ಕಾದಂಬರಿಯಲ್ಲಿ ಅಡಿ ಟಿಪ್ಪಣಿಯಲ್ಲಿ ಭೂತದ ಸೋಂಕನ್ನು ನಿವಾರಿಸಲು ಮಾಡುವ ಒಂದು ವಿಧಿ ಎಂಬುದಾಗಿ ವಿವರಿಸಿದ್ದಾರೆ. ಕೇವಲ ಇಂಗ್ಲೀಷ ಅನುವಾದವನ್ನು ಓದಿದವರಿಗೆ ಕರಾವಳಿ ಸಂಸ್ಕೃತಿಯ ಭೂತೋಚ್ಚಾಟನೆಯ ವಿಧಾನ ಅರಿಯದವರಿಗೆ ಈ ವಿಚಾರಗಳು ಸ್ಪಷ್ಟವಾಗಲಾರವು. |
| ೩೬ | ಅಧ್ಯಾಯ ೧೧, ಪು. ೬೮<br>".....ನೀನು ನಿತ್ಯವೂ ಬಂದು ಅವನ ಪಡಿಯನ್ನು ತೆಗೆದುಕೊಂಡು ಹೋಗು" ಎಂದರು. | Chapter 11 P 112<br>".....you come here and collect his wages" | ಮೂಲ ಕಾದಂಬರಿಯಲ್ಲಿ ಪಡಿ ಎಂಬ ಶಬ್ದಕ್ಕೆ ಕಾರಂತರು 'ಧಾನ್ಯರೂಪದ ಕೂಲಿ' ಎಂಬ ವಿವರಣೆಯನ್ನು ನೀಡಿದ್ದಾರೆ. ಹಿಂದೆ ಜಮಿನ್ದಾರಿ ಪದ್ದತಿಯಲ್ಲಿ ಜೀತದಾಳುಗಳಾಗಿ ದುಡಿಯುವವರಿಗೆ ಯಜಮಾನನ ಮನೆಯಲ್ಲಿ ಪ್ರತಿದಿನವೂ ಪಡಿಯನ್ನು ನೀಡುವ ಪರಿಪಾಠವಿತ್ತು. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಇದರ ಅರಿವಿರುವವರಿಗೆ ಮಾತ್ರ ಇದರ ಅರ್ಥ ಸ್ಪಷ್ಟವಾದೀತು. ಇಂಗ್ಲಿಷನಲ್ಲಿ 'wage' ಶಬ್ದಕ್ಕೆ 'ಕೆಲಸ ಮಾಡಿದ ನಂತರದಲ್ಲಿ ನೀಡುವ ಕೂಲಿ' ಎಂದೇ ಅರ್ಥವಾಗುತ್ತದೆ. ಪಡಿ ಎನ್ನುವ ಶಬ್ದದ ಸಾಂಸ್ಕೃತಿಕತೆ ಅರಿವಾಗದೆ ಹೋಗಬಹುದು. |
| ೩೭ | ಅಧ್ಯಾಯ ೧೨, ಪು. ೬೯<br>ಅಲ್ಲಿಂದ ನೆನಪು ಸತ್ತ ಚನಿಯನ ಕಡೆಗೊಮ್ಮೆ, ಇನ್ನೊಮ್ಮೆ ಬದುಕಿ ಸತ್ತ ಗುರುವನ ಕಡೆಗೂ ಹರಿಯಿತು. | Chapter 12 P 112<br>.....reviving in him the painful memories of the plantation of chaniya's death and of Guruva's desertion which was to him no different from death. | ಮೂಲ ಭಾಷೆಯ ಸೊಗಡು ಅನುವಾದದಲ್ಲಿ ವ್ಯಕ್ತವಾಗುವುದಿಲ್ಲ. ಸರಳವಾದ ಅನುವಾದವನ್ನು ಕಾಣಬಹುದಾಗಿದೆ. |
| ೩೮ | ಪು. ೭೩<br>"ಮಾಡುವುದೇನು? ಅಲ್ಲಿ ಮಾಡುವುದೊಂದೇ ಕೆಲಸ – ಮೂಗಿನ ಸೊಳ್ಳೆಯುವರೆಗೆ ಕುಡಿಯುವುದು; ಅಲ್ಲದಿದ್ದರೂ, ಹೊಲೆಯರು | P 116<br>"What do they do? They do there only one thing-drink till liquor overflows through their nostrils. Even otherwise, is a | ಕನ್ನಡದಲ್ಲಿ "ಮೂಗಿನ ಹೊಳ್ಳೆಯುವರೆಗೆ ಕುಡಿಯುವುದು", 'ಕಂಠಪೂರ್ತಿ ಕುಡಿಯುವುದು' ಹೀಗಾಗಿ ಆಡು ಮಾತಿನಲ್ಲಿ ಬಳಕೆಯಿರುವ ವಿಚಾರವನ್ನು ನೇರವಾಗಿ ಇಂಗ್ಲಿಷಿಗೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮಾಡಿದ ಸಾಲ ತೀರುವುದುಂಟೇ? ಬಾನು ಹರಿದು ನೆಲಕ್ಕೆ ಬೀಳಬೇಕು, ನಿಮ್ಮ ಜನರ ಸಾಲ ತೀರಬೇಕಾದರೆ" ಎಂದರು. | holeya's debt ever been liquidated? The sky must fall down in shreds if holeyas are to pay their loans". | ಅನುವಾದಿಸಲಾಗಿದೆ. ಮೂಲ ಭಾಷೆಯ ಧ್ವನಿಸುವ ಅರ್ಥವು ಅನುವಾದದಲ್ಲಿ ಧ್ವನಿಸುವುದಿಲ್ಲ. ಭಾನು ಹರಿದು ನೆಲಕ್ಕೆ ಬೀಳಬೇಕು. ಎಂದು ಸರಳವಾಗಿ ಅರ್ಥವಾಗುವ ಈ ನುಡಿಗಟ್ಟು ಅನುವಾದದಲ್ಲಿ ಅಸ್ಪಷ್ಟವಾಗುತ್ತದೆ. |
| ೩೯ | ಅಧ್ಯಾಯ ೧೩, ಪು. ೭೫<br>'ಬಾಯಿಬಿಚ್ಚಿ ಮನೆಯಲ್ಲಿ ಕಾಳು ಕಡಿಯ ಚೂರಿಲ್ಲ' ಎಂದು ತಿಳಿಸುವ ತನಕ, ಹೊರಡದಿರುವುದು ನಂಟರ ಸ್ವಭಾವ. | Chapter 13 P 116<br>"they were wont to stay on until they were clearly told that there was nothing in the hut with which to feed them. | 'ಮನೆಯಲ್ಲಿ ಕಾಳುಕಡ್ಡಿಯ ಚೂರಿಲ್ಲ' ಎಂಬ ನುಡಿಗಟ್ಟಿನ ಅರ್ಥವನ್ನು ಅನುವಾದಿಸಲಾಗಿದೆ. ಉಣ್ಣಲು, ತಿನ್ನಲು ಮನೆಯಲ್ಲಿ ಇನ್ನು ಏನು ಉಳಿದಿಲ್ಲ ಎಂಬ ಅರ್ಥವನ್ನು ಸಾಂಕೇತಿಕವಾಗಿ ವ್ಯಕ್ತಪಡಿಸುವ ಈ ನುಡಿಗಟ್ಟನ್ನು ಉದ್ದಿಷ್ಟ ಭಾಷೆಯಲ್ಲಿ ಅನುವಾದಿಸಲಾಗಿಲ್ಲ. |
| ೪೦ | ಪು. ೮೦<br>ಚರ್ಮ ಒಣಗಿಸಿದ ಬಳಿಕ ಕೊಂಡು ಹೋಗಿದ್ದರೆ ಒಂದು ರೂಪಾಯಿಯಾದರೂ ಸಿಗುತ್ತಿತ್ತು. ಈ | P 120<br>The skin would have got him at least a rupee after being dried, but choma's need | 'ಕೈಕಡ' ಎಂಬ ಪ್ರಾದೇಶಿಕ ಶಬ್ಧಕ್ಕೆ ಸಂವಾದಿ ಶಬ್ಧ ಅನುವಾದದಲ್ಲಿ ಬಳಕೆಯಾಗಿಲ್ಲ. ಅನುವಾದದಲ್ಲಿ ಸಂವಾದಿ ಶಬ್ಧಗಳ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಕೈಕಡದ ವ್ಯಾಪಾರದಿಂದಾಗಿ ರೂಪಾಯಿಯ ಲಾಭ ಎಂಟಾಣೆಗೆ ಇಳಿಯಿತು....." | was immediate and he did not mind the loss of eight annas. | ಕೊರತೆಯಿಂದಾಗಿ ಎದುರಿಸುವ ತೊಡಕನ್ನು ಗಮನಿಸಬಹುದಾಗಿದೆ. |
| ೪೧ | ಅಧ್ಯಾಯ ೧೪, ಪು. ೮೫<br>ಸರಿ, ಕಾಯದ ದೌರ್ಬಲ್ಯ ಅವಳನ್ನು ಕಾಮದ ದಾಸಿಯನ್ನಾಗಿ ಮಾಡಿತು. | Chapter 14 P 123<br>Before long she unresistingly gave in to the call of the flesh. | ಅನುವಾದದಲ್ಲಿ ಯಾಂತ್ರಿಕತೆಯನ್ನು ಗಮನಿಸಬಹುದಾಗಿದೆ. |
| ೪೨ | ಅಧ್ಯಾಯ ೧೫, ಪು. ೮೬<br>ಬೆಳ್ಳಿ ತೀರ ಗಾಬರಿಯಿಂದ "ಅಯ್ಯೋ" ಎಂದು ಕೂಗಿದಳು. | Chapter 15 P 124<br>Belli in dread, shrieked "Ayyo!". | ಕನ್ನಡದಲ್ಲಿ ಗಾಬರಿಯಿಂದ / ಅಂಜಿಕೆಯಿಂದ ತೆಗೆಯುವ ಉದ್ಗಾರ 'ಅಯ್ಯೋ' ಇದನ್ನು ಇಂಗ್ಲೀಷನ ಅನುವಾದದಲ್ಲಿಯೂ 'Ayyo' ಎಂದೇ ಬಳಸಲಾಗಿದೆ. |
| ೪೩ | ಪು. ೮೯<br>"ನನ್ನನ್ನು ಕಾಲನಿಂದ ತುಳಿದರೂ ಚಿಂತೆಯಿಲ್ಲ. ಒಮ್ಮೆ ನನ್ನ ಋಣವನ್ನು ತೀರಿಸಿದಳಲ್ಲ. ನನ್ನಿಂದಾಯಿತೇನು?...." ಅಯ್ಯೋ ನನ್ನ ಬೆಳ್ಳಿಯ ಗಂಡಸಾಗಿ ಹುಟ್ಟಿದ್ದರೆ ನನ್ನ ಮೀಸೆ ಇನ್ನಷ್ಟು ಮೇಲಿತ್ತು !" ಎಂದೆಲ್ಲ ಯೋಚಿಸಿದ. | P 126<br>.....would not mind even if she kicked hime out, because she had by clearing the debt, achieved what no one else in the family had.<br>If only Belli had been a boy! He would | ಮೂಲದಲ್ಲಿ ಸಹಜವಾಗಿ ಓದಿಸಿಕೊಂಡು ಹೋಗುವ ಭಾಷೆಯ ಸೊಬಗು ಸರಳವಾಗಿದೆ. ಅರ್ಥವಾಗುವ ಸಾಲುಗಳು ಅನುವಾದದಲ್ಲಿ ಯಾಂತ್ರಿಕವಾಗಿವೆ. 'ನನ್ನ ಮೀಸೆ ಇನ್ನಷ್ಟು ಮೇಲಿತ್ತು' ಎಂದರೆ ನನಗೆ ಇನ್ನಷ್ಟು ಅಭಿಮಾನ ಪಡುವ ಸಂಗತಿಯಾಗಿತ್ತು ಎಂದು ಅರ್ಥವಾಗುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | have been even more proud of his child; his moustache would have taken a prouder upward curve!....." | ಈ ನುಡಿಗಟ್ಟು ಅನುವಾದದಲ್ಲಿ ಯಾಂತ್ರಿಕವಾಗಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ. |
| ೪೪ | ಅಧ್ಯಾಯ ೧೬, ಪು. ೯೧<br>'ಸಿಕ್ಕಿದರೆ ಸಿಕ್ಕಿತು ಇಲ್ಲವಾದರೆ ಇಲ್ಲ. ಕೊನೆಗೆ ನೆರವಾಗದ ಪ್ರಪಂಚದ ಮುಂದೆ ಒಂದು ದಿನವಾದರೂ ಮೀಸೆ ತಿರುವಿ ನಡೆಯಬಹುದಲ್ಲ?' ಎಂಬ ನಿರ್ಧಾರ | Chapter 16 P 128<br>.....and harvest at least few grains. Even if it yielded nothing, it mattered little; he could move about as a farmer, proudly twirling his moustache in a world that had been so unhelpful to him. | ಈ ನುಡಿಗಟ್ಟು 'ಮೀಸೆ ತಿರುವಿ ನಡೆಯುವುದು' ಹೆಮ್ಮೆಯಿಂದ, ಅಭಿಮಾನದಿಂದ ಸಾಧನೆಯ ಹಮ್ಮಿನಿಂದ, ನಡೆಯುವುದು ಎಂಬ ಅರ್ಥವನ್ನು ಕೊಡುತ್ತದೆ. ಅನುವಾದದಲ್ಲಿ ಇದೇ ಅರ್ಥವನ್ನು ತರುವ ಪ್ರಯತ್ನವನ್ನು ಕಾಣಬಹುದಾಗಿದೆ. ಉದ್ದಿಷ್ಟ ಭಾಷೆಯಲ್ಲಿ ಇದಕ್ಕೆ ಪರ್ಯಾಯವಾದ 'ನುಡಿಗಟ್ಟು' ಲಭ್ಯವಿಲ್ಲದಿರುವುದನ್ನು ಗಮನಿಸಬಹುದು. |
| ೪೫ | ಅಧ್ಯಾಯ ೧೭, ಪು. ೯೮<br>"ಅಯ್ಯೋ ದೇವರೇ, ನೀವು ಸತ್ತವರ ಸುದ್ದಿ ಯಾಕೆ ಎತ್ತುತ್ತೀರಿ! ಎಷ್ಟೆಷ್ಟು ದಿನ ನಮ್ಮೊಟ್ಟಿಗೆ ನೀರಿನ ಋಣವಿದೆಯೋ ಅಷ್ಟು ದಿನ ನಮ್ಮ ಜತೆಯಲ್ಲಿ ಅವರಿದ್ದರು. ಅದು ಕಳೆಯಿತೆಂದರೆ ಅವರಷ್ಟಕ್ಕೆ ಅವರು, ನಮ್ಮಷ್ಟಕ್ಕೆ ನಾವು" | Chapter 17 P 133<br>"Ayyo! why mention the dead? He was with us just as long as the tie forged by fate held us together. The moment the tie broke we separated". | ಅಯ್ಯೋ ಎಂಬ ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿರುವ ಉದ್ಗಾರವನ್ನು ಯಥಾವತ್ತಾಗಿ ಬಳಸಲಾಗಿದೆ. 'ನೀರಿನ ಋಣ' ಎಂಬುದಕ್ಕೆ ಮೂಲದಲ್ಲಿನ ಸಂವಾದಿ ಶಬ್ದ ಬಳಕೆಯಾಗಿಲ್ಲ. ಒಟ್ಟು ತಾತ್ಪರ್ಯವನ್ನು ಅನುವಾದದಲ್ಲಿ ಕಟ್ಟಿ ಕೊಡುವ ಪ್ರಯತ್ನ ಮಾಡಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೪೬ | ಅಧ್ಯಾಯ ೧೮, ಪು. ೧೦೦<br>ಕೊನೆಗೆ ಮಳೆಗಾಲಕ್ಕೆಂದು ಒಂದು ಕಡೆಯಲ್ಲಿ ಕಟ್ಟಿಟ್ಟ, ಹಲಸಿನ ದಾನಿಯನ್ನು ತಂದು, ಚೆನ್ನಾಗಿ ಸುಟ್ಟು ಸಿಪ್ಪೆ ತೆಗೆದು, ಒಂದು ಹಾಳೆಯಲ್ಲಿ ಕಟ್ಟಿ 'ಇದು ಅಣ್ಣನಿಗಿರಲಿ' ಎಂದು ತಂದೆಯ ಕೈಯಲ್ಲಿ ಇರಿಸಿದಳು. | Chapter 18 P 134<br>She roasted the jack fruit seeds she had put by for the monsoon, peeled them and handed them to him in a packet to be pre-sented to Guruva. | ಬೇಸಿಗೆಯಲ್ಲಿ ಲಭ್ಯವಿರುವ ಹಲಸಿನ ದಾನಿಯನ್ನು ಮಳೆಗಾಲದಲ್ಲಿ ಆಹಾರವಾಗಿ ಬಳಸುವ ಪದ್ಧತಿ ಕರಾವಳಿ ಪ್ರದೇಶದಲ್ಲಿ ಪ್ರಚಲಿತವಿದೆ. ಇದು ಇಲ್ಲಿನ ಆಹಾರ ಕ್ರಮವನ್ನು ಇನ್ನೊಂದು ಪ್ರದೇಶಕ್ಕೆ ಪರಿಚಯಿಸಿದಂತಾಗಿದೆ. |
| ೪೭ | ಪು. ೧೦೨<br>ಆ ದಿನದಂತೆ ದುಡಿಯನ್ನು ಅವನು ಈ ಜೀವಮಾನದಲ್ಲೇ ಬಾರಿಸಿರಲಿಲ್ಲ; ಇನ್ನು ಬಾರಿಸುವಂತಿಲ್ಲ. ತೀರ ಸ್ವಲ್ಪ ಹೊತ್ತು ಬಾರಿಸಿದ. ಆದರೆ ನಿಜಕ್ಕೂ ಅದು ಪ್ರಳಯ ತಾಂಡವದ ಢಮರು ನೀನಾದ! ದುಡಿಯ ಢಮಢಮ್ಮ ನಿಂತಿತು. ಒಮ್ಮೆಗೇ ನಿಂತಿತು. ಚೋಮನ ಹೃದಯದ ಢಮರೂ ನಿಂತಿತು! ಅದೂ ಒಮ್ಮೆಗೇ ನಿಂತಿತು. | P 137<br>Never before had he played the durm like that the sound was like that of Lord Shiva's damaru on the the day of the Last Deluge. Then it stopped, stopped abruptly. | ಶಿವನ ಢಮರು – ಪ್ರಳಯ ತಾಂಡವದ ಡಮರಿನ ನಾದವನ್ನು ಚೋಮನ ದುಡಿಯ ನಾದಕ್ಕೆ ಹೋಲಿಸಲಾಗಿದೆ ಪುರಾಣದ ವಿಚಾರವನ್ನು ಅನುವಾದದಲ್ಲಿ ಕನ್ನಡೇತರ ಓದುಗರಿಗೆ ಪರಿಚಯಿಸಲಾಗಿದೆ. |

## ೩. ಮೂಲ ಕಾದಂಬರಿ : 'ಮರಳಿ ಮಣ್ಣಿಗೆ'

## ಅನುವಾದ ೦೧ : BACK TO THE SOIL

## ಅನುವಾದಕರು : A. N. MOORTHY RAO

## ಅನುವಾದ ೦೨ : RETURN TO EARTH

## ಅನುವಾದಕರು : PADMA RAMACHANDRA SHARMA

ಪ್ರಸ್ತುತ ಕಾದಂಬರಿಯನ್ನು ಇಂಗ್ಲಿಷ ಭಾಷೆಗೆ ಅನುವಾದಿಸಿದ ಇಬ್ಬರು ಅನುವಾದಕರ ಕಾದಂಬರಿಗಳನ್ನು ಇಲ್ಲಿ ತುಲನೆ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಎ.ಎನ್. ಮೂರ್ತಿರಾವ್ ಇವರು 'BACK TO THE SOIL' ಎಂಬ ಶೀರ್ಷಿಕೆಯಲ್ಲಿ ಅನುವಾದಿಸಿರುವ ಕೃತಿಗಳು ೧೯೫೦ರಲ್ಲಿ ಪ್ರಕಟಗೊಂಡಿದೆ. ಈ ಕೃತಿಯ ಮುನ್ನುಡಿಯಲ್ಲಿ ಕಾರಂತರು ಪ್ರತಿಯೊಬ್ಬ ಕಲಾಕಾರನಿಗೂ ತನ್ನ ಅನುಭವ ಮತ್ತು ಭಾವನೆಗಳನ್ನು ಹೊರ ಜಗತ್ತಿಗೆ ತಿಳಿಸಬೇಕೆಂಬ ಬಯಕೆ ಇದ್ದೇ ಇರುತ್ತದೆ. ಆದರೆ ಸಾಹಿತಿಯಾದವನಿಗೆ ತಾನು ಬಳಸುವ ಭಾಷೆಯ ಮಿತಿಯಿಂದಾಗಿ ಇದು ಸಾಧ್ಯವಾಗುವುದಿಲ್ಲ. ಈ ಕಾರಣದಿಂದಾಗಿ ತಾನು ತನ್ನ ಸಾಹಿತ್ಯ ಕೃತಿಗಳ ರಚನೆಯನ್ನು ಕನ್ನಡ ಭಾಷೆಗೆ ಮಾತ್ರ ಸೀಮಿತಗೊಳಿಸುವಂತಾಯಿತು. ಕನ್ನಡವನ್ನು ಬಲ್ಲ ಓದುಗರನ್ನು ಹೊಂದಿದ ಪ್ರದೇಶವನ್ನು ಮೀರಿ ತನ್ನ ಭಾವನೆಗಳನ್ನು ವಿಶಾಲವಾದ ಜಗತ್ತಿಗೆ ಹಂಚಿಕೊಳ್ಳಬೇಕೆಂಬ ಬಯಕೆ ಎಷ್ಟೇ ಇದ್ದರೂ ಕನ್ನಡ ಭಾಷೆಯಲ್ಲಿ ರಚಿತವಾದ ಕೃತಿಗಳಿಂದ ಇದು

ಸಾಧ್ಯವಾಗಲಾರದು. ಭಾರತದ ಇತರ ಪ್ರದೇಶಗಳಲ್ಲಿನ ಜನರ ಬದುಕು ಮತ್ತು ಬದುಕಿನ ಸಮಸ್ಯೆಗಳನ್ನು ತನ್ನ ಕೃತಿಯಲ್ಲಿ ತಾನು ವಿಶ್ಲೇಷಣೆ ಮಾಡಿದ ಬದುಕು ಮತ್ತು ಬದುಕಿನ ಸಮಸ್ಯೆಗಳು ಭಾರತದ ಇತರ ಪ್ರದೇಶಗಳಲ್ಲೂ ಇಂತಹದೇ ಸಮಸ್ಯೆಗಳಿದ್ದರೂ ಭಾಷೆಯ ಮಿತಿಯಿಂದಾಗಿ ಅದು ಅಲ್ಲಿನ ಓದುಗರಿಗೆ ತಲುಪಲಾರದು. ಇಂತಹದೊಂದು ತುಡಿತವನ್ನು ನೀಗಿಸುವಲ್ಲಿ ಅನುವಾದಕಾರದ ಎ.ಎನ್. ಮೂರ್ತಿ ರಾವ್ ರವರು ಉಪಕರಿಸಿದ್ದಾರೆ. ಎಂಬ ವಿಚಾರವನ್ನು ಹಂಚಿಕೊಂಡಿದ್ದರೆ. ಈ ಅನುವಾದವು ಕಾರಂತರ ಜೀವಿತಾವಧಿಯಲ್ಲಿಯೇ ಅನುವಾದಗೊಂಡಿದೆ ಎಂಬುದನ್ನು ಮನಗಾಣಬಹುದಾಗಿದೆ. ಅಧ್ಯಯನಕ್ಕೆ ಒಳಪಡಿಸಿರುವ ಇನ್ನೊಂದು ಅನುವಾದ ಕೃತಿ 'RETURN TO EARTH' ಎಂಬ ಶೀರ್ಷಿಕೆಯನ್ನು ಹೊಂದಿದೆ. ಇದನ್ನು ಪದ್ಮಾ ರಾಮಚಂದ್ರ ಶರ್ಮ ಇವರು ಅನುವಾದಿಸಿದ್ದಾರೆ. ಇದು ಶಿವರಾಮ ಕಾರಂತರ ಮರಣಾ ನಂತರದಲ್ಲಿ ೨೦೦೨ರಲ್ಲಿ ಪ್ರಕಟವಾದ ಕಾದಂಬರಿಯಾಗಿದೆ. ಅನುವಾದಕರು ಕಾದಂಬರಿಯ ಇಂಗ್ಲಿಷ ಅನುವಾದವು ಒಂದು ರೀತಿಯಲ್ಲಿ ತೀವ್ರವಾದ ಭಾಷೆಯ ಸವಾಲಾಗಿ ಪರಿಣಮಿಸಿತು ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಅನುವಾದದಲ್ಲಿ ಸಾಧ್ಯವಾದಷ್ಟು ಕಾರಂತರ ಶೈಲಿಯನ್ನೇ ಅತಿ ಹತ್ತಿರದಿಂದ ಬಳಸಿರುವುದಾಗಿ ಹೇಳಿಕೊಂಡಿದ್ದಾರೆ. 'ಮರಳಿ ಮಣ್ಣಿಗೆ' ಕಾದಂಬರಿಯು ಪರ್ವತ ಇದ್ದ ಹಾಗೆ. ಅನುವಾದ ಮಾಡುವ ಮೂಲಕ ಈ ದೊಡ್ಡದಾದ ಪರ್ವತದ ಎದುರು, ಆಚೆ ಈಚೆ, ಹಾಗೂ ಕೆಳಗೆ ನೋಡುವ ಪ್ರಮಾಣಿಕ ಪ್ರಯತ್ನ ಮಾಡಲಾಗಿದೆ ಎಂಬುದಾಗಿಯೂ ಹೇಳಿದ್ದಾರೆ. ಈ ಎರಡೂ ಅನುವಾದಗಳಲ್ಲಿಯೂ ಮೂಲ ಕಾದಂಬರಿಯಲ್ಲಿದ್ದಂತೆ ಒಟ್ಟು ೩೦ ಅಧ್ಯಾಯಗಳು ಇವೆ. ಸಂಕ್ಷಿಪ್ತಗೊಳಿಸಿರುವುದು ಕಂಡು ಬರುವುದಿಲ್ಲ. ಹೀಗೆ ಈ ಎರಡು ಅನುವಾದಗಳನ್ನು ಮೂಲದೊಂದಿಗೆ ಹೋಲಿಸಿ ತುಲನಾಲ್ಮಾತವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ವಿಶ್ಲೇಷಣೆಯ ಅನುಕೂಲಕ್ಕಾಗಿ BACK TO THE SOIL ಕೃತಿಯನ್ನು ಅನುವಾದ-೦೧ ಎಂದು ಹಾಗೂ RETURN TO EARTH ಕೃತಿಯನ್ನು ಅನುವಾದ-೦೨ ಎಂದು ಗುರುತಿಸಿಕೊಳ್ಳಲಾಗಿದೆ. ಪ್ರಸ್ತುತ ಕಾದಂಬರಿಯ ವಿಶ್ಲೇಷಣೆಯ ಸಂದರ್ಭದಲ್ಲಿ ಮಾಲಿನಿ ಮಾಲ್ಯ ಇವರು ಈಗಾಗಲೇ ಪದ್ಮಾ ರಾಮಚಂದ್ರ ಶರ್ಮ ಇವರು ಅನುವಾದಿಸಿದ RETURN TO EARTH ಕಾದಂಬರಿಯ ಕುರಿತು ಮಾಡಿರುವ ವಿಶ್ಲೇಷಣೆಯನ್ನು ಬಳಸಿಕೊಳ್ಳಲಾಗಿದೆ.

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೦೧ | ಅಧ್ಯಾಯ ೧, ಪು. ೯<br>ತಮ್ಮ ಧಾವಳಿ, ಪಂಚ ಪಾತ್ರೆಯನ್ನು ತಲೆಗೇರಿಸಿ, ಪಾಣಿ ಪಂಚೆಯಿಂದ ರುಮಾಲೆ ಬಿಗಿದರು..... | Chapter 1 P 11<br>ಅನುವಾದ ೦೧<br>Rolling up the inevitable copper tumbler in his shawl, he wound it round his head....."<br>P 11<br>He put his upper cloth and panchapathre on his head and wound his dhoti like a turban....." | ಅನುವಾದ – ೦೧ರಲ್ಲಿ ಪಂಚಪಾತ್ರೆಯನ್ನು 'Copper tumbler' ಎಂದು ಅನುವಾದಿಸಲಾಗಿದ್ದು ಅನುವಾದ – ೦೨ ರಲ್ಲಿ Panchapathre ಎಂದೇ ಅನುವಾದಿಸಲಾಗಿದೆ. ಅನುವಾದ – ೦೧ ರ ಸಾಲುಗಳು ಮೂಲಕ್ಕೆ ಹೆಚ್ಚು ಹತ್ತಿರವಾಗಿ ಕಂಡು ಬರುತ್ತದೆ. ಅನುವಾದ – ೦೨ರಲ್ಲಿ ಅರ್ಥ ಅಸ್ಪಷ್ಟವಾಗುತ್ತದೆ. ಮಾಲಿನಿ ಮಲ್ಯ ಇವರು ಅನುವಾದ – ೦೨ರ ಕುರಿತಾಗಿ ತಮ್ಮ ವಿಶ್ಲೇಷಣೆಯಲ್ಲಿ ಇಂಗ್ಲಿಷನಲ್ಲಿ ಸಾಕಷ್ಟು ಮೂಲಕ್ಕೆ ಸಂವಾದಿ ಪದಗಳು ಲಭ್ಯವಿದ್ದರೂ ಅನುವಾದಕರು ಪದಗಳನ್ನು ಬಳಸಿಕೊಂಡಿಲ್ಲ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. |
| ೦೨ | ಅಧ್ಯಾಯ ೦೨, ಪು. ೧೭<br>'ಇವಕ್ಕೆ ಮರುಳು! ಗೋಪಿ, ಬಿಸಿಲು ಬಿಟ್ಟಾಗ, | Chapter 1<br>ಅನುವಾದ ೦೧: ಅನುವಾದಿಸಿರುವುದಿಲ್ಲ. | 'ಸಂಕ ಮುರಿದಲ್ಲೇ ಸ್ನಾನ' ಎಂಬುದು ಕನ್ನಡದ ಆಡುಭಾಷೆಯಲ್ಲಿ ಪ್ರಚಲಿತವಿರುವ ನುಡಿಗಟ್ಟಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಸಂಕ ಮುರಿದಲ್ಲೇ ಸ್ನಾನ ಎಂದು ಹುಲ್ಲು ಬಾಯಿಗೆ ಹಾಕಿಕೊಳ್ಳುವ ಬದಲು, ದಿಗಣ ಹಾಕುತ್ತೀಯಾ?.....' | ಅನುವಾದ ೦೨ ಪು. ೧೯<br>'Such fools these are! Gopi, the sun is shining and you should be grazing, like bathing where the bridge has given way instead, you want to dance to a rhythm?..... | ಅನುವಾದ ೦೧ ರಲ್ಲಿ ಅನುವಾದಕರು ಇದನ್ನು ಅನುವಾದಿಸಿರುವುದಿಲ್ಲ. ಅನುವಾದ – ೦೨ ರಲ್ಲಿ ಅಕ್ಷರಶ: ಭಾಷಾಂತರ ಮಾಡಿದ್ದಾರೆ. ಆದರೆ ಇದು ಮೂಲದ ಅರ್ಥವನ್ನು ಪುಷ್ಟೀಕರಿಸುವುದಿಲ್ಲ, ಹಾಗೂ 'ದಿಗಣ' ಎಂಬ ಶಬ್ಧಕ್ಕೆ 'dancing' ಎಂಬ ಪರಿಚಯ ಪದ ಬಳಸಲಾಗಿದೆ. ಆದರೆ 'ದಿಗಣ' ಎಂಬುದು ಯಕ್ಷಗಾನದ ಕುಣಿತದಲ್ಲಿ 'ದಿಗಣ' ಹಾಕುವುದು ಎಂದು ಒಂದು ನಿರ್ದಿಷ್ಟ ಪ್ರಕಾರವಿದೆ. ಅನುವಾದದಲ್ಲಿ ಈ ಪದದ ಸಾಂಸ್ಕೃತಿಕತೆ ವ್ಯಕ್ತವಾಗುವುದಿಲ್ಲ. |
| ೦೪ | ಅಧ್ಯಾಯ ೦೩, ಪು. ೨೯<br>ಜನರು ಹೊಡೆ ಮಂಚದ ಮುಂದಕ್ಕೆ ಬತ್ತ ಹೆಚ್ಚಿ ಬರಲೆಂದು ಕೂಗಿದುದು ಸಾರ್ಥಕವಾಯಿತು. | ಅಧ್ಯಾಯ ೦೧,<br>ಅನುವಾದಿಸಿರುವುದಿಲ್ಲ.<br>ಅನುವಾದ ೦೨ ಪು. ೩೧<br>The shouts of people before the | ಅನುವಾದ – ೦೧ರಲ್ಲಿನ ಅನುವಾದಕರು ಮೂಲದ ಭಾವ ಬರುವ ಹಾಗೆ ಸಂಕ್ಷಿಪ್ತಗೊಳಿಸಿ ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಹೊಡೆ ಮಂಚದ ಪ್ರಸ್ತಾಪ ಮಾಡಿರುವುದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | threshing stone were not invain. | ಅನುವಾದ – ೦೨ರಲ್ಲಿ ಅನುವಾದಕರು ಇದನ್ನು ಅನುವಾವದಿಸಿದ್ದು threshing cot ಎನ್ನುವ ಬದಲಾಗಿ threshing stone ಎಂದು ಬಳಸಿದ್ದಾರೆ. ಕರಾವಳಿ ಪ್ರದೇಶದಲ್ಲಿ ಮರದ ಮಂಚವನ್ನು ಮಾಡಿಕೊಂಡು ಒಣಗಿದ ಭತ್ತದ ಸಸಿಗಳನ್ನು ತೆನೆಗಳಿಂದ ಬೇರ್ಪಡಿಸಲು ಅದನ್ನು ಮಂಚಕ್ಕೆ ಬಡಿಯುತ್ತಾರೆ. ಈ ಮಂಚವನ್ನು ಹೊಡೆಮಂಚ ಎಂದು ಕರೆಯಲಾಗುತ್ತದೆ. ಇಲ್ಲಿ Threshing stone ಬದಲಾಗಿ Threshing Cot ಎಂದು ಬಳಸಿದಲ್ಲಿ ಹೆಚ್ಚು ಸಮರ್ಪಕವಾಗುತ್ತಿತ್ತು. |
| ೦೩ | ಅಧ್ಯಾಯ ೦೨, ಪು. ೨೪<br>.....ನಿದ್ದೆಯ ಮಧ್ಯದಲ್ಲಿ ಯಾವುದೋ ಒಂದು ಎಕ್ಕಳೆ ತನ್ನ ಮೇಲೆ ಓಡಾಡಿದಂತಾಗಿ ಪಾರೋತಿಗೆ ಎಚ್ಚರವಾಯಿತು..... | ಅನುವಾದ – ೦೧,<br>ಅನುವಾದಿಸಿರುವುದಿಲ್ಲ.<br>ಅನುವಾದ – ೦೨ ಪು. ೨೬<br>Parothi woke up in the middle of her | 'ಎಕ್ಕಳೆ' ಎಂದರೆ ಕರಾವಳಿ ಕರ್ನಾಟಕದ ಪ್ರಾದೇಶಿಕ ಭಾಷೆಯಲ್ಲಿ (ಕುಂದಾಪುರ – ಉಡುಪಿ ಪರಿಸರದಲ್ಲಿ) ಜಿರಲೆ ಎಂದು ಅರ್ಥ. ಇಲ್ಲಿ ಅನುವಾದಕರು an insect ಎಂದು ಬಳಸುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | sheep and thought that an insect was running over her. | ಬದಲಾಗಿ cock roach ಎಂದು ಬಳಸಿದ್ದಲ್ಲಿ ಹೆಚ್ಚು ಅರ್ಥಪೂರ್ಣವಾಗುತ್ತಿತ್ತು. ಭಾಷಾಂತರದ ಮಿತಿಯನ್ನು ಇಲ್ಲಿ ಗುರುತಿಸಬಹುದಾಗಿದೆ. |
| ೦೫ | ಪು. ೨೫<br>ಐತಾಳರ ಗೊರಕೆ, ಹನೆಗರಿಗಳ ಬರಬರ ಸದ್ದು ಕಡಲಿನ ಮೊರೆತಗಳು ಮೇಳವಿಸಿ ಒಂದು ಜೋಗುಳವಾಯಿತು. | ಅನುವಾದ – ೦೧, ಪು. ೧೭<br>lital also slept, snoring in competition with the purr of the palm leaves which protected their walls from the rain. The dull roar of the sea also joined in.<br>ಅನುವಾದ – ೦೨, ಪು. ೨೭<br>Aithal's snoring, the sound of the coconut fronds, and the roar of the sea mingled into a lullaby. | ಮೂಲದಲ್ಲಿ ಐತಾಳರ ಗೊರಕೆ ಸದ್ದು, (ಹನೆಮರಗಳ) ತಾಳೆ ಮರಗಳ ಸದ್ದು ಹಾಗೂ ಕಡಲಿನ ಮೊರೆತಗಳೆಲ್ಲ ಸೇರಿ ಜೋಗುಳವಾಯಿತು ಎಂದು ವರ್ಣಿಸಿದ್ದರೆ. ಅನುವಾದ – ೦೧ ರಲ್ಲಿ 'ಈ ಮೂರರ ನಡುವೆ ಒಂದು ಸ್ಪರ್ಧೆ ಏರ್ಪಟ್ಟಿತು' ಎಂದು ವಿವರಿಸಿದ್ದಾರೆ. ಇದು ಮೂಲದ ಅರ್ಥವನ್ನು ಕಟ್ಟಿಕೊಡುವುದಿಲ್ಲ. ಹನೆಗರಿಗಳಿಗೆ ಇಲ್ಲಿ ಇಂಗ್ಲೀಷನಲ್ಲಿ Palmleaves ಎಂದೇ ಬಳಸಿರುವುದು ಸಮರ್ಪಕವಾಗಿದೆ. ಅನುವಾದ – ೦೨ ರಲ್ಲಿ ಮೂಲದಲ್ಲಿನ ವರ್ಣನೆಯನ್ನೇ ಹೋಲುತ್ತದಾದರೂ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | Palmleaves ಬದಲಾಗಿ Coconut fronds ಎಂದು ತಪ್ಪಾಗಿ ಬಳಸಿದ್ದಾರೆ. ಇದು ಇಂಗ್ಲಿಷನಲ್ಲಿ ತಾಳೆ ಗರಿಗಳಿಗೆ Palma Pronds ಎಂಬ ಪರ್ಯಾಯ ಪದ ಲಭ್ಯವಿದ್ದರೂ ಅದನ್ನು ಬಳಸದೇ ಇರುವುದನ್ನು ಕಾಣಬಹುದಾಗಿದೆ. |
| ೦೬ | ಅಧ್ಯಾಯ ೦೩, ಪು. ೩೦<br>"ಈ ತನಕ ದೀವಿಗೆ, ೪೨ ಸೇರಿನ ಅಕ್ಕಿ ಮುಡಿ ಕಳುಹಿಸಿದವರೇ ಅಲ್ಲ. ೩೯, ೪೦ ಸೇರುಗಳಿಗೆ ಮಿಕ್ಕಿ ಅವರಿಗೆ ಮುಡಿಯೇ ಇಲ್ಲ. ಅಕ್ಕಟೆ ಬಂದ ದುಡ್ಡು ಪುಕ್ಕಟೆ ಹೋಯಿತು....." | ಅನುವಾದ – ೦೧ ಪು. ೨೧<br>In shanbhogue's measure a mura is never the regulation forty - two seers. It does not come even to thirty - nine or forty. The money has gone the way it came".<br>ಅನುವಾದ – ೦೨ ಪು. ೩೨<br>He has never sent forty two measures for Deepavali till now. He never seems to have more than thirty nine to forty | ಇಲ್ಲಿ ಎರಡೂ ಅನುವಾದದಲ್ಲಿ ದೀವಿಗೆ ಎಂಬ ಪದಕ್ಕೆ ಸಂವಾದಿಯಾಗಿ ಸಮರ್ಪಕವಾದ ಪದವನ್ನು ಬಳಸಲಾಗಿಲ್ಲ. ಅನುವಾದ-೦೧ ರಲ್ಲಿ ಇದನ್ನು ಕೈ ಬಿಡಲಾಗಿದೆ. ಅನುವಾದ-೦೨ ರಲ್ಲಿ ಕನ್ನಡದ ದೀವಿಗೆ ಎಂಬುದಕ್ಕೆ Deepavali ಎಂದು ಬಳಸಲಾಗಿದೆ. ದೀಪಾವಳಿ ಇದು ನಾಡಿನಾದ್ಯಂತ ಆಚರಿಸುವ ಹಬ್ಬವಾಗಿದೆ. ಅನುವಾದದಲ್ಲಿ ಅನರ್ಥವಾಗುವುದನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | measures. What you earn by doing nothing ends up as nothing. | ಗಮನಿಸಬಹುದಾಗಿದೆ. ಉಲ್ಲೇಖಿತ ಭಾಗದಲ್ಲಿ ಬರುವ 'ಅಕ್ಕಟೆ ಬಂದ ದುಡ್ಡು ಪುಕ್ಕಟೆ ಹೋಯಿತು' ಎಂಬ ಗಾದೆ ಮಾತು – ನ್ಯಾಯವಾಗಿ ಗಳಿಸದೇ ಬಂದ ಸಂಪಾದನೆ ದಕ್ಕುವುದಿಲ್ಲ ಎಂಬ ತಾತ್ಪರ್ಯವನ್ನು ಕೊಡುವ ಈ ಗಾದೆ ಮಾತನ್ನು ಎರಡು ಭಿನ್ನ ರೀತಿಯಲ್ಲಿ ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಅನುವಾದ – ೦೨ ರಲ್ಲಿನ ಅನುವಾದ ಮೂಲವನ್ನು ಹೆಚ್ಚು ಹೋಲುವುದನ್ನು ಗುರುತಿಸಬಹುದಾಗಿದೆ. |
| ೦೭ | ಪು. ೩೧<br>".....ಕೊರಗರನ್ನು ಬರಲಿಕ್ಕೆ ಹೇಳುತ್ತೇನೆ' ಎಂದು ಅವಸರ ಅವಸರವಾಗಿ ಕೊರಗರ ಕೊಪ್ಪಕ್ಕೆ ಹೋದಳು. ಅವಳ ಹಿಂದೆಯೋ ಮೂವರು ಕೊರಗರೂ, ಒಬ್ಬಳು ಕೊರಾತಿಯೂ ಬಂದರು....." | ಅನುವಾದ – ೦೧, ಪು. ೨೨<br>.....I shall get the Koragas to carry it away<br>ಅನುವಾದ – ೦೨, ಪು. ೩೩<br>I shall tell the Koraga to come' she walked hurriedly away to Koragara Koppa. Three | ಅನುವಾದ – ೦೧ ರಲ್ಲಿ ಅನುವಾದಕರು ಒಂದು ವಾಕ್ಯದಲ್ಲಿ ಮೂಲದಲ್ಲಿನ ವಿವರಗಳನ್ನು ಸಂಕ್ಷಿಪ್ತಗೊಳಿಸಿದ್ದಾರೆ. Koragas ಎನ್ನುವ ಪದಕ್ಕೆ ಅಡಿ ಟಿಪ್ಪಣಿಯನ್ನು ನೀಡಿ 'A Sect among the untouchables' ಎಂಬ ವಿವರಣೆಯನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | Koraga men and a Korathi came back with her. | ನೀಡಿದ್ದಾರೆ. ಅನುವಾದ-೦೨ ರಲ್ಲಿ ಅನುವಾದಕರು ಮೂಲದ ವಿವರಗಳನ್ನು ಸಂಕ್ಷಿಪ್ತಗೊಳಿಸಿಲ್ಲ. ಆದರೆ ಕೊರಗ ಸಮುದಾಯವನ್ನು ಕೊರಗ ಎಂದೇ ಬಳಸಿದ್ದಾರೆ. ಯಾವುದೇ ಅಡಿ ಟಿಪ್ಪಣಿಯನ್ನು ನೀಡಿಲ್ಲ ಹಾಗೂ ಮೂವರು ಕೊರಗರು ಎಂಬುದಕ್ಕೆ Three Koraga men ಎಂದು ಬಳಸಿ ಕೊರಾತಿ ಎಂಬುದಕ್ಕೆ Korathi ಎಂದೇ ಬಳಸಿದ್ದಾರೆ. ಇಲ್ಲಿ ಎಂದು ಬಳಸಬಹುದಿತ್ತು. ಈ ಕುರಿತು ವಿಶ್ಲೇಷಣೆ ಮಾಡಿರುವ ಮಾಲಿನ ಮಲ್ಯ ಅವರು Koragaರ ಕೊಪ್ಪವನ್ನು Paraiah's Colony ಎಂಬ ಪರ್ಯಾಯ ಪದವನ್ನು ನೀಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೮ | ಅಧ್ಯಾಯ ೦೩ ಪು. ೩೬<br>ಕಾಳು ಸಿಗದೆ ಹೋದರೆ, ಕೊಣ್ಣೆಯಾದರೂ ಆದೀತಲ್ಲ. | ಅನುವಾದ – ೦೧<br>ಅನುವಾದಿಸಿರುವುದಲ್ಲ.<br>ಅನುವಾದ – ೦೨, ಪು. – ೩೮<br>Even if we gather no grain, we can at least have dry leaves. | ಅನುವಾದ – ೦೧ ರ ಅನುವಾದಕರು, ಈ ಸಾಲನ್ನು ಅನುವಾದಿಸಿಲ್ಲ. ಅನುವಾದ –೦೨ ರಲ್ಲಿ ಅನುವಾದಕರು ಕೊಣ್ಣೆ ಎಂಬ ಪ್ರಾದೇಶಿಕ ಶಬ್ಧಕ್ಕೆ dry leaves ಎಂದು ಅನುವಾದಿಸಿದ್ದು ಇದು ಸಮರ್ಪಕವಾದ ಪರ್ಯಾಯ ಪದವಾಗಿ ಬಳಕೆಯಾಗಿಲ್ಲ. ಬದಲಾಗಿ cattle - fodder ಎಂದು ಬಳಸಿದರೆ ಹೆಚ್ಚು ಸಮರ್ಪಕವಾಗುತ್ತಿತ್ತು. |
| ೦೯ | ಪು. ೩೬<br>ಕೊಣ್ಣೆ ಮಾಡಲು ಉದ್ದು, ಹುರುಳಿ ಗಿಡಗಳಿಗಿಂತ ಎಳ್ಳು ಒಂದು ಏನು ಹೆಚ್ಚು? | ಅನುವಾದ – ೦೧<br>ಅನುವಾದಿಸಿಲ್ಲ.<br>ಅನುವಾದ – ೦೨,<br>How is sesame any better than urad or horsegram to make palya? | ಅನುವಾದ – ೦೧ ಈ ಕುರಿತಾದ ವಿವರಣೆ ಸಿಗುವುದಿಲ್ಲ.<br>ಅನುವಾದ – ೦೨ ಕೊಣ್ಣೆ ಎಂಬ ಮೂಲ ಪದಕ್ಕೆ Palya ಎಂದು ಬಳಸಿರುವುದು ಅಪಾರ್ಥಕ್ಕೆ ಎಡೆಮಾಡಿಕೊಟ್ಟಿದೆ. ಕೊಣ್ಣೆ ಎಂಬುದು ಪ್ರಾದೇಶಿಕ ಶಬ್ಧವಾಗಿದ್ದು ಇದು ದನಗಳಿಗೆ ಮಾಡಿ ಕೊಡುವ ಉದ್ದು ಹುರುಳಿ ಹಾಗೂ ಎಳ್ಳು |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಮುಂತಾದ ಗಿಡಗಳಿಂದ ತಯಾರಿಸುವ ಆಹಾರ ಪದಾರ್ಥವಾಗಿದೆ. ಇಲ್ಲಿ ಈ ಪದಕ್ಕೆ ಪರ್ಯಾಯವಾಗಿ Palya ಎಂದು ಬಳಸಿದ್ದು ಇದು ಕನ್ನಡದ ಪಲ್ಯ ಶಬ್ಧವನ್ನೇ ಇಂಗ್ಲಿಷ ಅಕ್ಷರಗಳಲ್ಲಿ ಬರೆದ ಪದವಾಗಿದೆ. ಪಲ್ಯ ಎಂಬುದು ಜನರು ಸೇವಿಸುವ ತರಕಾರಿ ಅಥವಾ ಇದರ ಪದಾರ್ಥಗಳಿಂದ ತಯಾರಿಸುವ ಆಹಾರ ಪದಾರ್ಥವಾಗಿದೆ. |
| ೧೦ | ಪು. ೩೮<br>ಅವಡೆಯ ಕೋಡುವ ಕೈಗೆ ಬರುತ್ತಿವೆ. ಅವೆರಡೂ ಮನೆಯ ಖರ್ಚಿಗೆಬೇಕು. | ಅನುವಾದ – ೦೧<br>ಅನುವಾದಿಸಿಲ್ಲ.<br>ಅನುವಾದ – ೦೨,<br>Avade branches were ready for gathering. | ಅನುವಾದ – ೦೨ ಕನ್ನಡದಲ್ಲಿ ಬಳಕೆಯಲ್ಲಿರುವ ಅವಡೆ ಕೋಡುಗಳು ಎಂಬ ಶಬ್ಧವನ್ನು Avade Branches ಎಂದು ಅನುವಾದಿಸಲಾಗಿದೆ. Avade ಎಂಬುದು ಕೇವಲ ಇಂಗ್ಲಿಷ ಬಲ್ಲ ಓದುಗನಿಗೆ ಅರ್ಥವಾಗಲಾರದ ಶಬ್ಧವಾಗಿದೆ. ಬದಲಾಗಿ Pea-Pods ಎಂದು ಬಳಸಬಹುದಾಗಿತ್ತು. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೧೧ | ಅಧ್ಯಾಯ ೦೪, ಪು. ೪೫<br>'ಊರಿಂದೂರೇ ಸುಡುಗಾಡು ಆಗಿ ಬಿಟ್ಟಿದೆ. ಈ ವರ್ಷ ಮಳೆಗಾಲದಲ್ಲಿ ಹುಡಿ – ಬೀಜ ಬಿತ್ತ ಬೇಕಾಯಿತು. ಅದಕ್ಕಾದರೂ ಸ್ವಲ್ಪ ಬೀಜ ಉಳಿದರೆ ಆಗುತ್ತಿತ್ತು.' | ಅನುವಾದ – ೦೧<br>ಅನುವಾದಿಸಿಲ್ಲ.<br>ಅನುವಾದ – ೦೨, ಅಧ್ಯಾಯ – ೦೪,<br>The Whole village has become a burning ground. We may have to sow <u>powdery</u> seeds during the rainy season. | ಹುಡಿಬೀಜ ಬಿತ್ತನೆ ಮಾಡುವುದು ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ರೂಢಿಯಲ್ಲಿದೆ. ಭತ್ತದ ಬೀಜ ಬಿತ್ತುವಾಗ ಸಾಮಾನ್ಯ ಎರಡು ರೀತಿಗಳಲ್ಲಿ ಬಿತ್ತನೆ ಮಾಡುತ್ತಾರೆ. ಅವುಗಳಲ್ಲಿ ಒಂದು ಪ್ರಕಾರ ಹುಡಿಬೀಜ ಬಿತ್ತನೆ ಮಾಡುವುದು. ಅನುವಾದದಲ್ಲಿ <u>Powdery seeds</u> ಎಂದು ಬಳಸಿದುದರಿಂದ ಅರ್ಥ ವ್ಯತ್ಯಾಸವಾಗುವುದನ್ನು ಗಮನಿಸಬಹುದಾಗಿದೆ. |
| ೧೨ | ಪು. ೪೬<br>'.....ಹೋಗಿ ನಾಲ್ಕು ಭೂತ ಪರಂಗಿ ಹೆಡೆಯನ್ನು ಕಡಿದು ತಾ ನೋಡುವ.....' | ಅಧ್ಯಾಯ – ೦೪<br>ಅನುವಾದ – ೦೧<br>'Now suppose you bring some <u>adce</u> trunks instead of asking why and wherefore!"<br>ಅನುವಾದ – ೦೨ | ಕನ್ನಡದಲ್ಲಿ ಭೂತ ಪರಂಗಿ ಎಂದರೆ 'ಪಾಪಸುಕಳ್ಳಿ' ಎಂಬುದಾಗಿದ್ದು ಅನುವಾದ ೦೧ ರಲ್ಲಿ ಇದನ್ನು <u>adce trunks</u> ಎಂದು ಅನುವಾದಿಸಲಾಗಿದೆ. ಅನುವಾದ ೦೨ ರಲ್ಲಿ 'bhootha Parangi' ಎಂದೇ ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಇದನ್ನು ಇಂಗ್ಲೀಷನಲ್ಲಿ <u>Cactus fronds</u> ಎಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | 'Sarosothi, go and cut some bhootha parangi' fronds'. | ಅನುವಾದಿಸಬಹುದಾಗಿತ್ತು. |
| ೧೩ | ಪು. ೪೭<br>ಅಲ್ಲೇ ಅಂಗಳದಲ್ಲಿ ತೆಂಗಿನ ಹೆಡೆಗಳು ರಾಶಿ ಬಿದ್ದದ್ದುವು. ಚಪ್ಪರ ಹೊದೆಸಲು ಅವುಗಳ ಮಡಲು ಹೆಣೆಯಬೇಕು. | ಅನುವಾದ – ೦೧, ಪುಟ ೩೧<br>In the yard there were heaps of coconut leaves and they had to be plaited.<br>ಅನುವಾದ – ೦೨, ಪುಟ ೫೦<br>Just there in the yard lay a whole heap of palm fronds. They had to be braided to cover the pandal. | ಅನುವಾದ – ೦೧ ರಲ್ಲಿ ತೆಂಗಿನ ಹೆಡೆಗಳನ್ನು coconut leaves ಎಂದು ಬಳಸಲಾಗಿದೆ. ಅನುವಾದ – ೦೨ ರಲ್ಲಿ palm fronds ಮಾತ್ರ ಎಂದು ಬಳಸಿರುವುದನ್ನು ಗಮನಿಸಬಹುದಾಗಿದೆ. ಇಂಗ್ಲಿಷಿನಲ್ಲಿ Coconut ಎಂಬ ಶಬ್ದ ಲಭ್ಯವಿದ್ದು ಇದನ್ನು Palm ಎಂದು ಬಳಸಿರುವುದು ಅನುವಾದಕ್ಕೆ ಚ್ಯುತಿಯುನ್ನುಂಟು ಮಾಡುವಂತಾಗಿದೆ. |
| ೧೪ | ಪು. ೪೮<br>'ಅಮ್ಮ, ನಿರೇನು ಚೆನ್ನವೆ ! ಇನ್ನೊಂದಿಷ್ಟು ನೀರು ತಂದು ಸುರಿಯಿರಿ....' | ಅನುವಾದ – ೦೧, ಪುಟ ೩೨<br>"How sweet the water is ! May I have some more, mother?....."<br>ಅನುವಾದ – ೦೨, ಪುಟ ೫೧<br>'Amma, how lovely the water is ! Pour me some more.....' | ಇಲ್ಲಿ ಮೂಲಕಾದಂಬರಿಯಲ್ಲಿ ತೀರಾ ಬಾಯಾರಿಕೆಯನ್ನು ಅನುಭವಿಸಿದ ಕಾಳ ಪಾರೋತಿ ತಂದು ಕೊಟ್ಟು ಒಂದು ಚಂಬು ನೀರನ್ನು ಕುಡಿದಾದ ನಂತರದಲ್ಲಿಯೂ ಅವರ ದಾಹ ಇಂಗದಾದಾಗ ಅವನು ಒಡತಿಯಲ್ಲಿ ಈ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ರೀತಿಯಾಗಿ ಕೇಳುತ್ತಾನೆ. ನೀರು ಅತಿ ಸುಲಭದಲ್ಲಿ, ಪುಕ್ಕಟೆ ಯಾಗಿ ಸಿಗುವಂತದ್ದು. – ದುಬಾರಿ, ಬೆಲೆ ಬಳುವಂತದ್ದಲ್ಲ ಇನ್ನಷ್ಟು ತಂದು ಕೊಡಿ ಎಂದು ಸಲುಗೆಯಲ್ಲಿ ಕೇಳುತ್ತಾನೆ. ಆದರೆ ಎರಡು ಅನುವಾದಗಳ ಸಾಲುಗಳಲ್ಲಿಯೂ ಈ ವಿಚಾರ ವ್ಯಕ್ತವಾಗುವುದಿಲ್ಲ. ಅನುವಾದ – ೦೧ ರಲ್ಲಿ 'ನೀರು ಎಷ್ಟು ಸಿಹಿಯಾಗಿದೆ. ಅದಕ್ಕಾಗಿ ತನಗೆ ಇನ್ನಷ್ಟು ನೀರುವ ಸಿಗಬಹುದೇ?' ಎಂಬ ಕೋರಿಕೆ ಇದ್ದರೆ ಅನುವಾದ – ೦೨ ರಲ್ಲಿ ನೀರು ಎಷ್ಟು ಚಂದವಿದೆ – ಇನ್ನಷ್ಟು ನೀರು ಸುರಿಯಿರಿ ಎಂಬ ಅರ್ಥ ಬರುವಂತೆ ಅನುವಾದಿಸಲಾಗಿದೆ. ಅನುವಾದ – ೦೧ ರಲ್ಲಿ 'ಅಮ್ಮ' ಎನ್ನುವ ಶಬ್ಧಕ್ಕೆ 'Mother' ಎಂದು ಬಳಸಲಾಗಿದೆ. ಅನುವಾದ – ೦೨ರಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | 'Amma' ಎಂದೇ ಇಂಗ್ಲಿಷನಲ್ಲೂ ಬಳಸಿರುವುದನ್ನು ಕಾಣಬಹುದಾಗಿದೆ. ಕನ್ನಡ ಬಾರದ ಕೇವಲ ಇಂಗ್ಲೀಷ ಓದುಗರಿಗೆ ಇದು ಅರ್ಥವಾಗಲಾರದು. |
| ೧೫ | ಅಧ್ಯಾಯ ೦೫, ಪು. ೫೬<br>'ಆಗಲಪ್ಪ ಆಗಲಿ, ನನಗೇನು ಬದಲು ಜಂಬರವೇ? ಒಂದು ಲಗ್ನವನ್ನು ಹುಡಿ ಹಾರಿಸಿ ಬಿಡುವ. ಯಾರಾದರೂ – 'ವೈದಿಕರ ಮನೆಯ ಮದುವೆ, ಸುಕ್ಕಿನುಂಡೆಯ ಮೇಲಿನ ಕಜ್ಜಾಯ ಉಂಟೆ?' ಅಂದರೆ, ಅವರ ಬಾಯಿ ಕಟ್ಟಿಸಬೇಕು ಎಂದನು. | ಅಧ್ಯಾಯ ೦೧, ಅನುವಾದ – ೩೯,<br>"Very well," said seena, "I have nothing particular to do. Don't worry, we shall make it a grand occasion. Nobody should be able to say that it was marriage in a poor vaidiks house and that he served nothing but sukkinunde."<br>ಅನುವಾದ – ೦೨, ಪುಟ ೫೯<br>'Of course I'll do it. It isn't as if I have any other work. We will have a grand wedding we will make people say that | ಮೂಲಕಾದಂಬರಿಯ ಭಾಷಾ ಶೈಲಿ ಇಲ್ಲಿ ಬರುವ 'ಜಂಬರವೇ', 'ಹುಡಿ ಹಾರಿಸಿ ಬಿಡುವ' ಈ ಪಡೆನುಡಿಗಳನ್ನು ಭಾಷಾಂತರಿಸುವ ಸಂದರ್ಭದಲ್ಲಿ ಉದ್ಧಿಷ್ಠ ಭಾಷೆಯ ಮಿತಿಯಿಂದಾಗಿ ಇದು ಸಾಧ್ಯವಾಗದೇ ಇರುವುದನ್ನು ಕಾಣಬಹುದಾಗಿದೆ. <u>ಅನುವಾದ – ೦೧</u> ರಲ್ಲಿ <u>ವೈದಿಕ</u> ಎನ್ನುವ ಶಬ್ಧಕ್ಕೆ ಇಂಗ್ಲೀಷನಲ್ಲಿಯೂ <u>Vaidik</u> ಎಂದು ಅನುವಾದಿಸಿ ಅಡಿಟಿಪ್ಪಣಿ ನೀಡಿ 'ಪುರೋಹಿತ ವರ್ಗಕ್ಕೆ ಸೇರಿದವರು' ಎಂಬ ವಿವರಣೆ ನೀಡಲಾಗಿದೆ. ಇದೇ ರೀತಿ 'ಸುಕ್ಕಿನುಂಡೆ' ಶಬ್ಧವನ್ನು ಕೂಡ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | there is no sweet better than the sukkinunde in a brahmin wedding.' . | 'Sukkinunde' ಎಂದೇ ಅನುವಾದಿಸಿ ಅಡಿ ಟಿಪ್ಪಣಿಯಲ್ಲಿ A plebeian dish ಎಂದು ವಿವರಿಸಿದ್ದಾರೆ. Plebeian ಎಂದರೆ ಸಾಮಾನ್ಯ ಜನರ, ಹೀನಕುಲದ, ಕೆಳದರ್ಜೆಯ, ನಿಕೃಷ್ಟ ಎನ್ನುವ ಅರ್ಥಗಳಿವೆ.<br>ಅನುವಾದ - ೦೨ ವೈದಿಕ ಎನ್ನುವುದಕ್ಕೆ brahmin ಎಂದು ಅನುವಾದಿಸಲಾಗಿದೆ. ಸುಕ್ಕಿನುಂಡೆ ಶಬ್ದವನ್ನು Sukkinunde ಎಂದೇ ಅನುವಾದಿಸಲಾಗಿದೆ. ಆದರೆ ಯಾವುದೇ ಅಡಿಟಿಪ್ಪಣಿಯನ್ನು ನೀಡಲಾಗಿಲ್ಲ. ಕರಾವಳಿ ಕರ್ನಾಟಕ ಪ್ರದೇಶದ ತಿಂಡಿ ತಿನಿಸುಗಳನ್ನು ಇತರ ಪರಿಸರದ ಓದುಗರಿಗೆ ಪರಿಚಯಿಸುವ ಪ್ರಯತ್ನ ಈ ಅನುವಾದದಿಂದ ಸಾಧಿಸಿದಂತಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೬ | ಪು. ೫೭<br>'ಅಯ್ಯೋ ಶೀನ, ಪಡು ಮುನ್ನೂರಿನ ಮಾದಪ್ಪ ಅಡಿಗರು ಶಿವಳ್ಳಿ ಎಂದು ನಿನ್ನ ಲೆಕ್ಕವೇ? ಅವರ ಮುತ್ತಜ್ಜ ಶಾನಾಡಿಯವರು. ಅವರಿಗೆ ಶಿವಳ್ಳಿಯಿಂದ ಹೆಣ್ಣು ತಂದದ್ದು.....' | ಅನುವಾದ – ೦೧, ಪುಟ ೪೦<br>Surely you don't think that Madappayya of Padumunnur is Sivalli? His great - grand father was in Sanadi and it is true he did marry a Sivalli girl.....<br>ಅನುವಾದ – ೦೨, ಪುಟ ೬೦<br>'Ayyo, Sheena! Do you consider Madappa Adiga from Padumannooru a Shivalli man? His great grandfather was from Sanadi, his bride from Shivalli.....' | ಎರಡು ಅನುವಾದಗಳಲ್ಲಿಯೂ 'ಶಿವಳ್ಳಿ' ಎಂಬುದನ್ನು 'Sivalli' (ಅನುವಾದ ೦೧) 'Shivalli' (ಅನುವಾದ ೦೨) ಎಂದು ಅನುವಾದಿಸಲಾಗಿದೆ. ಅದರೆ 'ಶಿವಳ್ಳಿ' ಎಂಬುದಕ್ಕೆ ಯಾವುದೇ ವಿವರಣೆ ಸಿಗುವುದಿಲ್ಲ. ಬ್ರಾಹ್ಮಣರಲ್ಲಿ ಇರುವ ಈ ಒಳ ಪ್ರಭೇದದ ಬಗ್ಗೆ ವಿವರಣೆಯನ್ನು ನೀಡಿದ್ದರೆ ಹೆಚ್ಚು ಸ್ಪಷ್ಟವಾಗುತ್ತಿತ್ತು. ಅನುವಾದ ೦೨ ರಲ್ಲಿ ಕನ್ನಡದಲ್ಲಿ ಬಳಕೆಯಾಲ್ಲಿರುವ 'ಅಯ್ಯೋ' ಎಂಬ ಉದ್ಗಾರಕ್ಕೆ 'Ayyo' ಎಂದೇ ಬಳಸಿರುವುದನ್ನು ಗಮನಿಸಬಹುದಾಗಿದೆ. ಇಂಗ್ಲೀಷ ಭಾಷೆಯಲ್ಲಿ 'Ayyo' ಎಂಬುದು ಬಳಕೆಯಲ್ಲಿ ಇಲ್ಲ ಎಂಬುದನ್ನು ಕೂಡ ಗಮನಿಸಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೭ | ಪು. ೫೮<br>ಯಾರಾರ ಮನೆಯ 'ಮುಂಡಕ'ದ ಗಿಡವನ್ನು ತಂದು, ನಮ್ಮ ಮನೆಯ 'ಕೇದಗೆ' ಮಾಡಲು ಬಂದೀತೆ! | ಅನುವಾದ – ೦೧ ಪುಟ ೪೧<br>You cannot bring a Cactus from somewhere and make it yield kedage, flowers.<br>ಅನುವಾದ – ೦೨ ಪುಟ ೬೧<br>It is possible to bring a wild flower from some house and turn it into a Kedige flower in our house? | 'ಮುಂಡಕ' ಎಂಬುದು ಸಸ್ಯ ವರ್ಗಕ್ಕೆ ಸೇರಿದ ಪ್ರಕಾರವಾಗಿದ್ದು ಕೇದಗೆಯ ಗಿಡದಂತೆಯೇ ಕಾಣುತ್ತಿದ್ದರೂ, ಕೇದಗೆ ಸುಂದರವಾದ ಹಣವನ್ನು ನೀಡುವ ಗಿಡವಾಗಿದೆ. ಕರಾವಳಿ ಕರ್ನಾಟಕ ಪ್ರದೇಶಗಳಲ್ಲಿ ಇಂತಹ ಎರಡು ಬಗೆಯ ಗಿಡಗಳನ್ನು ಕಾಣಬಹುದು. ಕೇದಗೆಗೆ ಹೆಚ್ಚಿನ ಮಹತ್ವವಿದೆ. ಅನುವಾದ – ೦೧ ರಲ್ಲಿ ಮೂಲದ ಅರ್ಥವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ ಹಾಗೂ Kedage ಶಬ್ಧಕ್ಕೆ ಅಡಿಟಿಪ್ಪಣಿಯಲ್ಲಿ Pendimins ಎಂದು ಅರ್ಥ ನೀಡಲಾಗಿದೆ. ಅನುವಾದ ೦೨ ರಲ್ಲಿ 'ಮುಂಡಕ' ಎಂಬುದಕ್ಕೆ Wild flower ಎಂದು ಬಳಸಿದ್ದು, 'ಕೇದಗೆ' ಶಬ್ದವನ್ನು Kedige ಎಂದೇ ಬಳಸಿರುವುದನ್ನು ಕಾಣಬಹುದಾಗಿದೆ. 'ಮುಂಡಕ' 'ಕೇದಗೆ' ಈ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಹೆಸರುಗಳ ಸಸ್ಯಗಳ ಗಿಡಮರ ಬಳ್ಳಿಗಳ ಅರಿವಿಲ್ಲದವರಿಗೆ ಕೇವಲ ಇಂಗ್ಲಿಷ ಅನುವಾದದ ಓದಿನಲ್ಲಿ ಇವುಗಳ ಅರ್ಥ ಸ್ಪಷ್ಟವಾಗಲಾರದು. |
| ೧೮ | ಅಧ್ಯಾಯ ೦೬, ಪು. ೬೩<br>ಇಷ್ಟು ಅವಲಕ್ಕಿ ಮೊಸರನ್ನು ತಿಂದು ಹೊಟ್ಟೆ ತಂಪು ಮಾಡಿಕೊಂಡರೆ, ಮತ್ತು ಜಾವ ಹೊತ್ತಿನ ಬಿಸಿಲಿಗೆ, ಹೆಸರು ಕಡೆದು ಬೆಲ್ಲ ಹಾಕಿಕೊಟ್ಟಿದೆ ಸಾಕು; ಹೆಸರು ನೀರು ನೋಡಿ – ಬಿಸಿಲಿನ ದಿವಸಕ್ಕೆ ಅಮೃತ' ಎಂದು ಬೆಳಗಿನ ಸೇವೆಗೆ ಹೊರಬಿದ್ದನು. | ಅಧ್ಯಾಯ ೦೬, ಅನುವಾದ – ೦೧ ಅನುವಾದಿಸಿರುವುದಿಲ್ಲ.<br>ಅನುವಾದ – ೦೨, ಪುಟ ೭೧<br>Let me appease my hunger with some mosaru avalakki and some jaggery and hesaru at midday. That will be enough. He saru water is like nectar on a hot day.' So saying, Sheena stepped out for his morning ablutions. | 'ಮೊಸರು ಅವಲಕ್ಕಿ', 'ಬೆಲ್ಲ ಹಾಕಿ ಮಾಡುವ ಹೆಸರು ನೀರು' ಈ ಮುಂತಾದವುಗಳು ಕರಾವಳಿ ತೀರದಲ್ಲಿ ವಾಸಿಸುವ ಜನರು ತಮ್ಮ ದೈನಂದಿನ ಜೀವನದಲ್ಲಿ ಬಳಸುವ ಆಹಾರ ಪದಾರ್ಥಗಳಾಗಿದ್ದು ಇವುಗಳನ್ನು ಅನುವಾದ – ೦೨ ರಲ್ಲಿ ಯಥಾವತ್ತಾಗಿ ಬಳಸಿರುವುದನ್ನು ಕಾಣಬಹುದಾಗಿದೆ. ಮೂಲದಲಿದ್ದ 'ಅವಲಕ್ಕಿ ಮೊಸರು' ಎಂಬುದನ್ನು Mosaru Avalakki ಎಂದು, 'ಜಾವ ಹೊತ್ತಿನ ಬಿಸಿಲಿಗೆ' – ಎಂಬುದಕ್ಕೆ 'at midday' ಎಂದು, ಹೆಸರು ಕಡಿದು ಬೆಲ್ಲ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಹಾಕುವುದನ್ನು 'jaggery and hesaru' ಎಂದು, 'ಹೆಸರು ನೀರು' ಎಂಬುವುದನ್ನು 'hesaru water' ಎಂದು ಅನುವಾದಿಸಿರುವುದನ್ನು ಕಾಣಬಹುದಾಗಿದೆ.<br>ಕೇವಲ ಇಂಗ್ಲಿಷಬಲ್ಲ ಓದುಗರಿಗೆ ಇವು ಅರ್ಥವಾಗದೇ ಹೋಗುವ ಸಾಧ್ಯತೆಗಳೇ ಹೆಚ್ಚಾಗಿವೆ. ಇಂತಹ ಸಂದರ್ಭದ ಅನುವಾದಗಳು ವಿವರಣೆಯನ್ನು ಬಯಸುತ್ತವೆ ಅನುವಾದಕರು 'ಬೆಲ್ಲ' ಶಬ್ದಕ್ಕೆ 'Jagagery' ಎಂದು 'ನೀರು' ಶಬ್ಧಕ್ಕೆ 'water' ಎಂದು ಇಂಗ್ಲಿಷನ ಪರ್ಯಾಯ ಪದವನ್ನು ಬಳಸಿದ್ದಾರೆ 'ಹೆಸರು', 'ಮೊಸರು ಅವಲಕ್ಕಿ' ಈ ಮುಂತಾದ ಶಬ್ಧಗಳಿಗೂ ಇಂಗ್ಲೀಷನಲ್ಲಿ ಪರ್ಯಾಯ ಪದಗಳು ಇದ್ದು ಇವುಗಳನ್ನು ಬಳಸಿರುವುದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೯ | ಅಧ್ಯಾಯ ೭, ಪು. ೮೦<br>ಸಾಲದುದಕ್ಕೆ ಮನೆಯ ಹೆಂಗಸರೂ ಅವರಂತೆ, ನೀರಿನ ಮೊಣಕಗಳಾಗಿ ಮುಳುಗುವುದನ್ನು ಕಂಡು ಆಶ್ಚರ್ಯವೆನಿಸಿತು. | ಅಧ್ಯಾಯ ೦೭, ಅನುವಾದ – ೦೧<br>ಪುಟ ೬೨<br>What was even more surprising was that the women of the house too were rolling about in the water like others.<br>ಅನುವಾದ – ೦೨ ಪುಟ ೮೩<br>Moreever, he thought it was strange to see even the women of the household diving into the water just like the man. | 'ನೀರಿನ ಮೊಣಕ' ಎಂದರೆ ಮೊಸಳೆ ಎಂದು ಅರ್ಥ. ಎರಡೂ ಅನುವಾದದಲ್ಲಿಯೂ ಮೊಸಳೆಯ ಪ್ರಸ್ತಾಪವನ್ನೇ ಮಾಡದಿರುವುದನ್ನು ಕಾಣಬಹುದಾಗಿದೆ. |
| ೨೦ | ಅಧ್ಯಾಯ ೮, ಪು. ೯೫<br>'ನಮ್ಮ ಮನೆ ಕಂಡವರೆಲ್ಲ ಶೀನನ ಈ ಬೊಬ್ಬರ್ಯನ ಗುಡಿ ಹೀಗೆ ಇರುವುದೇನು? ಎಂದು ನಕಲಿ ಮಾಡಿ ಹೋಗುತ್ತಾರೆ. | ಅನುವಾದ – ೦೧ ಪುಟ ೭೫<br>'Every body who looks at my house has been saying, 'well, seena, how long will you continue to live in that Bobbaraya's temple which you call a house?' | ಅನುವಾದ ೦೧ ರಲ್ಲಿ 'ಬೊಬ್ಬರ್ಯ' ಎನ್ನುವುದಕ್ಕೆ 'Name of a devil' ಎನ್ನುವ ಅರ್ಥವನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ಆದರೆ ಅನುವಾದ ೦೨ ರಲ್ಲಿ ಬೊಬ್ಬರ್ಯ ಪದವನ್ನು ಕೈ ಬಿಟ್ಟು a mean God ಎಂದು ಬಳಸಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | ಅನುವಾದ – ೦೨, ಪುಟ 99<br>Everyone who looks at my house makes fun of it. "Is this temple of a mean God going to stay like this?" they would say. | ಇಲ್ಲಿ mean God ಎಂದರೆ ಕೆಳದರ್ಜೆಯ ದೇವರು ಎಂಬ ಅರ್ಥವನ್ನು ನೀಡುತ್ತದೆ. 'ಬೊಬ್ಬರ್ಯ', 'ಕಲ್ಕುಡ', 'ಉಮ್ಮಲ್ತಿ', 'ಪಂಜುರ್ಲಿ' ಈ ಮುಂತಾದ ದೈವೀ ಶಕ್ತಿಗಳನ್ನು ವಿಶೇಷವಾಗಿ ಆರಾಧಿಸುವ ಪದ್ಧತಿ ವಿಶೇಷವಾಗಿ ಅವಿಭಜಿತ ದಕ್ಷಿಣ ಕನ್ನಡ ಕರಾವಳಿ ಪ್ರದೇಶದ ಸಂಸ್ಕೃತಿಯಾಗಿ 'ಬೊಬ್ಬರ್ಯ'ನ ಪ್ರಸ್ತಾಪವನ್ನು ಕೈ ಬಿಡುವುದರಿಂದ ಇನ್ನೊಂದು ಭಿನ್ನ ಸಂಸ್ಕೃತಿಯಲ್ಲಿ ಇಲ್ಲಿನ ಪ್ರಾದೇಶಿಕ ವಿಚಾರಗಳು ವಿನಿಮಯವಾಗುವುದು ಸಾಧ್ಯವಾಗಲಾರದು. |
| ೨೧ | ಅಧ್ಯಾಯ ೧೦, ಪು. ೧೧೭<br>ಗುರಿಕಾರರ ಮನೆಯ ಕ್ರಮದಂತೆ ಎಲ್ಲರಿಗೂ ಸಕ್ಕರೆಯ ಪಾನಕವಿತ್ತು. ಆದರೆ, ಶೀನಮಯ್ಯನಿಗೆ ಬೆಳ್ಳಿಯ ಕೌಳಿಗೆಯಲ್ಲಿ ಅದನ್ನು ಎರೆಡೆರಡು ಬಾರಿ | ಅಧ್ಯಾಯ 10 ಅನುವಾದ – ೦೧<br>ಅನುವಾದಿಸಿರುವುದಿಲ್ಲ | ಮೂಲಕಾದಂಬರಿಯಲ್ಲಿ ಕಾರಂತರು ಬಳಸಿದ 'ಬೆಳ್ಳಿಯ ಕೌಳಿಗೆ' 'ಕಂಚಿನ ಗಿಂಡಿ' ಈ ಮುಂತಾದವುಗಳಿಂದ ಪಾನಕ, ಚಹ ಮುಂತಾದ ಪಾನೀಯಗಳನ್ನು ನೀಡುವ, ಕುಡಿಯುವ ಪದ್ಧತಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕೊಟ್ಟರು. ವೈದಿಕರಾಗಿದ್ದು ಐತಾಳರಿಗೆ ಕಂಚಿನ ಗಿಂಡಿಯಲ್ಲಿ ಒಂದೇ ಬಾರಿ ಕೊಟ್ಟು ಮುಗಿಸಿದರು. | ಅನುವಾದ – ೦೨ ಪು. ೧೨೧<br>According to the custom of their household, everyone had drinks with sugar in a silver container. Vaidika Aithala got it in a big bronze beaker, and just once. | ಇದೆ. ಸಮಾಜದಲ್ಲಿ ಪ್ರತಿಷ್ಠಿತರಿಗೆ, ಗೌರವಾನ್ವಿತರಿಗೆ ಬೆಳ್ಳಿಯ ಲೋಟಗಳಲ್ಲಿ ಪಾನೀಯಗಳನ್ನು ನೀಡಲಾಗುತ್ತಿತ್ತು. ಅನುವಾದದಲ್ಲಿ – ಬೆಳ್ಳಿಯ ಕೌಳಿಗೆ – 'Silver Container' ಎಂದು, 'ಕಂಚಿನ ಗಿಂಡಿ' ಶಬ್ಧಕ್ಕೆ 'a big bronze beaker' ಎಂದು ಬಳಸಿರುವುದು ಅನುವಾದದಲ್ಲಿ ಭಾಷೆಯ ಮಿತಿಯಾಗಿದೆ ಹಾಗೂ ಮೂಲ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಪ್ರಾದೇಶಿಕ ಸಂಸ್ಕೃತಿಯನ್ನು ಅನುವಾದದ ಕೃತಿಯಲ್ಲಿ ಯಥಾವತ್ತಾಗಿ ಪಡಿಮೂಡಿಸುವುದು ಭಾಷೆಯ ಮಿತಿಯಿಂದ ಸಾಧ್ಯವಾಗುವುದಿಲ್ಲ. |
| ೨೨ | ಅಧ್ಯಾಯ ೧೧, ಪು. ೧೩೫<br>ಒಬ್ಬ ಹೊಸ ಮಾಸ್ತರ ಬಂದಿದ್ದಾನಂತೆ ಸೇರೆಗಾರನೋ, ಸೆಟ್ಟಿಗಾರನೋ! ಬ್ರಾಹ್ಮಣರ ಮಕ್ಕಳು | ಅಧ್ಯಾಯ ೧೧, ಪುಟ ೧೧೦<br>I am told there is a new teacher at Karkada - a vaisya or shudra or something of the | ಮೂಲಕಾದಂಬರಿಯಲ್ಲಿ ಕಾರಂತರು ಜಾತಿ ಪದ್ಧತಿಯ ಸೂಕ್ಷ್ಮ ವಿಚಾರಗಳನ್ನು ಹೊರಗೆಡಹುತ್ತಾರೆ. ಬದಲಾದ ಸಾಮಾಜಿಕ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಅವನ ಬೆತ್ತದ ಪೆಟ್ಟನ್ನು ತಿನ್ನಬೇಕು ಎಂದರೆ ಎಲ್ಲಿಂದೆಲ್ಲಿಗೆ ಬಂದಿತು ಕಾಲಗತಿ!' ಎಂದರು. | sort. Do you want your son flogged by such people.<br>ಅನುವಾದ – ೦೨, ಪುಟ ೧೪೦<br>I believe a new teacher has come to teach - a supervisor of Labourers, or a weaver. To think that brahmin children should get the taste of his cane!, what has this age come to !' | ಪರಿಸ್ಥಿತಿಯಲ್ಲಿ ಶೂದ್ರವರ್ಗದವರು ಕೂಡ ಮಾಸ್ತರಿಕೆ ಮಾಡುವ ಕಾಲ ಬಂದಾಗ ಮೇಲ್ಜಾತಿಯವರಾದ ಬ್ರಾಹ್ಮಣರಿಗೆ ಇದು ಅನಾನುಕೂಲವಾದ ವಾತಾವರಣವನ್ನು ನಿರ್ಮಾಣ ಮಾಡಿದ ಚಿತ್ರಣವಿದೆ. ಶೂದ್ರ ಜನಾಂಗಕ್ಕೆ ಸೇರಿದವರಿಂದ ಶಾಲೆಯಲ್ಲಿ ಬೆತ್ತದ ಏಟನ್ನು ಬ್ರಾಹ್ಮಣ ಹುಡುಗರು ತಿನ್ನುವುದು ಅವಮಾನಕರ ಸಂಗತಿ ಎಂಬುವುದು ಇಲ್ಲಿ ವೇದ್ಯವಾಗುತ್ತದೆ. ಅನುವಾದ – 01 ಈ ವಿಚಾರವನ್ನು ಒಳಗೊಂಡಿದೆ. 'ಸೇರೆಗಾರ' ಹಾಗೂ 'ಸೆಟ್ಟಿಗಾರ' ಎಂಬುದು ಜಾತಿ ವಾಚಕ ಪದಗಳಾಗಿವೆ. ಅನುವಾದ – ೦೨ರಲ್ಲಿ ಅನುವಾದಕರು ಈ ವಿಚಾರವನ್ನು ಪ್ರಸ್ತಾಪಿಸಿಲ್ಲ. 'ಸೇರೆಗಾರ' 'Supervisor of labourers' ಎಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | 'ಸೆಟ್ಟಿಗಾರ'ರನ್ನು 'weaver' ಎಂದು ಅನುವಾದಿಸಲಾಗಿದೆ. ಇದು ಮೂಲ ಕಾದಂಬರಿಯ ವಿಚಾರವನ್ನು ಅಪಾರ್ಥಕ್ಕೆ ಈಡು ಮಾಡುತ್ತದೆ. |
| ೨೩ | ಅಧ್ಯಾಯ ೧೮, ಪು. ೨೩೭<br>'ನಾಗವೇಣಿ ಮಗುವಿಗೆ ಏನೂ ಹೆಸರು ಬೇಡವೇ?' 'ಕೂಸು' ಎಂದು ಕರೆಯುವುದೇನು ಚಂದ? ಕೂಸಾಳುಗಳ ಹುಡಗನೇನು ಅದು? ಹೆಸರಿಡಬೇಡವೇ? ಎಂದನು | ಅಧ್ಯಾಯ ೧೮, ಅನುವಾದ–೦೧ ಪುಟ ೨೦೭<br>'Nagaveni, should we not name the baloy?"<br>ಅನುವಾದ – ೦೨, ಪುಟ ೨೪೦<br>'Nagaveni, doesn't the child need a name? what's nice about calling it 'Koosu', a Child, all the time? Is he the child of the Koosalu tribe? shouldn't he have a name? | 'ಕೂಸಾಳು' ಎಂಬುದು ಪರಿಶಿಷ್ಟ ಪಂಗಡಕ್ಕೆ ಸೇರಿದ ಒಂದು ವರ್ಗದವರ ಹೆಸರಾಗಿದೆ. ಈ ಜನಾಂಗಕ್ಕೆ ಸೇರಿದವರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ವಾಸವಾಗಿದ್ದಾರೆ ಸಾಮಾಜಿಕವಾಗಿ ತೀರಾ ಹಿಂದುಳಿದ ಈ ಜನಾಂಗದಲ್ಲಿ ಜನಿಸಿರುವವರಿಗೆ ನಾಮಕರಣದಂತಹ ಪದ್ಧತಿಗಳು ರೂಢಿಯಲ್ಲಿರದ ಚಿತ್ರಣವನ್ನು ಕಾರಂತರು ನೀಡಿದ್ದಾರೆ. ಅನುವಾದ ೦೧ ರಲ್ಲಿ 'ಕೂಸಾಳು' ಎಂಬುದನ್ನು ಉಲ್ಲೇಖಿಸಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದ ೦೨ ರಲ್ಲಿ ಇದನ್ನು 'Koosalu tribe' ಎಂದು ವಿವರಿಸಿದ್ದಾರೆ. ಆದಾಗ್ಯೂ ಈ ಜನಾಂಗದಲ್ಲಿ ನಾಮಕರಣದಂತಹ ಪದ್ಧತಿಗಳು ರೂಢಿಯಲ್ಲಿರದ ಬಗ್ಗೆ, ಸಾಮಾಜಿಕವಾಗಿ ಹೇಗೆ ಅವರು ತೀರಾ ಕೆಳಸ್ತರದಲ್ಲಿ ಬದುಕು ಸಾಗಿಸುತ್ತಿದ್ದಾರೆ. ಎಂಬುದರ ಕುರಿತಾಗಿ ಅನುವಾದವನ್ನಷ್ಟೆ ಓದುವವರಿಗೆ ಅರಿವಿಗೆ ಬರಲಾರದು. ಅಡಿಟಿಪ್ಪಣಿಯನ್ನು ನೀಡಿ ಇದನ್ನು ವಿವರಿಸಿದಲ್ಲಿ ಇದು ಹೆಚ್ಚು ಸ್ಪಷ್ಟವಾಗುತ್ತಿತ್ತು. |
| ೨೪ | ಅಧ್ಯಾಯ ೧೮, ಪು. ೨೩೦<br>ಈ ನಡುವೆ, ಸತ್ಯ ಭಾಮೆಯೇ ಮಗನ ಮಾತನ್ನು ಕೇಳಿ, ಕೇಳಿ ಕಾಳಿಂಗನ ಹಾವಾಗಿದ್ದಳು. | ಅಧ್ಯಾಯ ೧೮, ಅನುವಾದ-೦೧ ಪುಟ ೧೯೯<br>'But satyabhama rose like a serpent about to strike and said.....' | 'ಕಾಳಿಂಗ' ಎಂಬುದು ಸರ್ಪದ ಜಾತಿಗೆ ಸೇರಿದ ಹಾವಾಗಿದಕ್ಕೆ 'King Kobra' ಎಂಬುದು ಇಂಗ್ಲಿಷನಲ್ಲಿ ಇದಕ್ಕೆ ಇರುವ ಪರ್ಯಾಯ ಪದವಾಗಿದೆ. ಇಂಗ್ಲೀಷನಲ್ಲಿ ಲಭ್ಯವಿರುವ ಈ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | ಅನುವಾದ – ೦೨, ಪು ೨೪೩ Sathyabhame had heard what her son had said and had turned into an enraged serpent | ಪದವನ್ನೇ ಅನುವಾದದಲ್ಲಿ ಬಳಸಿದ್ದರೆ ಅನುವಾದ ಹೆಚ್ಚು ಸಮರ್ಪಕವಾಗುತ್ತಿತ್ತು. |
| ೨೫ | ಅಧ್ಯಾಯ ೧೯, ಪು. ೨೪೮–೨೪೯ '.....ಅದು ಊರಿನ ಮದುವೆ ಮುಂಜಿಗಳಿಗೆ ಹೆದರಿಕೆ ಹುಟ್ಟುವಂತೆ ಮಾಡಿದರೂ, ಊರಿನ ಅಗೇಡಿಗಳಿಗೆ ಜನರು ಬೆವರಿಳಿಸಿಕೊಂಡು ಸಂಬಳಿಗೆ ನೀರನ್ನು ಮೊಗೆಯದಂತೆ ನಾಲ್ಕಾರು ಹನಿಗಳನ್ನು ಸುರಿದವು'. | ಅಧ್ಯಾಯ ೧೯, ಅನುವಾದ–೦೧ ಅನುವಾದಿಸಿರುವುದಿಲ್ಲ, ಸಂಕ್ಷಿಪ್ತಗೊಳಿಸಲಾಗಿದೆ. ಅನುವಾದ–೦೨ ಪು. 263 Though they alarmed people who were celebrating weddings and thread ceremonies in the village, a few rain drops fell and people sweated it out to scoop up water in <u>water-baskets.</u> | ಮಳೆಯ ಅಭಾವದಿಂದಾಗಿ ಬೆಳೆಗೆ ನೀರಿನ ಅಭಾವವಾದಾಗ ಬಾವಿಗಳಿಂದ ನೀರನ್ನು ಎತ್ತಿ ಈ ಗಿಡಗಳಿಗೆ ನೀರುಣಿಸಲು 'ಸಂಬಳಿಗೆ'ಗಳನ್ನು ಬಳಸುವುದು ಕರಾವಳಿ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ದೃಶ್ಯವಾಗಿದೆ. 'ಸಂಬಳಿಗೆ' ಈ ಶಬ್ಧವನ್ನು ಇಂಗ್ಲೀಷನಲ್ಲಿ <u>water-basket</u> ಎಂದು ಅನುವಾದಿಸಲಾಗಿದೆ. ಇದು ಉದ್ಧಿಷ್ಠ ಭಾಷೆಯಲ್ಲಿ ಪರ್ಯಾಯ ಪದಗಳ ಕೊರತೆಯಾದಾಗ ಅದನ್ನು ನೀಗಿಸಲು ಬಳಸಿದ ಪದವಾಗಿದ್ದರೂ – ಮೂಲ ಭಾಷೆಯಲ್ಲಿ ಬಳಸಿದ |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಪದದ ಪರಿಕಲ್ಪನೆಯನ್ನು ಅನುವಾದದಲ್ಲಿ ಕಟ್ಟಿಕೊಡುವುದು ಸಾಧ್ಯವಾಗುವುದಿಲ್ಲ. |
| ೨೬ | ಅಧ್ಯಾಯ ೨೦, ಪು. ೨೫೬<br>"..... ನಾನು ಅದರ ಕುದಿ ತೆಗೆದಾಯಿತು. ದೃಷ್ಟಿ ಸುಳಿದಾಯಿತು. ನೋಡಿ ಸಂಬಾರಬಳ್ಳಿ ಸೊಪ್ಪು ತಂದಿದ್ದೇನೆ. ಕಾಯಿಸಿ, ಒಂದಿಷ್ಟು ರಸ ಹಣೆಗೆ ಹಚ್ಚಿದರೆ ಜ್ವರ ಹೋಗುವುದಿಲ್ಲವೇ' ಎಂದಳು. | ಅಧ್ಯಾಯ ೨೦, ಅನುವಾದ–೦೧ ಪು. ೨೨೮<br>"..... I have brough herbs from upadhya. If I apply the juice to his forehead the temperature will go down".<br>ಅನುವಾದ – ೦೨, ಪು. ೨೭೪<br>"..... I have done things to ward off the evil eye. I have brought the sambaraballi creeper and leaves. won't the fever subside if I boil them and apply a little juice on his forehead?" | ಗ್ರಾಮೀಣ ಪ್ರದೇಶದಲ್ಲಿ ಮನೆಯಲ್ಲಿಯೇ ಔಷಧಿಗಳನ್ನು ತಯಾರಿಸಿ ಕುಡಿಸುವ, ಈ ಮನೆ ಮದ್ದಿನಲ್ಲಿಯೇ ಕೆಲಮಟ್ಟಿಗೆ ವ್ಯಾಧಿಗಳನ್ನು ಶಮನಗೊಳಿಸಿಕೊಳ್ಳುವ ಪರಿಪಾಠವು ಇತ್ತು. ಹಾಗೂ ಹಳ್ಳಿಗಳಲ್ಲಿ ಸಣ್ಣ ಮಕ್ಕಳಿಗೆ "ದೃಷಿ ತಾಕುವುದು" ಅದನ್ನು ಪರಿಹರಿಸಿಕೊಳ್ಳುವುದು ಈ ಮುಂತಾದ ನಂಬಿಕೆಗಳು ದಟ್ಟವಾಗಿ ಇಂದಿಗೂ ಹರಡಕೊಂಡಿರುವುದನ್ನು ಕಾಣಬಹುದಾಗಿದೆ. ಮೂಲ ಕಾದಂಬರಿಯಲ್ಲಿನ ಈ ಕುರಿತಾದ ವಿವರಣೆಯನ್ನು ಅನುವಾದ ೦೧ ರಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ. 'ದೃಷ್ಟಿ ಸುಳಿಯುವ' ಕುರಿತಾದ ವಿಚಾರವನ್ನು ಕೈ ಬಿಡಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | **ಸಂಬಾರಬಳ್ಳಿ** ಒಂದು ಗಿಡಮೂಲಿಕೆಯ ಹೆಸರಾಗಿದ್ದು ಅದನ್ನು 'herbs' ಎಂದಷ್ಟೆ ಅನುವಾದಿಸಲಾಗಿದೆ.<br>ಅನುವಾದ ೦೨ ರಲ್ಲಿ 'ದೃಷ್ಟಿ ಸುಳಿದಾಯಿತು' ಎನ್ನುವುದನ್ನು 'I have done things to word - off the evil eye' ಎಂದು ಅನುವಾದಿಸಲಾಗಿದೆ. 'ಸಂಬಾರಬಳ್ಳಿ' ಶಬ್ದವನ್ನು Sambaraballi Creeper ಎಂದೇ ಬಳಸಲಾಗಿದೆ. ಭಾಷೆಯ ಮಿತಿಯಿದ್ದರೂ ಅನುವಾದಕರು ಮೂಲದ ವಿಚಾರಗಳನ್ನು ಅನುವಾದಿಸಲು ಪ್ರಯತ್ನಿಸಿದ್ದಾರೆ. |
| ೨೭ | ಅಧ್ಯಾಯ ೨೦, ಪು. ೨೬೩<br>"ಎಂಥ ವಿಚಿತ್ರವಿದೆಯೇ? ಸನ್ನಿಪಾತಕ್ಕಾದರೂ ಹದಿನೈದು ದಿನ ಜ್ವರ ಬರಬೇಕು. ಇಂದು ಜ್ವರ | ಅಧ್ಯಾಯ ೨೦, ಅನುವಾದ-೦೧ ಪು. ೨೩೨<br>Even the deadly typhoid took atleast a fortnight to carry off its victim. This strange disease didnot allow even a day! | 'ಸನ್ನಿಪಾತ' ಎಂದರೆ ಶಬ್ಧಕೋಶದಲ್ಲಿ ವಿವರಿಸಿರುವ ಪ್ರಕಾರ ವಿಪರೀತ ಜ್ವರದಿಂದ ಉಂಟಾಗುವ ಬುದ್ಧಿ ಭ್ರಮೆಣೆ, ಶೀತದಿಂದುಂಟಾಗುವ ದೋಷ ಎಂಬ ಅರ್ಥ ಸಿಗುತ್ತದೆ. ಇದನ್ನು ಅನುವಾದ ೦೧ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಬಂದು ನಾಳೆಗೇ ಸಾಯುವುದುಂಟೇ' ಎಂದಳು ಆಕೆ ಭೀತಿಯಿಂದ | ಅನುವಾದ – ೦೨, ಪು. ೨೭೮<br>"Is there anything as peculiar as this? Even delirium appears only after a fortnight of fever. How can one get fever today and die tomorrow? She asked with fear. | ರಲ್ಲಿ typhoid ಎಂಬ ಪದನೀಡಿ ಅನುವಾದಿಸಲಾಗಿದೆ. ಅನುವಾದ ೦೨ ರಲ್ಲಿ ಇದಕ್ಕೆ delirium ಎಂಬ ಪದವನ್ನು ಪರ್ಯಾಯವಾಗಿ ಬಳಸಲಾಗಿದೆ. ಈ ಎರಡು ಪದಗಳ ಅರ್ಥದಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದಾಗಿದೆ. Delirium ಎಂಬ ಪದಕ್ಕೆ ಕನ್ನಡದಲ್ಲಿ ಚಿತ್ತಭ್ರಮೆ, ಉನ್ಮಾದ, ಮತಿ ಭ್ರಮೆ, ಸನ್ನಿಪಾತ – ಈ ಅರ್ಥಗಳನ್ನು ನೀಡಲಾಗಿದೆ. |
| ೨೮ | ಅಧ್ಯಾಯ ೨೩, ಪು. ೩೦೨<br>'.....ಹಾ! ಹಾ! ಶೀನಮಯ್ಯರಿಗೊಬ್ಬ ಒರಟ, ರಾಮ ಐತಾಳರಿಗೊಬ್ಬ ಲಚ್ಚ! ಕಂಬಳದ ಹೋರಿಗಳಿಗೆ ತಳಿಕೆ ಹಾಕಿದಷ್ಟು ಮೇಳ!' ಎಂದರು. | ಅಧ್ಯಾಯ ೨೩, ಅನುವಾದ–೦೧ ಪು. ೨೬೮<br>"What a pair! Seena Mayya's family is as unlucky as ours"<br>ಅಧ್ಯಾಯ ೦೨, ಪು. ೩೧೯<br>Orata for sheena Mayya and Lachcha for Rama Aithala ! A perfect pair like the | ಅನುವಾದ – ೦೧ ರಲ್ಲಿ 'ಕಂಬಳದ' ಪ್ರಸ್ತಾವವನ್ನು ಮಾಡಿರುವುದಿಲ್ಲ. ಕರಾವಳಿ ಸಂಸ್ಕೃತಿಯ ಭಾಗವಾಗಿರುವ 'ಕಂಬಳ' ಕ್ರೀಡೆ ಅನುವಾದದಲ್ಲಿ ಪ್ರಸ್ತಾಪಿತವಾದಾಗ ಮಾತ್ರ ಅದು ಇನ್ನೊಂದು ಸಾಂಸ್ಕೃತಿಕ ಪರಿಸರವನ್ನು ತಲುಪಲು ಸಾಧ್ಯವಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | Kambala bulls roped together for the race | ಅನುವಾದ – ೦೨ ರಲ್ಲಿ ಮೂಲ ಕಾದಂಬರಿಯ ವಿಚಾರಗಳನ್ನು ಅತ್ಯಂತ ಹತ್ತಿರದಿಂದ ಅನುವಾದಿಸುವ ಪ್ರಯತ್ನವನ್ನು ಕಂಡುಕೊಳ್ಳಬಹುದಾಗಿದೆ |
| ೨೯ | ಅಧ್ಯಾಯ ೨೩, ಪು. ೩೦೯<br>ಊಟಕ್ಕೆ ಮಜ್ಜಿಗೆ ನೀರು, ಕೆಸುವಿನ ಚಟ್ನಿ, ಗೆಣಸಿನ ಬಜ್ಜಿ, ಹಲಸಿನ ಬೇಳೆಯ ಪಲ್ಯ – ಇವೆಲ್ಲ ಬಚ್ಚಿಯು ಕೃಪೆಯಿಂದೊದಗಿಸುವ ತರಕಾರಿಗಳಿಂದ ಆಗುತ್ತವೆ. | ಅಧ್ಯಾಯ ೨೩, ಅನುವಾದ–೦೧ ಪು. ೨೭೫<br>For dinner then had thin butter - milk, Yams, curry made of the seeds of Jack fruit - all village fare.<br>ಅಧ್ಯಾಯ ೦೨, ಪು. ೩೨೭<br>There would be kesuve chutney, sweet potato bajji and vegetables by the kind courtesy of Bachchi. | ಒಂದು ಪ್ರದೇಶದಲ್ಲಿ ಬಳಕೆಯಲ್ಲಿರುವ ಆಹಾರ ಪದ್ಧತಿಯ ವಿಚಾರಗಳು ಈ ಮಾತುಗಳಲ್ಲಿ ಸಿಗುತ್ತವೆ. ಕೆಸುವಿನ ಚಟ್ನಿ, ಗೆಣಸಿನ ಬಜ್ಜಿ, ಹಲಸಿನ ಬೇಳೆ ಪಲ್ಯ ಈ ಮುಂತಾದುವುಗಳನ್ನು ಇನ್ನೊಂದು ಪ್ರದೇಶದಲ್ಲಿ ಬಳಸದೇ ಇರುವ ಅಥವಾ ರೂಢಿಯಲ್ಲಿರದ ಆಹಾರ ಕ್ರಮಗಳಾಗಿರುವ ಸಾಧ್ಯತೆಗಳಿವೆ. ಭಾಷೆಯ ಮಿತಿಯಿಂದಾಗಿ ಇವುಗಳನ್ನು ಅನುವಾದಿಸುವುದು ಕಷ್ಟ ಸಾಧ್ಯವಾಗುತ್ತದೆ. ಅನುವಾದ ೦೧ ರಲ್ಲಿ 'ಕೆಸುವಿನ ಚಟ್ನಿ'ಯನ್ನು ಕೈ ಬಿಡಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | 'ಗೆಣಸಿನ ಬಜ್ಜಿ' ಇದಕ್ಕೆ Yams ಎಂದಷ್ಟೇ ಬಳಸಲಾಗಿದೆ. ಪಲ್ಯ ಇದನ್ನು curry ಎಂದು ಅನುವಾದಿಸಲಾಗಿದೆ. ಅನುವಾದ ೦೨ ರಲ್ಲಿ 'ಕೆಸುವಿನ ಚಟ್ನಿ'ಗೆ 'Kesuve Chutney' ಎಂದೇ ಬಳಸಲಾಗಿದೆ. 'ಹಲಸಿನ ಬೇಳೆಯ ಪಲ್ಯ' ಇದನ್ನು ಕೈ ಬಿಡಲಾಗಿದೆ. ಪ್ರಾದೇಶಿಕ ಆಹಾರ ಕ್ರಮ, ತಿಂಡಿ ತಿನಿಸುಗಳನ್ನು ಅನುವಾದಿಸುವಲ್ಲಿ ಭಾಷೆಯ ಮಿತಿಯಿಂದಾಗಿ ಮೂಲದ ವಿಚಾರಗಳನ್ನು ಸಮರ್ಪಕವಾಗಿ ಪಡಿ ಮೂಡಿಸುವುದು ಸಾಧ್ಯವಾಗುವುದಿಲ್ಲ. ಹಾಗೂ ಅನುವಾದದ ಮೂಖೇನ ಒಂದು ಪ್ರದೇಶದ ಆಹಾರದ ಕ್ರಮವನ್ನು ಇನ್ನೊಂದು ಪ್ರದೇಶಕ್ಕೆ ಪರಿಚಯಿಸುವುದೇ ಕಷ್ಟ ಸಾಧ್ಯವಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೩೦ | ಅಧ್ಯಾಯ ೨೩, ಪು. ೩೧೨<br>ಅರಾಲಿನ ಮೇಲೆ ನಿಂತ ಗಾಳಿಯ ಮರಗಳ ಎಲೆಗಳು ಆ ರೀತಿ ಚಂಚಲವಾಗಿ ತೂಗಲಿಕ್ಕಿಲ್ಲ. | ಅಧ್ಯಾಯ ೨೬, ಅನುವಾದ-೦೧ ಪು. ೨೩೩<br>his mind as unsteady as the patm-leanes shaken by the wind.....<br>ಅನುವಾದ-೦೨ ಪು. ೩೩೦<br>Even the leaves of the Gaali tree on the beach not as disorderly. | ಗಾಳಿಯ ಮರಕ್ಕೆ ಇಂಗ್ಲೀಷಿನಲ್ಲಿ Casuarina ಎಂಬ ಶಬ್ಧ ಲಭ್ಯವಿದೆ. ಆದಾಗ್ಯೂ ಅನುವಾದ ೦೧ ರಲ್ಲಿ ಇದಕ್ಕೆ Palm-leaves ಅಂದರೆ 'ತಾಳಿಮರದ ಎಲೆ'ಗಳು ಅಂತಲೂ ಅನುವಾದ ೦೨ ರಲ್ಲಿ 'leaves of the Gaali tree' ಎಂದು ಬಳಸಲಾಗಿದೆ. ಇದು ಅನುವಾದದಲ್ಲಿ ಅಪಾರ್ಥಕ್ಕೆ ಅವಕಾಶ ಮಾಡಿಕೊಡುವ ಅಂಶವಾಗಿದೆ. |
| ೩೧ | ಅಧ್ಯಾಯ ೨೬, ಪು. ೩೪೬<br>'ಈಗ ನೋಡಿ ಈ ಯಾದವ ಕುಲದವರು ಕಳ್ಳು ಕುಡಿದು ಕೆಡುತ್ತಿದ್ದಾರೆ. ಕೃಷ್ಣಾ ಯಾರನ್ನಾದರೂ ಅವರ ಉದ್ಧಾರಕ್ಕೆ ಕಳುಹಿಸು' | ಅಧ್ಯಾಯ ೨೬, ಅನುವಾದ-೦೧ ಪು. ೩೬೬<br>ಅನುವಾದಿಸಿರುವುದಿಲ್ಲ.<br>ಅನುವಾದ-೦೨<br>'look, the people of the Yadava family are destryoing themselves today by drinking toddy. Krishna, send someone to give them salvation'. | ಮೂಲಕಾದಂಬರಿಯಲ್ಲಿ ಕಾರಂತರು ಪುರಾಣದಲ್ಲಿ ಬರುವ ಯಾದವರ ಅಂತ್ಯಕಾಲದ ಸಂದರ್ಭವನ್ನು ತಮ್ಮ ಹಾಸ್ಯ ಪ್ರಜ್ಞೆಯೊಂದಿಗೆ ಇಲ್ಲಿ ಬಳಸಿದ್ದಾರೆ. ಅನುವಾದ ೦೧ ರಲ್ಲಿ ಇದರ ಪ್ರಸ್ತಾಪ ಬರುವುದಿಲ್ಲ. ಅನುವಾದ ೦೨ ರಲ್ಲಿ ಯಾದವ ಕುಲದವರು ಎಂಬುದನ್ನು 'Yadava family' ಎಂದು ಬಳಸಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಭಾರತದ ಪುರಾಣದ ಹಿನ್ನಲೆಯಿಲ್ಲದ ಓದುಗರಿಗೆ 'Yadava family' ಎಂದರೆ ಯಾವುದು ಎಂಬುದರ ಕಲ್ಪನೆ ಅಸ್ಪಷ್ಟವಾಗುತ್ತದೆ. |
| ೨೨ | ಅಧ್ಯಾಯ ೩೦, ಪು. ೪೦೧<br>'ಚೆನ್ನ ಏ ಹೆಣ್ಣೇ – ಅಯ್ಯಾ, ಅಷ್ಟು ದೂರ ನಡೆದು ಮದ್ದು ತಂದು ಕೊಟ್ಟರೆ ಅದನ್ನು ನಾಯಿ ಹಾಗೆ ಕಾಲಿಗೆ ಹಚ್ಚಿಕೊಳ್ಳಬಾರದೇ? ಈ ಮೊಗೇರ ಮಕ್ಕಳಿಗೆ ರಾಪು ಹೆಚ್ಚಿಯೇ ಈ ವರ್ಷ ಕಡಲಿಗೆ ಬೈಗೆ ಮೀನು ಬಾರದೆ ಇದ್ದುದು' | ಅಧ್ಯಾಯ ೩೦, ಅನುವಾದ ೦೧ ಪು. ೩೪೪<br>"Silly woman", said channa "Here is master bringing you medicine all the way from Udupi, and you go by the advice of that dunder" head husband of yours! You are getting too clever. That's how we come to have no fish in the sea."<br>ಅನುವಾದ ೦೨ ಪು. ೪೨೩<br>Chomma said, 'you woman, when he goes so far and gets you the medicine, you refuse to apply it on your feet, like a dog! It is because these Mogera folk are | ಮೂಲಕಾದಂಬರಿಯಲ್ಲಿ 'ಏ ಹೆಣ್ಣೇ' ಎಂಬುದನ್ನು ಅನುವಾದ ೦೧ರಲ್ಲಿ 'Silly woman' ಎಂದು ಅನುವಾದಿಸಲಾಗಿದೆ. ಅನುವಾದ ೦೨ರಲ್ಲಿ 'You woman' ಎಂದಷ್ಟೇ ಅನುವಾದಿಸಲಾಗಿದೆ. 'ಅದನ್ನು ನಾಯಿ ಹಾಗೆ ಹಚ್ಚಿಕೊಳ್ಳಬಾರದೇ' ಎಂದು ನೀಡಿರುವ ಹೋಲಿಕೆಯನ್ನು ಅನುವಾದ ೦೧ ರಲ್ಲಿ "....and you go by the advice of that dunder head husband of yours' ಎಂದು ಅನುವಾದಿಸಲಾಗಿದೆ.<br>ಅನುವಾದ ೦೨ ರಲ್ಲಿ 'you refuse to apply it, |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | getting swollen headed. That's why the Baige fish does not come any more to the sea'. | on your feet, like a dog' ಎಂದು ಅನುವಾದಿಸಲಾಗಿದೆ. ಅನುವಾದ ೦೧ ರಲ್ಲಿ 'ಈ ಮೊಗೇರ ಮಕ್ಕಳಿಗೆ ರಾಪು ಹೆಚ್ಚಿಯೇ ಈ ವರ್ಷ ಕಡಲಿಗೆ ಬೈಗೆ ಮೀನು ಬಾರದೆ ಇದ್ದುದು' ಇದನ್ನು 'You are getting too clever. That is how we come to have no fish in the sea' ಎಂದು ಅನುವಾದಿಸಲಾಗಿದೆ. ಇಲ್ಲಿ 'ಮೊಗೇರ' ಎಂಬ ಮೀನುಗಾರ ವರ್ಗದ ಹೆಸರನ್ನು ಕೈ ಬಿಡಲಾಗಿದೆ. ಹಾಗು ಮೀನಿನ ಒಂದು ಪ್ರಕಾರವಾದ 'ಬೈಗೆ ಮೀನು' ಇದನ್ನು ಕೂಡ ಅನುವಾದದಲ್ಲಿ ಕೇವಲ 'fish' ಎಂದಷ್ಟೇ ಅನುವಾದಿಸಲಾಗಿದೆ.<br>ಅನುವಾದ ೦೨ ರಲ್ಲಿ 'ಮೊಗೇರ ಮಕ್ಕಳು' ಎಂಬುದನ್ನು 'Mogera Folk' ಎಂದು, 'ಬೈಗೆ |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಮೀನನ್ನು' 'Baige fish' ಎಂದು ಇಂಗ್ಲಿಷನಲ್ಲಿ ಬಳಸಲಾಗಿದೆ. ಎರಡೂ ಅನುವಾದವಲ್ಲಿಯೂ ಮೂಲದ ವಿಚಾರಗಳು ಸ್ಪಷ್ಟವಾಗಿ ಅನುವಾದಗೊಳ್ಳದೇ ಇರುವುದನ್ನು ಗುರುತಿಸಬಹುದಾಗಿದೆ. ಇದರಿಂದ ಭಾಷಾಂತರಕ್ಕೆ ಇರುವ ಭಾಷೆಯ ಮಿತಿಯನ್ನು ತಿಳಿದುಕೊಳ್ಳಬಹುದಾಗಿದೆ. |
| ೩೩ | ಅಧ್ಯಾಯ ೩೦, ಪು. ೪೧೯<br>'ಅತ್ತೆ, ನಿಮ್ಮ ಊರಿನ ಮೇಳದಲ್ಲಿ ಈ ವರ್ಷ ಯಾರಂತೆ ಎರಡನೆಯ ವೇಷ? ಬಣ್ಣಕ್ಕೆ ಯಾರು? ನಮ್ಮೂರಲ್ಲಿ ಇನ್ನು ಒಂದು ಅಟವಾಗಲಿಲ್ಲ....." | ಅಧ್ಯಾಯ ೩೦, ಅನುವಾದ ೦೧ ಅನುವಾದಿಸಿರುವುದಿಲ್ಲ<br>ಅನುವಾದ 02, ಪು. ೪೩೨<br>'Atte, who will take the second lead this year in your troupe? who will paint and decorate them. We haven't had a single play here.....' | ಇಲ್ಲಿ 'ಮೇಳ' ಎಂಬುದು ಕರ್ನಾಟಕದ ಅವಿಭಜಿತ ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಯಲ್ಲಿ ಯಕ್ಷಗಾನದ ಮೇಳಗಳನ್ನು ಕಟ್ಟಿಕೊಂಡು ಪ್ರಸಂಗಗಳನ್ನು ಊರೂರಲ್ಲಿ ಆಡಿಸಿ ತೋರಿಸುವ ಸಂದರ್ಭದ ವಿಚಾರವನ್ನು ನೀಡುತ್ತದೆ. ಇದು ಕರಾವಳಿ ಪ್ರದೇಶದಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಸಾಮಾನ್ಯವಾಗಿ ಕಂಡು ಬರುವ ಚಿತ್ರಣ ಹಾಗೂ 'ಎರಡನೆಯ ವೇಷ' ಎಂದರೆ ಯಕ್ಷಗಾನದಲ್ಲಿ 'ಭಾಗವತರನ್ನು' ಪ್ರಥಮ ವೇಷಧಾರಿ ಎಂದು ಕರೆಯಲಾಗುತ್ತದೆ. 'ಎರಡನೆಯ ವೇಷ' ಎಂದರೆ 'ಪಾತ್ರಧಾರಿ' ಎಂಬ ಅರ್ಥವನ್ನು ನೀಡುತ್ತದೆ. ಆದರೆ ಈ ವಿಚಾರಗಳನ್ನು ಅನುವಾದ ೦೧ ರಲ್ಲಿ ಅನುವಾದಿಸಲಾಗಿಲ್ಲ. ಅನುವಾದ ೦೨ ರಲ್ಲಿ ಈ ವಿಚಾರ ಸ್ಪಷ್ಟವಾಗಿ ಮೂಡಿ ಬಂದಿಲ್ಲ. ಹಾಗೂ ಕನ್ನಡದಲ್ಲಿರುವ 'ಅತ್ತೆ' ಎಂಬ ಸಂಬಂಧ ವಾಚಕ ಪದವನ್ನು ಇಂಗ್ಲೀಷನಲ್ಲಿಯೂ 'Atte' ಎಂದೇ ಅನುವಾದಿಸಿರುವುದರಿಂದ ಓದುಗರಿಗೆ ಇದರ ಅರ್ಥ ತಿಳಿಯಲಾರದು. ಹಾಗೂ ಮೇಳ ಎಂಬ ಶಬ್ಧಕ್ಕೆ ಬಳಸಿರುವ Troup ಎಂಬ ಪದವೂ ಕೂಡ ಸಮಾನಾರ್ಥಕ ಪದವಾಗಿ ಕಂಡು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಬರುವುದಿಲ್ಲ. ಈ ಸಂದರ್ಭದಲ್ಲಿಯೂ ಒಂದು ಪ್ರದೇಶದ ಸಾಂಸ್ಕೃತಿಕ ವಿಚಾರಗಳನ್ನು ಭಾಷೆಯ ಮಿತಿಯಿಂದಾಗಿ ಇನ್ನೊಂದು ಭಾಷೆಗೆ ಸಮರ್ಪಕವಾಗಿ ಅನುವಾದಿಸುವುದು ಕಷ್ಟಸಾಧ್ಯ ಎಂಬುದನ್ನು ಅರಿಯಬಹುದಾಗಿದೆ. |

ಇಲ್ಲಿ ಪ್ರಾದೇಶೀಕ ಕಾದಂಬರಿಯೊಂದನ್ನು ಅನುವಾದಿಸಿರುವ ಎರಡು ಅನುವಾದಗಳನ್ನು ತುಲನೆ ಮಾಡಿ ನೋಡುವ ಸಂದರ್ಭದಲ್ಲಿಯೂ ಸಾಕಷ್ಟು ವಿಚಾರಗಳಲ್ಲಿ ಅನುವಾದಗಳ ಮದ್ಯೆ ಸಾಕಷ್ಟು ಅರ್ಥ ವ್ಯತ್ಯಾಸಗಳಾಗುವುದನ್ನು ಕಾಣಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಭಾಷಾಂತರದ ಮಿತಿಯಿಂದಾಗಿ ಈ ವ್ಯತ್ಯಾಸಗಳು ಕಂಡು ಬಂದರೆ ಇನ್ನು ಕೆಲವು ಸಂದರ್ಭಗಳಲ್ಲಿ ಭಾಷೆಯ ಮಿತಿಯಿಂದಾಗಿಯೂ ಈ ವ್ಯತ್ಯಾಸಗಳು ಕಂಡು ಬಂದಿವೆ. ಭಾಷಾಂತರಿಸುವ ಸಂದರ್ಭದಲ್ಲಿ ಆಳವಾದ ಪರಿಶ್ರಮವನ್ನು ವಹಿಸಬೇಕಾಗುತ್ತದೆ ಎಂಬುದು ಕೂಡ ಬಹುಮುಖ್ಯವಾದ ವಿಚಾರವಾಗಿದೆ.

## ೩. ಮೂಲ ಕಾದಂಬರಿ : 'ಕುಡಿಯಾರ ಕೂಸು'

## ಅನುವಾದ : THE HEADMAN OF THE LITTLE HILL

## ಅನುವಾದಕರು : H.Y. SHARADA PRASAD

೧೯೫೧ರಲ್ಲಿ ಕಾರಂತರು ಕನ್ನಡ ಸಾಹಿತ್ಯಲೋಕಕ್ಕೆ ಅರ್ಪಿಸಿದ ಕಾದಂಬರಿ ಇದಾಗಿದೆ. ದಕ್ಷಿಣ ಕನ್ನಡದ ಜೀವನ ಚಿತ್ರಗಳಲ್ಲಿ ಈ ಕಾದಂಬರಿಯಲ್ಲಿ ಪ್ರಸ್ತಾಪಿತವಾಗಿರುವ ಕುಡಿಯ ಸಮುದಾಯವು ಒಂದಾಗಿದೆ. ಉಳಿದ ಜನಜೀವನ ಚಿತ್ರಗಳಿಂತ ಇದು ಬೇರೆಯೇ ಆಗಿದೆ ಎಂದು ಕಾರಂತರು ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ೧೯೫೧ ರಷ್ಟು ಹಿಂದೆಯೇ ಈ ಕಾದಂಬರಿಯನ್ನು ಎಚ್. ವೈ. ಶಾರದಾ ಪ್ರಸಾದರವರು ಇಂಗ್ಲಿಷಗೆ ಅನುವಾದಿಸಿದ್ದರೂ ಇದು ಮುದ್ರಣವನ್ನು ಕಾಣಲಿಲ್ಲ. ಸ್ವತ: ಕಾರಂತರೇ ಇಂಗ್ಲಿಷ ಭಾಷೆಯಲ್ಲಿ ಮುದ್ರಿಸುವ ಸಂಬಂಧ ವಿದೇಶಿ ಪ್ರಕಾಶಕರನ್ನು ಸಂಪರ್ಕಿಸಿದ್ದರೂ ಅದು ಸಾಧ್ಯವಾಗಲಿಲ್ಲ. ಲಂಡನ ವಿಶ್ವವಿದ್ಯಾಲಯದ ಏಶಿಯನ್ ಆ್ಯಂಡ್ ಆಫ್ರಿಕನ್ ಸ್ಟಡೀಸ್ ವಿಭಾಗದ ಅಂದಿನ ಮುಖ್ಯಸ್ಥರಾದ ಹಾಗೂ ಪ್ರಸಿದ್ಧ ಮಾನವಶಾಸ್ತ್ರಜ್ಞರಾದ ಡಾ. ಮೊನ್. ಪ್ಯುರೆರ್ ಹೈಮನ್ ಡಾರ್ಫ್ (Dr. Von Furer Haimandorf) ಇವರು ಪ್ರಸ್ತುತ ಕಾದಂಬರಿಯ ಇಂಗ್ಲೀಷ ಅನುವಾದದ 'ಹಸ್ತಪ್ರತಿ'ಯನ್ನು ಓದಿ ಸಾಕಷ್ಟು ಪ್ರಭಾವಿತರಾಗಿದ್ದರು. ಈ ಕಾರಣದಿಂದಾಗಿಯೇ ಅಂದಿನ ದಕ್ಷಿಣಕನ್ನಡದ ಪಶ್ಚಿಮ ಘಟ್ಟ ಪ್ರದೇಶದಲ್ಲಿ ವಾಸಿಸುತ್ತಿದ್ದ 'ಕುಡಿಯ ಸಮುದಾಯ'ವನ್ನು ತಮ್ಮ ಪತ್ನಿ ಬೆಟ್ಟಿಯೊಂದಿಗೆ ಭೇಟಿ ಮಾಡಿದ್ದರು. ಕಾರಂತರೇ ಈ ದಂಪತಿಗಳನ್ನು 'ಕುಡಿಯರ' ಭೇಟಿಗಾಗಿ ಕರೆದು ಕೊಂಡು ಹೋಗಿರುವುದನ್ನು ಇಂಗ್ಲಿಷ ಅನುವಾದದ ಮುನ್ನುಡಿಯಲ್ಲಿ ವಿವರಿಸಿದ್ದಾರೆ. ಪಶ್ಚಿಮ ಘಟ್ಟದ ತಪ್ಪಲಿನಲ್ಲಿ ವಾಸಿಸುತ್ತದೆ. ಸಣ್ಣ ಜನಾಂಗವಾದ 'ಕುಡಿಯರ'

ಬದುಕಿನ ಸಮಸ್ಯೆಗಳನ್ನು ಅವರಲ್ಲಿ ಬೇರೂರಿದ್ದು ಬಲವಾದ ನಂಬಿಕೆಗಳು, ಕಟ್ಟುಕಟ್ಟಳೆಗಳು, ಆಚರಣೆಗಳು ಇತ್ಯಾದಿಗಳನ್ನು ಕಾರಂತರು ಕೆಲವು ದಿನಗಳ ಕಾಲ ಪ್ರದೇಶದಲ್ಲಿ ಅವರೊಂದಿಗೆ ವಾಸಿಸಿ ಅರಿತುಕೊಂಡು 'ಕುಡಿಯರ ಕೂಸು' ಕಾದಂಬರಿಯನ್ನು ರಚಿಸಿರುವುದು ವಿಶೇಷವಾಗಿದೆ. ಕುಡಿಯ ಜನರು ಎದುರಿಸುತ್ತಿದ್ದ ಸಾಮಾಜಿಕ ಸಮಸ್ಯೆಗಳು ಹಾಗೂ ಪರಕೀಯರ ಪ್ರವೇಶದಿಂದಾಗಿ ಅವರ ಜನಜೀವನದಲ್ಲಿ ಆದ ಬದಲಾವಣೆಗಳ ಕುರಿತಾದ ಚಿತ್ರಣಗಳು ಈ ಕಾದಂಬರಿಯಲ್ಲಿ ಸಿಗುತ್ತವೆ. ಕಾದಂಬರಿಯ ವಸ್ತು ವಿಶೇಷತೆಯಿಂದಾಗಿ ಪ್ರಸ್ತುತ ಕಾದಂಬರಿಯನ್ನಾಧರಿಸಿ 'ಮಲೆಯ ಮಕ್ಕಳು' ಚಲನಚಿತ್ರವು ನಿರ್ಮಾಣವಾದುದನ್ನು ಇಲ್ಲಿ ಮನಗಾಣಬಹುದಾಗಿದೆ. ಮೂಲಕಾದಂಬರಿಯಲ್ಲಿದಂತೆ ಅನುವಾದದಲ್ಲಿಯೂ ಇಪ್ಪತ್ತು ಅಧ್ಯಾಯಗಳನ್ನು ಹೊಂದಿದೆ.

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೧ | ಅಧ್ಯಾಯ ೨೦, ಪು. ೨<br>ಕಿರಿಮಲೆಯ ಕಲ್ಕುಡ ಉಳಿದ ದೈವಗಳಂತಲ್ಲವಂತೆ. ಬಲು ಸಿಡುಕಿನ ದೈವ, ಪ್ರತಾಪಶಾಲಿ ದೈವ. ಕಣಿವೆಯ ಕೆಳಗಿನ ದೈವಗಳಿಗೆ ಸಲ್ಲಿಸುವ ಕೋಲ, ನೇಮ ನಾಲ್ಕು ದಿನ ಹೆಚ್ಚು ಕಡಿಮೆಯಾದರೂ ನಡೆಯುತ್ತದೆ. ಪೂಜೆಯ ಕ್ರಮದಲ್ಲಿ ತುಸು ವ್ಯತ್ಯಾಸವಾದರೂ ನಡೆಯುತ್ತದೆ. "ನನ್ನಪ್ಪ, ನನ್ನಮ್ಮ, ತಪ್ಪಿ ನಡೆದೆ, ಇದೋ ಕಾಣಿಕೆ" ಎಂದರೆ ದೈವ ತೆಪ್ಪಗಾಗುತ್ತದೆ. ಕಿರಿಮಲೆಯ ಕಲ್ಕುಡ ಆ ರೀತಿಯ ಬೆನ್ನು ಮೂಳೆ ಇಲ್ಲದಂಥ ದೈವವೇ ಅಲ್ಲ...... | Chapter 1, Page 4<br>Kalkuda of the Little Hill was not like other deities. He was not placid like the Gods and demons down the valley. Delay of a day or two in celebrating their feasts would not annoy them and they were ready to forgive little lapses in the rules of worship. But Kalkuda was not a spineless deity..... | 'ಕೋಲ' 'ನೇಮ' ಈ ಪದಗಳಿಗೆ ಪರ್ಯಾಯ ಪದಗಳು ಉದ್ದಿಷ್ಟ ಭಾಷೆಯಲ್ಲಿ ದೊರೆಯದೇ ಇರುವುದರಿಂದ 'Celebrating their feasts' ಎಂದಷ್ಟೇ ಬಳಸಲಾಗಿದೆ. ಮೂಲದ ಭಾವವನ್ನು ಅನುವಾದದಲ್ಲಿ ಪಡಿ ಮೂಡಿಸುವ ಪ್ರಯತ್ನ ಮಾಡಲಾಗಿದೆಯಾದರೂ ಮೂಲದ ಸಾಂಸ್ಕೃತಿಕ ಅಂಶಗಳಾದ 'ಕೋಲ' 'ನೇಮ'ಗಳು ಇನ್ನೊಂದು ಭಾಷೆಗೆ ಪರಿಚಿತವಾದಂತಾಗಲಿಲ್ಲ. ಭಾಷಾಂತರದ ಮಿತಿಯನ್ನು ಈ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. |
| ೦೨ | ಪು. ೫<br>ಹೊರಡುವಾಗಲೇ ಅವನ ಎಡದ ಹುಬ್ಬು ಹಾರಿತ್ತು. ಹತ್ತು ಹೆಜ್ಜೆ ಹೋಗುತ್ತಲೇ ಬೆಕ್ಕೊಂದು ಅಡ್ಡ | ಅನುವಾದಿಸಿರುವುದಿಲ್ಲ. | ಕೆಂಚನನ್ನು ಕಾದಂಬರಿಯಲ್ಲಿ Headman of the Little Hill ಎಂದು ಗುರುತಿಸಲಾಗಿದೆ. ಅನುವಾದಕರು 'Headman' ಎಂದೇ ಬಳಸಿದ್ದಾರೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಬಂದಿತ್ತು. | | 'ಗುರಿಕಾರ' ಎನ್ನುವ ಪದಕ್ಕೆ 'Headman' ಎಂದು ಬಳಸಿರುವುದು ಕಂಡು ಬರುತ್ತದೆ. ಮೂಲದ ಅಧ್ಯಾಯವನ್ನು ಅನುವಾದದಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ. 'ಎಡದ ಹುಬ್ಬು ಹಾರುವುದು' 'ಬೆಕ್ಕು ಅಡ್ಡ ಬರುವುದು' ಅಪಶಕುನದ ಸಂಕೇತಗಳು ಅನುವಾದದಲ್ಲಿ ಪ್ರಸ್ತಾಪಿತವಾಗಿಲ್ಲ. |
| ೦೩ | ಅಧ್ಯಾಯ ೨, ಪು. ೨೯<br>ಕಾಲಗತಿ ಬದಲಿಸಿದಂತೆ, ಹಬ್ಬಕ್ಕೆ ಬರುತ್ತಿದ್ದ ಮಣಸರಕಿನ ಮೇಲೂ, ಹಸರದ ಇನ್ನಿತರ ಒಡವೆಗಳ ಮೇಲೂ ಅವರಿಗೆ ಮೋಹ ಬೆಳೆಯಿತು. ಮಲೆಯಿಂದ ಬರುವಾಗ ಜೇನು, ಸೀಗೆ ಮೊದಲಾದುವನ್ನು ಹೊತ್ತು ತಂದು ಜಾತ್ರೆಯಲ್ಲಿ ವಿಕ್ರಯಿಸುತ್ತಾರೆ. ದೊರೆತ ಹಣದ ಬೆಲೆ ಅರಿಯದ | Chapter 2, Page 11<br>As times changed, they came to love beads, bangles and other Knick-Knacks sold by pedlars at the fair. They would take honey and soapnut from their huts and bring back bits of glass or black beads or iron bangles. They even made the aquaintance of soap and matches, those marks of civilisation. | ಅಧುನಿಕತೆಯ ಪ್ರಭಾವದಿಂಧ ದೂರ ಉಳಿದಿದ್ದ ಕುಡಿಯರ ಬದುಕಿನಲ್ಲಿ ಬದಲಾವಣೆಯ ಗಾಳಿ ಬೀಸ ತೊಡಗಿದ ಸಂದರ್ಭವನ್ನು ಮೂಲ ಕಾದಂಬರಿಯಲ್ಲಿ ವಿವರಿಸಲಾಗಿದೆ. ಜಾತ್ರೆಗೆ ಬರುವ ಅಲಂಕಾರ ವಸ್ತುಗಳ ಬಗೆಗೆ ಬಯಕೆ ಮೂಡಲಾರಂಬಿಸಿತು. ಕಾಡಿನ ಉತ್ಪನ್ನಗಳಿಂದ 'ಜೇನು' 'ಸೀಗೆ' ಮುಂತಾದವುದಗಳನ್ನು ಮಾರಿ ಬಂದ ಹಣದಿಂದ ತಮಗೆ ಇಷ್ಟವಾದ ಕನ್ನಡಿ, |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಅವರ, ಅದಕ್ಕೆ ಪ್ರತಿಯಾಗಿ, ಮಣಿಸರಕಿನಲ್ಲಿ ದೊರೆಯುತ್ತಿದ್ದ ಕನ್ನಡಿ, ಗಾಜು, ಕರಿಮಣಿ, ಕಬ್ಬಿಣದ ಬಳೆ, ಸೂಜಿ ಮೊದಲಾದ ಅರ್ವಾಚೀನ ಯುಗದ ವಸ್ತುಗಳನ್ನು ಕೊಂಡು ಮಲೆಗೆ ಮರಳುತ್ತಾರೆ. ಜಾತ್ರೆಗೆ ವಿಲಾಯತಿಯ ಚೂರಿ ಬರತೊಡಗಿತು. ಬಟ್ಟೆಯನ್ನು ಬೆಳ್ಳಗೆ ಮಾಡುವ ಸಬಕಾರ ಬರತೊಡಗಿತು. ಉರಿಸುವ ಬೆಂಕಿ ಪೆಟ್ಟಿಗೆಯೂ ಬರತೊಡಗಿತು. ಹೀಗೆ ಕುಡಿಯರು ನಾಲ್ಕೆಂಟು ವಿಚಿತ್ರ ಸಾಮಾನುಗಳ ಪರಿಚಯ ಮಾಡಿಕೊಂಡರೂ ಅವರ ಜೀವನದಲ್ಲಿ ಆಧುನಿಕ ನಾಗರಿಕತೆಯ ಹೆಚ್ಚಿನ ಪ್ರಭಾವ ಉಂಟಾಗಲಿಲ್ಲ. | | ಗಾಜು, ಕರಿಮಣಿ, ಕಬ್ಬಿಣದ ಬಳೆ ಸೂಜಿ ಮೊದಲಾದ ವಸ್ತುಗಳನ್ನು ಖರೀದಿಸಿ ಮನೆಗೆ ತಿರುಗಿ ಬರುತ್ತಾರೆ. ಅನುವಾದದಲ್ಲಿ 'ಗಾಜು'ಗೆ 'bits of glass' 'ಕರಿಮಣಿ'ಗೆ 'black beads' ಎಂದು 'ಕಬ್ಬಿಣದ ಬಳೆ'ಗೆ 'iron bangles'; ಎಂದು ಪರ್ಯಾಯ ಪದಗಳನ್ನು ಬಳಸಿದ್ದಾರೆ. 'ಕನ್ನಡಿ', 'ಸೂಜಿ' ಈ ಪದಗಳನ್ನು ಅನುವಾದಿಸಿರುವುದಿಲ್ಲ. ಮೂಲದ ಭಾಷೆಯ ಸೊಗಡನ್ನು ಅನುವಾದದಲ್ಲಿ ಕಾಣುವುದು ಸಾಧ್ಯವಾಗುವುದಿಲ್ಲ. ಒಟ್ಟು ಸಾರಾಂಶವನ್ನು ವಿವರಿಸಿದ ರೀತಿಯಲ್ಲಿ ಕಂಡು ಬರುತ್ತದೆ. |
| ೧೪ | ಅಧ್ಯಾಯ ೩, ಪು. ೫೪<br>ಕಾಯಿ, ಕರ್ಪೂರ, ಬಾಳೆಹಣ್ಣುಗಳನ್ನು | Chapter 3 Page 30<br>.....and prayed to the Lord to protect his grandson..... | ದೇವರಿಗೆ ಪೂಜೆ ಸಲ್ಲಿಸುವ ಸಂದರ್ಭದಲ್ಲಿ ಬಳಸುವ ಪೂಜಾ ಸಾಮಾಗ್ರಿಗಳು, ದೇವರಿಗೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕೊಂಡುಕೊಂಡು, ದೇವಾಲಯಕ್ಕೆ ಸುತ್ತು ಬಂದು, ಹಣ್ಣುಕಾಯಿಗಳನ್ನರ್ಪಿಸಿ ದೂರದಲ್ಲಿ ಮೊಣಕಾಲೂರಿ ತದೇಕ ಚಿತ್ತನಾಗಿ ಧ್ಯಾನಿಸಿದ – ದೇವರನ್ನು ಕುರಿತು. | | ಅರ್ಪಿಸುವ ಕಾಯಿ, ಕರ್ಪೂರ, ಬಾಳೆಹಣ್ಣು, ದೇವಾಲಯಕ್ಕೆ ಸುತ್ತು ಬರುವುದು. ಈ ಮೂಲದ ವಿಚಾರಗಳನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. ಈ ಎಲ್ಲಾ ವಿಚಾರಗಳನ್ನು ಸಂಕ್ಷಿಪ್ತಗೊಳಿಸಿ – ಕೇವಲ ತನ್ನ ಮೊಮ್ಮಗನನ್ನು ರಕ್ಷಿಸುವಂತೆ ದೇವರಲ್ಲಿ ಪ್ರಾರ್ಥಿಸಿದ ಎಂಬಷ್ಟೇ ವಿಚಾರವನ್ನು ನೀಡಲಾಗಿದೆ. |
| ೦೫ | ಅಧ್ಯಾಯ ೪, ಪು. ೬೩<br>ಇನ್ನೊಮ್ಮೆ ಮೊಳಗಿತು ವಾದ್ಯ, ಕೆಂಚ, ಹಿರಿ ಮಲೆಯ ಗುರಿಕಾರ ವಾದ ಏನೇನೋ ಹೇಳಿಕೊಂಡರು. ಪೂಜಾರಿ ಆವೇಶ ತಾಳಿದ : ಮೈ ತುಂಬಿದ ದೆವ್ವದಿಂದ ಪ್ರೇರಿತವಾದವನಂತೆ ಕೈಯಲ್ಲಿ ಸಿಂಗಾರ ಹೂ ಹಿಡಿದು ನಡುಗ ತೊಡಗಿದ; ಕಣ್ಣರಳಿಸಿದ, ಹಣವನ್ನು ಮುಖಕ್ಕೆ | Chapter 4, Page 25<br>The drums sounded again. The Head-men of the two hills offered a murmbled prayer to the image. As the tempo of the drumbeats quickened, frenzy seized the priest whose limbs quivered and whose eyes widened until the eye balls seemed to fall out. As he passed yellowed rice to | ಮೂಲಕಾದಂಬರಿಯಲ್ಲಿ ಕಲ್ಕುಡನ ಆರಾಧನೆಯ ಸಂದರ್ಭವನ್ನು, ಪಾತ್ರಿಯ ಆವೇಶಭರಿತನಾಗಿ ನಡುಗುವುದು, ಹೂವನ್ನು ಮುಖಕ್ಕೆ ಬಡಿದುಕೊಳ್ಳುವುದು, ಸಿಂಗಾರದ ಅಕ್ಕಿ ಮುಖಕ್ಕೆ ಅಂಟಿಕೊಳ್ಳುವುದು – ಈ ರೀತಿಯ ದೈವದ ಆರಾಧನೆ ಮಾಡುವ ಪದ್ಧತಿ, ಪಾತ್ರಿಗಳಲ್ಲಿ ಪ್ರಶ್ನೆಗಳನ್ನು ಸಮಸ್ಯೆಗಳಿಗೆ ಪರಿಹಾರವನ್ನು ಕೇಳುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಬಡಿದುಕೊಂಡ. ಸಿಂಗಾರದ ಅಕ್ಕಿ ಮುಖಕ್ಕೆಲ್ಲ ಅಂಟಿಕೊಂಡು ಪಾತ್ರಿಯ ರೂಪ ಮತ್ತಷ್ಟು ವಿಕಾರವಾಯಿತು. ಕೈಯಲ್ಲಿ ಕೆಂಚ ಕತ್ತಿಯನ್ನು ಕೊಡುತ್ತಲೇ ಆತ ಮಾಡಿದ ಚೀತ್ಕಾರಕ್ಕೆ ಸಹ್ಯಾದ್ರಿಯ ಬೆಟ್ಟದ ಸೆರಗೆಲ್ಲ ನಡುಗಿತು. ಎಷ್ಟು ಹೊತ್ತು ಆವೇಶ ತಾಳಿ ಪಾತ್ರಿ ನಡುಗಿದನೋ, ಬಾಯಲ್ಲಿ ಏನೇನೋ ಗೊಣಗುಟ್ಟಿದನೋ ಯಾರಿಗೂ ತಿಳಿಯದು. | his forehead, the Headman of the Little Hill handed him a sword as dictated by custom and the priest gave out a scream which reverberated in the hills. | ಈ ವಿಶಿಷ್ಟವಾದ ಆಚರಣೆ ಇಂದಿಗೂ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿದೆ. ಈ ಪ್ರದೇಶದ ಸಾಂಸ್ಕೃತಿಕವಾದ ಈ ವಿಶಿಷ್ಟ ವಿಧಾನವನ್ನು ಅನುವಾದಕರು ಆದಷ್ಟು ಪರಿಣಾಮಕಾರಿಯಾಗಿ ಅನುವಾದಿಸಲು ಪ್ರಯತ್ನಿಸಿದ್ದಾರೆ. 'ಸಿಂಗಾರದ ಅಕ್ಕಿ'ಗೆ Yellowed Rice ಎಂದು ಬಳಸಿದ್ದಾರೆ. ಭಾಷಿಕವಾದ / ಸಾಂಸ್ಕೃತಿಕವಾದ ಭಿನ್ನತೆಯಿದ್ದಾಗ್ಯೂ ಅನುವಾದದ ಮುಖೇನ ಒಂದು ಪ್ರದೇಶಕ್ಕೆ ಸೀಮಿತವಾದ ವಿಶಿಷ್ಟವಾದ ಸಾಂಸ್ಕೃತಿಕ / ದೈವಿಕ ಆಚರಣೆಗಳು ಇನ್ನೊಂದು ಪ್ರದೇಶಕ್ಕೆ ತಲುಪಿಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದಾಗಿದೆ. |
| ೦೬ | ಅಧ್ಯಾಯ ೫, ಪು. ೮೯<br>ಅವರ ಕೆಲಸ ಇದೇನೆ – ಅ ಅರಣ್ಯ ರಾಜ್ಯದಲ್ಲಿ | Chapter 5, Page 33<br>They wandered around in the woods, | ಕುಡಿಯರಿಗೆ ಕಾಡೇ ಮನೆ. ಕರಿಯ – ಕಾಳರು ತಮ್ಮ ಬಾಲ್ಯದ ದಿನಗಳಿಂದಲೇ ಬೂದ ಕಲಿಸಿಕೊಟ್ಟ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕೌಪೀನಧಾರಿಗಳಾಗಿ, ನಿಸರ್ಗದ ಶಿಶುಗಳಾಗಿ ಅಲೆದಾಡುವುದು; ಹಿರಿಯರಿಂದ ಕಲಿತ ಪಾಠಗಳನ್ನು ಅನುಕರಿಸುವುದು. ಬೂದಣ್ಣ ಉರುಳಿಡುವುದನ್ನು ಕಲಿಸಿದ್ದಾನೆ – ಹಕ್ಕಿಗೆ ಇರಿಸುವ ಉರುಳು; ಪಸುಬನಿಗೆ ಇರಿಸುವ ಉರುಳು; ಬರ್ಕಕ್ಕೆ ಒಡ್ಡುವ ಉರುಳು, ಕೋತಿಗೆ ಇರಿಸುವ ಉರುಳು – ಇಂಥವೆಲ್ಲ. | picked berries from the bushes and practised the hunting tricks they had seen the elders employ. they laid snares for birds for barking deer and for monkeys. | ಪ್ರಾಣಿಗಳಿಗೆ ಉರುಳು ಇಟ್ಟು ಬೇಟೆಯಾಡುವ ತಂತ್ರಗಾರಿಕೆಯನ್ನು ಕಾರ್ಯಗತಗೊಳಿಸುವ ವಿವರಣೆ ಮೂಲಕಾದಂಬರಿಯಲ್ಲಿ ಬರುತ್ತದೆ. ಉರುಳನ್ನು- snare ಎಂದು ಅನುವಾದಿಸಲಾಗಿದೆ 'ಪಸುಬ' ಎಂದರೆ barking deer ಎಂದು ಅನುವಾದಿಸಲಾಗಿದೆ. ಬರ್ಕ – ಇದನ್ನು ಅನುವಾದಿಸಿಲ್ಲ. |
| ೦೭ | ಅಧ್ಯಾಯ ೬, ಪು. ೧೧೬<br>"ಕರಿಯು ಸಣ್ಣವ, ಅವನಿಂದೇನಾದೀತು? ಅಂದರಲ್ಲ? ಈಗ ತುಕ್ರ ಮಾಡಿದ ಕೆಲಸ ನೋಡಿ ಸಂತೋಷಪಡಲಿ ಧನಿಗಳು! ತುಕ್ರನ ಮುಸುಡಿಗೆ ಮಂಗಳಾರತಿಯಾಗಲಿ" ಎಂದರು. | Chapter 6<br>ಅನುವಾದಿಸಿಲ್ಲ. | ಅನುವಾದದಲ್ಲಿ ಮೂಲಕಾದಂಬರಿಯಲ್ಲಿ ಬೂದ ಆಡುವ ಈ ಮಾತುಗಳನ್ನು ಕೈ ಬಿಡಲಾಗಿದೆ. 'ಮುಸುಡಿಗೆ ಮಂಗಳಾರತಿಯಾಲಿ' ಎಂಬ ನುಡಿಗಟ್ಟನ್ನು ಇನ್ನೊಂದು ಭಾಷೆಗೆ ಅದರಲ್ಲೂ ವಿದೇಶಿ ಬಾಷೆಯಾದ ಇಂಗ್ಲೀಷಗೆ ಅನುವಾದಿಸುವಲ್ಲಿ ಉದ್ದಿಷ್ಟ ಭಾಷೆಯಲ್ಲಿ ಇದೇ ಅರ್ಥವನ್ನು ನೀಡುವ ನುಡಿಗಟ್ಟುಗಳು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಲಭ್ಯವಿಲ್ಲದಿದ್ದಾಗ ಅನುವಾದ ಕಷ್ಟ ಸಾಧ್ಯವಾಗುತ್ತದೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. |
| ೦೮ | ಪು. ೧೧೮<br>ಮರುದಿನ ನಸುಕು ಹರಿದಾಗ, ಕೆಂಚ ಬೂದನ ಮನೆಯಲ್ಲಿರಲಿಲ್ಲ. ಕೇರಿಯವರ ಸಂತಾಪದೊಂದಿಗೆ, ಕರಿಯನ ಕಂಬನಿಯೊಂದಿಗೆ, ಮಲೆಯ ಮೂಲೆಯೊಂದರಲ್ಲಿ ಚಿತೆಯನ್ನೇರಿ ಹೊಗೆಯಾಗಿ ಕುಡಿಯ ಹಿರಿಯರ ರಾಜ್ಯಕ್ಕೆ ಹೊರಟುಹೋದ. | Page 45<br>At daybreak the Headman was placed on a pile of firewood in a corner of the hill to become smoke and join his forefathers. | ಕೆಂಚನ ಸಾವನ್ನು ವಿವರಿಸುವ ಈ ಸಂದರ್ಭವು ಮೂಲ ಕಾದಂಬರಿಯಲ್ಲಿ ಸಹಜವಾಗಿ ಅರ್ಥವಾಗುವಂತೆ ಅನುವಾದದಲ್ಲಿ ಸಹಜವಾಗಿ ಓದಿಸಿಕೊಂಡು ಹೋಗುವುದಿಲ್ಲ. ಅನುವಾದ ಯಾಂತ್ರಿಕವೆನಿಸುತ್ತದೆ. 'ಕೇರಿಯವರ ಸಂತಾಪ' 'ಕರಿಯನ ಕಂಬನಿ' ಮುಂತಾದ ವಿಚಾರಗಳನ್ನು ಅನುವಾದಿಸಿರುವುದಿಲ್ಲ. |
| ೦೯ | ಅಧ್ಯಾಯ ೭, ಪು. ೧೨೬<br>"ಕೇರಿಯವರ ಮನಸ್ಸು ಗಟ್ಟಿಯಾಗಿದ್ದರೆ, ಯಾರೂ, ಏನೂ ಮಾಡುವ ಹಾಗಿಲ್ಲ. ಅವರು ಧನಿಗಳಾದರೆ | Chapter 7, Page 48<br>Chania had only one reply. If they stood together nobody could force them. Bhatta | 'ಕುಡಿಯ' ಜನರಲ್ಲಿ ಬೇರು ಬಿಟ್ಟಿದ್ದ ನಂಬಿಕೆಗಳು, ಅವರಲ್ಲಿದ್ದ ಕಟ್ಟು ಪಾಡುಗಳು, ರೀತಿ ರಿವಾಜುಗಳು, ಮುಂತಾದುವುಗಳನ್ನು ಅನ್ಯರು ಪ್ರಶ್ನಿಸುವಂತಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಏಲಕ್ಕಿ ತೋಟಕ್ಕೆ; ಭೂಮಿಗೆ; ಕುಲಕಲ್ಲ. ಅವರು ಕುಲಮರ್ಯಾದೆಯ ವಿಚಾರದಲ್ಲಿ ಕೈ ಹಾಕಬಾರದು. ಕೈ ಹಾಕಿದರೆ ತೀರ ತಪ್ಪಾಗುತ್ತದೆ ಅದರ ಮೇಲೆಯೂ ಅವರಾಗಿ ಒಡಕು ತಂದು ಹಾಕಿದರೆ ಆಗ ದೈವ ನೋಡಿ ಕೊಂಡೀತು. ನನಗೇನು, ನಿನಗೇನು" ಎಂದು ಚನಿಯ ಹೇಳಿದುದರಿಂದ ಬೂದ ವಿಶ್ವಾಸ ತಾಳಿ ಮನೆಗೆ ಬಂದ. | might be master over the garden, but not over the clan. He had no right to interfere in clan customs. | ಬೂದನಿಗೆ ಚನಿಯ ಹೇಳುವ ತಿರುಮಲ ಭಟ್ಟರು ತೋಟವನ್ನು, ಭೂಮಿಯನ್ನು ಕೊಂಡುಕೊಂಡು ಅವಕ್ಕೆ ಮಾಲಕರಾಗಿರಬಹುದು. ಆದರೆ ಕುಡಿಯರ ಕುಲಕ್ಕೆ ಅವರು ಒಡೆಯರಲ್ಲ ಎಂಬ ಮಾತುಗಳಲ್ಲಿ ಕುಡಿಯರಲ್ಲಿದ್ದ ಸ್ವಾಭಿಮಾನವನ್ನು ಎತ್ತಿ ತೋರಿಸುತ್ತದೆ ಹಾಗೂ ದೈವಗಳ ಬಗ್ಗೆ ಅವರಲ್ಲಿದ್ದ ಅತೀವ ನಂಬಿಕೆಯನ್ನು ಈ ಸಾಲುಗಳು ವ್ಯಕ್ತಪಡಿಸುತ್ತವೆ. ಮೂಲದಲ್ಲಿದ್ದ – ಸಂಭಾಷಣಾರೂಪದ ಈ ವಿಚಾರಗಳನ್ನು ಅನುವಾದದಲ್ಲಿ ಸಂಕ್ಷಿಪ್ತಗೊಳಿಸಿ, ಸಾರಾಂಶ ರೂಪದಲ್ಲಿ ನೀಡಲಾಗಿದೆ. ಮೂಲಕಾದಂಬರಿಯಲ್ಲಿ ಬಂದಷ್ಟು ಪರಿಣಾಮಕಾರಿಯಾಗಿ ಅನುವಾದದಲ್ಲಿ ಈ ವಿಚಾರಗಳು ಮೂಡಿಬಂದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೦ | ಅಧ್ಯಾಯ ೮, ಪು. ೧೨೬<br>"ಹೋ, ಆ ಮನೆಯೋ, ಅದು ಹೆಂಗಸರ ಮುಟ್ಟಿನ ಮನೆ" ಎಂದಳು. | Chapter 8, Page 55<br>"Oh, that house ; that is where our women sit out during their unclean days" | ಕುಡಿಯ ಜನರಲ್ಲಿ ಹೆಂಗಸರು ಮುಟ್ಟಾದಾಗ ಅವರಿಗಾಗಿಯೇ ಪ್ರತ್ಯೇಕವಾದ ಮನೆಯಲ್ಲಿ ಇರುವ ಪದ್ಧತಿ ಇತ್ತು. ಹಾಗೂ ಈ ಸಂದರ್ಭದಲ್ಲಿ ಅವರನ್ನು ಯಾರೂ ಮುಟ್ಟಿಸಿಕೊಳ್ಳಬಾರದು ಎಂಬ ನಂಬಿಕೆಯೂ ಇತ್ತು. ಆ ದಿನಗಳು ಅವರಿಗೆ ಮೈಲಿಗೆಯ ದಿನಗಳಾಗಿದ್ದವು. ಮುಟ್ಟಿನ ದಿನಗಳನ್ನು ಅನುವಾದದಲ್ಲಿ <u>Unclean days</u> ಎಂದು ಅನುವಾದಿಸಲಾಗಿದೆ. ಇದು 'ಮುಟ್ಟಿನ ದಿನಗಳು' ಎಂಬ ಸ್ಪಷ್ಟ ಅರ್ಥವನ್ನು ಕೊಡುವುದಿಲ್ಲ. |
| ೧೧ | ಅಧ್ಯಾಯ ೯, ಪು. ೧೬೦<br>"ಅವಳು ಮಾಂಟಬೆಕ್ಕು; ಅದೊಂದು ಹೆಣ್ಣಿನ ಜಾತಿಯಲ್ಲ" ಎಂದು ಆತ ಉತ್ತರವಿತ್ತುದಕ್ಕೆ ಬರಿದೆ ನಕ್ಕರು. | Chapter 9, Page 69<br>"She is a wild cat, not a woman" Tukra replied and Bhatta laughed. | 'ಮಾಂಟ ಬೆಕ್ಕು' ಎಂಬುದು ಪ್ರಾದೇಶಿಕ ಶಬ್ಧವಾಗಿದ್ದು ಇದನ್ನು ಅನುವಾದದಲ್ಲಿ wild cat, ಎಂದು ಅನುವಾದಿಸಲಾಗಿದೆ. ಮೂಲಕಾದಂಬರಿಯಲ್ಲಿ ಬರುವ 'ಹೆಣ್ಣಿನ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಜಾತಿಯಲ್ಲ' ಎಂಬಲ್ಲಿ ಹೆಣ್ಣಿನಲ್ಲಿ ಸಹಜವಾಗಿ ಇರಬೇಕಾದ ಗುಣಗಳಿಲ್ಲ· ಎಂಬುದನ್ನು ಸೂಚಿಸುತ್ತದೆ. ಮೂಲದ ವಾಕ್ಯವನ್ನು ನೇರವಾಗಿ ಅನುವಾದಿಸಿರುವುದನ್ನು ಗಮನಿಸಬಹುದಾಗಿದೆ. |
| ೧೨ | ಅಧ್ಯಾಯ ೯, ಪು. ೧೭೨<br>"ಬರುವ ವರ್ಷ ಒಡೆಯ, ನಾಲ್ಕು ದಿಕ್ಕಿಗೂ 'ಮುಟ್ಟಸು" ಮಾಡಿ ಕಟ್ಟಿದರಾರಿತು. ಆಗ ಕದ್ದರೆ ಕದ್ದವರು ರಕ್ತಕಾರಿ ಸಾಯುತ್ತಾರೆ; ಅಂಥವರಿಗೆ ಹಾಗೆಯೇ ಆಗಬೇಕು". | Chapter 9<br>"Master, we shall have the priest put a curse on some dolls next year and tie them at the four corners of the garden. Whoever steals will vomit blood and die. It serves them right". | "ಮುಟ್ಟಸು" ಎಂಬುದು ಮಾಟ ಮಂತ್ರ ಮಾಡಿಸಿದ ಬೊಂಬೆಗಳನ್ನು ಕಟ್ಟಿದ ಕಳ್ಳರು ಅಂತ ಸ್ಥಳದಲ್ಲಿ ಕದಿಯಲು ಹೆದರುತ್ತಾರೆ. ಕದ್ದರೆ ರಕ್ತಕಾರಿ ಸಾಯುತ್ತಾರೆ ಎಂಬ ನಂಬಿಕೆ ಇತ್ತು. 'ಮುಟ್ಟಸು' ಎಂಬುದನ್ನು ಅನುವಾದದಲ್ಲಿ We shall have the priest put a curse on some dolls ಎಂದು ವಿವರಣಾ ರೂಪದಲ್ಲಿ ಅನುವಾದಿಸಲಾಗಿದೆ. ಉದ್ದಿಷ್ಟ ಭಾಷೆಯಲ್ಲಿ ಮೂಲಭಾಷೆಯಲ್ಲಿದ ಪದಗಳು ಲಭ್ಯವಿಲ್ಲದಿದ್ದಾಗ ಅನುವಾದದಲ್ಲಿ ವಿವರಣಾ ರೂಪದಲ್ಲಿ ವಿವರಿಸಬೇಕಾದ ಅನಿವಾರ್ಯತೆಯನ್ನು, ಇದರಿಂದ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಅರಿಯಬಹುದಾಗಿದೆ. |
| ೧೩ | ಅಧ್ಯಾಯ ೧೦, ಪು. ೧೮೩<br>"ಜಾತ್ರೆಗೆ ದಶರಥರಾಯನಂತೆ ಈ ಮೂವರನ್ನು ಕರೆದುಕೊಂಡು ಬಂದಿದ್ದ". | Chapter 10<br>ಅನುವಾದಿಸಿರುವುದಿಲ್ಲ | ಭಾರತೀಯ ಪುರಾಣ ಕಾವ್ಯವಾದ 'ರಾಮಾಯಣ'ದಲ್ಲಿ ಬರುವ ದಶರಥ ಮಹಾರಾಜ, ಆತನಿಗೆ ಮೂವರು ಹೆಂಡಿತಿಯರಿದ್ದುದನ್ನು ಕಾರಂತರು ತಮ್ಮ ಪ್ರಸ್ತುತ ಕಾದಂಬರಿಯಲ್ಲಿ ಬಿರುಮ ಪಂಚಾರಿ ಜಾತ್ರೆಗೆ ತನ್ನ ಮೂವರು ಹೆಂಡಿರನ್ನು ಕರೆದುಕೊಂಡು ಬಂದರುವುದಕ್ಕೆ ಹೋಲಿಕೆ ನೀಡಿದ್ದಾರೆ. ಅನುವಾದದಲ್ಲಿ ಈ ವಿಚಾರ ಪ್ರಸ್ತಾಪಿತವಾಗಿಲ್ಲ. ಅನುವಾದದಲ್ಲಿ ಇಡಿಯ ಅಧ್ಯಾಯವನ್ನು ಸಂಕ್ಷಿಪ್ತಗೊಳಿಸಿ ಸಾರಾಂಶ ರೂಪದಲ್ಲಿ ನೀಡಲಾಗಿದೆ. |
| ೧೪ | ಅಧ್ಯಾಯ ೧೦, ಪು. ೧೮೭ – ೧೮೮<br>ಕಾರಣ, ಕೇರಿಯ ಗುರಿಕಾರನಾದ ಅವನು | Chapter 10<br>ಅನುವಾದಿಸಿರುವುದಿಲ್ಲ | 'ಜಕಣಿ' ಮೈ ಮೇಲೆ ಬರುವುದು ಎಂದರೆ ಯಾವುದೋ ಭೂತವೋ, ದೆವ್ವವೋ ಜನರ ಮೈ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕೇರಿಯಲ್ಲಿ ಜನಕ್ಕೆ 'ಜಕಣಿ' ಮೈ ಮೇಲೆ ಬರುವಾಗ ಹಿರಿಯನಾಗಿದ್ದು, ಸಮಾಧಾನ ಹೇಳಬೇಕಾಗುತ್ತದೆ. | | ಮೇಲೆ ಬಂದು ಆ ಮನುಷ್ಯ ಅಸಹಜವಾಗಿ ವರ್ತಿಸಲು ಆರಂಭಿಸಿದಾಗ ಆ ದೆವ್ವಕ್ಕೆ ಏನು ಬೇಕು ಎಂದು ಕೇಳಿ ಇಷ್ಟವನ್ನು ಪೂರೈಸುವ ಮೂಲಕ ಅದನ್ನು ಸಂತೃಪ್ತಿಗೊಳಿಸಿ ಆ ವ್ಯಕ್ತಿಯನ್ನು ಗುಣಪಡಿಸುವುದು ಗ್ರಾಮೀಣ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಸನ್ನಿವೇಶವಾಗಿದೆ. |
| ೧೫ | ಅಧ್ಯಾಯ ೧೧, ಪು. ೧೯೪<br>ಆದರೆ ಅವನಿಗೆ ಕಾಣಿಸುತ್ತಿದ್ದ ಅಂಶವೆಂದರೆ – ತಾನು ತುಂಬ ಕ್ರೈಸ್ತ ಭಕ್ತನಾದುದರಿಂದ, ಈ ಮಲೆಯ ಜನ 'ಹುಂಬರದಲ್ಲಿ ಹುಂಬರು', ಕಲ್ಕುಡ, ಪಂಜುರ್ಲಿ, ಕಲ್ಲುಕುಟಿಗರನ್ನು ನಂಬುವ ಬದಲು ತಮ್ಮ ದೇವರನ್ನು ನಂಬಬಾರದೇಕೆ ಎಂಬ ಬಯಕೆ ಅವನದು. ನಮ್ಮೂರಿನ ಪ್ರಾದಿಗಳಿಗೆ ಇಲ್ಲಿ | Chapter 11, Page - 85<br>But one thing he did keenly feel. Why should not these stupid people give up Kalkuda and Panjurli and Kalkutiga and follow the cross? He had asked a padre to visit the fair and speak about the glories of Christianity. | ಮೂಲಕಾದಂಬರಿಯಲ್ಲಿ ಕುಡಿಯರನ್ನು 'ಹುಂಬರಲ್ಲಿ ಹುಂಬರು' ಎಂಬುದನ್ನು ಅನುವಾದದಲ್ಲಿ 'these stupid people' ಎಂದು ಅನುವಾದಿಸಲಾಗಿದೆ. ಕುಡಿಯರ ಆರಾಧ್ಯ ದೈವಗಳಾದ ಕಲ್ಕುಡ, ಪಂಜುರ್ಲಿ, ಕಲ್ಲುಕುಟಿಗರನ್ನು – ಅನುವಾದದಲ್ಲಿಯೆ Kalkuda, |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಯೇಸುವಿನ ಹಿರಿಮೆಯನ್ನು ಪ್ರಚಾರ ಮಾಡುವಂತೆ ಸೂಚನೆಯನ್ನೂ ಕೊಟ್ಟಿದ್ದ. | | Panjurali, Kalkutiga, ಎಂದೇ ಅನುವಾದಿಸಲಾಗಿದೆ. ಅನ್ಯಾಭಾಷಿಕರಿಗೆ, ಅನ್ಯ ಸಾಂಸ್ಕೃತಿಕ ಪರಿಸರದಲ್ಲಿನ ಓದುಗರಿಗೆ ಈ ದೈವಗಳ ಕುರಿತಾದ ವಿವರಗಳು ಸಿಗದಿದ್ದಲ್ಲಿ ಕಾದಂಬರಿಯ ಓದು ಅಪೂರ್ಣವಾಗುವ ಸಾಧ್ಯತೆ ಇದೆ. ಕ್ರಿಶ್ಚಿಯನ್ ಧರ್ಮದ ಪ್ರಚಾರ ಮಾಡಿ ಮತಾಂತರದ ಆಲೋಚನೆಯ ಸೂಕ್ಷ್ಮತೆಯನ್ನು ಕೂಡ ಕಾರಂತರು ಕಾದಂಬರಿಯಲ್ಲಿ ಪ್ರಸ್ತಾಪಿಸಿರುವುದನ್ನು ತಿಳಿಯಬಹುದಾಗಿದೆ. |
| ೧೬ | ಅಧ್ಯಾಯ ೧೨, ಪು. ೨೧೫<br>'ಇಪ್ಪತ್ತು ಹೆಚ್ಚೇ, ನಾಲ್ವತ್ತು ಹೆಚ್ಚೇ' ಅಂದರೆ ಉತ್ತರ ಕೊಡಲಾರದ ಜನ ಅವರು. ಹೀಗಿರುತ್ತ ಪ್ರಾಯ, ವಯಸ್ಸು ಇವೆಲ್ಲ ಒಂದು ಅಂದಾಜಿನ ಮಾತು, ಮೀಸೆ ಬರುವ ಮೊದಲು ಹುಡುಗ; ಬಂದ ಮೇಲೆ | Chapter 12, Page 96<br>Many of them if asked, could not say whether twenty or forty was greater. Youth and age were a question of rough estimate. A boy if the chin was smooth, a | ಕುಡಿಯರ ಬದುಕಿನಲ್ಲಿ ವಯಸ್ಸನ್ನು ಒಂದು ಅಂದಾಜಿನ ಮೇಲೆ ನಿರ್ಧರಿಸುವ ಪರಿಪಾಠವಿದ್ದಿತ್ತು. ಮೂಲ ಕಾದಂಬರಿಯಲ್ಲಿ ಇರುವ ಭಾಷೆಯ ಸಹಜವಾದ ನಿರೂಪಣೆ ಅನುವಾದದಲ್ಲಿ ಯಾಂತ್ರಿಕವಾಗಿ ಮೂಡಿಬಂದಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಜವ್ವನಿಗ; ಬಂದು ಬಿಳಿದಾದರೆ ಮುದುಕ. ಆ ಮಟ್ಟಿಗೆ ಹೇಳುವಲ್ಲಿ ಸುದೈವದಿಂದ ತಿಮ್ಮ ನಡುವಣ ಹಂತಿಯಲ್ಲಿರುವ ಹರೆಯ ; ಹೈದನೂ ಅಲ್ಲ ಮುದುಕನೂ ಅಲ್ಲ. | young man, if the upper lip was darkened; an old man if the hair had turned grey. According to this calculation Thimma was neither a lad nor an old man. He was in that long stretch of in-betweenness. | 'ಮೀಸೆ ಬರುವ ಮೊದಲು ಹುಡುಗ' ಎಂಬುದನ್ನು ಅನುವಾದದಲ್ಲಿ 'A Boy if the chin was smooth' ಎಂದು ಅನುವಾದಿಸಲಾಗಿದೆ. ಇಲ್ಲಿ 'ಮೀಸೆ' ಶಬ್ಧವನ್ನು ಬಳಸದೇ ಪರ್ಯಾಯವಾಗಿ 'chin' ಎಂದರೆ 'ಕೆನ್ನೆ' ಶಬ್ಧವನ್ನು ಬಳಸಲಾಗಿದೆ. ಇದೇ ರೀತಿ 'ಮೀಸೆ ಬಂದ ಮೇಲೆ ಜವ್ವನಿಗ' ಎಂಬ ವಿಚಾರವನ್ನು 'if the upper lip was darkened' ಎಂದು ಅನುವಾದಿಸಲಾಗಿದೆ. ಕನ್ನಡ ಬಾರದ ಕೇವಲ ಇಂಗ್ಲೀಷನ ಓದುಗರಿಗೆ ಇದರ ಅರ್ಥ ಸ್ಪಷ್ಟ ವಾಗುವುದಿಲ್ಲ. 'ಮೇಲಿನ ತುಟಿ ಕಪ್ಪಾದರೆ' ಎಂಬ ಅರ್ಥ ಬರುತ್ತದೆ. ಇದೇ ರೀತಿಯಲ್ಲಿ 'an old man if the hair had turned grey' ಎನ್ನುವಲ್ಲಿಯೂ ಮೂಲದಲ್ಲಿ 'ಮೀಸೆ ಬಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಬಿಳಿದಾದರೆ ಅವನು ಮುದುಕ' ಎಂಬುದು ಕನ್ನಡದ ಓದುಗರಿಗೆ ಸ್ಪಷ್ಟವಾಗಿ ಅರ್ಥವಾಗುತ್ತದೆ. ಅದರೆ ಅನುವಾದದಲ್ಲಿ ಇದು ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಮೂಲ ಕಾದಂಬರಿಯಲ್ಲಿ ಸರಳವಾಗಿ ಅರ್ಥವಾಗುವ ವಿಚಾರಗಳು ಅನುವಾದದಲ್ಲಿ ಅಸ್ಪಷ್ಟವೆನಿಸುತ್ತವೆ. ಭಾಷಾಂತರದ ಮಿತಿಯನ್ನು ಇಲ್ಲಿ ಕಂಡು ಕೊಳ್ಳಬಹುದು. |
| ೧೭ | ಅಧ್ಯಾಯ ೧೩, ಪು. ೨೩೪<br>ಇತ್ತ ಕೆಂಪಿ ಬೂದಣ್ಣನೊಡನೆ "ಕರಿಯಣ್ಣ, ನಾವಿದ್ದೂ ಇಲ್ಲದ ಹಾಗೆ ಮಾಡುತ್ತಾನೆ. ತಾನು ದೊಡ್ಡ ಗುರಿಕಾರ ಎಂದು ಅವನ ತಲೆಗೆ ಹೋಗಿರಬೇಕು. ನೀವಿಲ್ಲದಿದ್ದರೆ ಅವನ | Chapter 13, Page 109<br>At home Kempi told Booda. "Karia does not seem to remember we are still alive. His headmanship has made hime vain. Without you, street dogs would not have | ಮೂಲ ಕಾದಂಬರಿಯಲ್ಲಿನ ಸಹಜವಾದ ಓದು ಅನುವಾದದಲ್ಲಿ ಸಾಧ್ಯವಾಗುವುದಿಲ್ಲ. 'ನರಿ, ನಾಯಿ ತಿಂದು ಹೋಗುತ್ತಿತ್ತು' ಎಂದರೆ ಹೇಳ ಹೆಸರಿಲ್ಲದೆ ಹೋಗುತ್ತಿತ್ತು ಎಂಬ ಅರ್ಥವನ್ನು ಕೊಡುವ ಕನ್ನಡ ಭಾಷೆಯಲ್ಲಿ ಬಳಸುವ ನುಡಿಗಟ್ಟು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಗುರಿಕಾರಿಕೆ ನರಿ, ನಾಯಿ ತಿಂದು ಹೋಗುತ್ತಿತ್ತು. ಅಲ್ಲವಾದರೆ ಕೇರಿಯವರು ಹೊರಗಿರಿಸಿದ ಅವರ ಮನೆಗೆ ದಿನಕ್ಕೆ ಹತ್ತು ಸಾರಿ ಹೋಗಿ ಬರುವುದೆಂದರೇನು?" ಎಂದಳು. | suiffed at him. Look at his cheek in visiting Thimma and Giddi" | ಇದಾಗಿದೆ. ಅನುವಾದದಲ್ಲಿ - street dogs would not have sniffed at him' ಎಂದು ಅನುವಾದಿಸಲಾಗಿದೆ. ಇಲ್ಲಿ ಮೂಲಕಾದಂಬರಿಯಲ್ಲಿ ನೀಡುವ ಸ್ಪಷ್ಟ ಅರ್ಥವನ್ನು ಅನುವಾದದಲ್ಲಿ ಗ್ರಹಿಸುವುದು ಸಾಧ್ಯವಾಗುವುದಿಲ್ಲ. |
| ೧೮ | ಅಧ್ಯಾಯ ೧೫, ಪು. ೨೬೫<br>ಸೊಂಟಕ್ಕೆ ಸಿಕ್ಕಿಸಿದ ಕತ್ತಿಯನ್ನು ಕಿತ್ತು ಗೆಣಸನ್ನು ಅರಿಸಿ ತಂದ. ನಡುವಿಗೆ ಕಟ್ಟಿದ ದಟ್ಟಿಯ ಚೀಲದಿಂದ ಬೆಂಡು ಚಕಮಕಿ ಕಲ್ಲುಗಳನ್ನು ತೆಗೆದು, ಕಿಡಿ ಹಾರಿಸಿ, ಬೆಂಕಿ ಹೊತ್ತಿಸಿದ ಗೆಣಸು ಸುಟ್ಟು, ತಿಂದು ಒಂದಿಷ್ಟನ್ನು ಕಟ್ಟಿಕೊಂಡು, ಈ ಸ್ಥಳದ ಸಂಪೂರ್ಣ ಶೋಧನೆ ಮಾಡುತ್ತೇನೆ ಎಂದು ಒಬ್ಬನೇ ಎದುರಿನ ಕಾಡನ್ನು ಹೊಕ್ಕ. | Chapter 15, Page 129<br>.....dug up a few tubers of sweet potato made a fire with the flints he carried in his belt, burnt the potato, ate some of it, tied the rest in a parcel for the way and selout again. He had to go through another thick jungle. | ಸೊಂಟಕ್ಕೆ ಕತ್ತಿಯನ್ನು ಸಿಕ್ಕಿಸಿಕೊಂಡು ಕಾಡಿಗೆ, ಹೊಲಕ್ಕೆ ಹೋಗುವ ದೃಶ್ಯವನ್ನು ಸಾಮಾನ್ಯವಾಗಿ ಕರಾವಳಿ ಪ್ರದೇಶದ ಜನರಲ್ಲಿ ಕಾಣಬಹುದಾಗಿದೆ. ಇದನ್ನು ಅನುವಾದಿಸಿರುವುದಿಲ್ಲ. ಕುಡಿಯರು ಸೊಂಟಕ್ಕೆ ಒಂದು ಸಣ್ಣ ಚೀಲವನ್ನು 'ದಟ್ಟಿ'ಯನ್ನು ಕಟ್ಟಿಕೊಂಡೇ ತಿರುಗಾಡುತ್ತಿದ್ದರು. ಅವರ ಬದುಕು ಕಾಡಿನ ಮಧ್ಯದಲ್ಲಿಯೇ ಸಾಗುತ್ತಿತ್ತು. ಇಂತಹ ಚೀಲದಲ್ಲಿ 'ಬೆಂಡು, ಚಕಮಕಿ ಕಲ್ಲುಗಳನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಇಟ್ಟುಕೊಂಡಿರುತ್ತಿದ್ದರು. ಕಾಡಿನಲ್ಲಿ ಗಡ್ಡೆಗೆಣಸುಗಳನ್ನು ಬೇಯಿಸುವುದಕ್ಕೆ ಅಥವಾ ಇನ್ನಿತರ ಉದ್ದೇಶಕ್ಕೆ ಬೆಂಕಿಯು ಅವಶ್ಯಕತೆಯಾದಾಗ ಚಕಮಕಿ ಕಲ್ಲುಗಳಿಂದಲೇ ಬೆಂಕಿಯನ್ನು ಉತ್ಪಾದಿಸುತ್ತದೆ. ಇಲ್ಲಿ ನಮಗೆ ಇತಿಹಾಸಲ್ಲಿ ಓದುವ ಅದಿ ಮಾನವರ ಕಲ್ಪನೆ ಬರುತ್ತದೆ. ಅನುವಾದದಲ್ಲಿ 'ದಟ್ಟಿ' ಎಂಬ ಶಬ್ಧವನ್ನು ಅನುವಾದಿಸಿಲ್ಲ. ಚಕಮಕಿ ಕಲ್ಲುಗಳನ್ನು 'flints' ಎಂದು ಅನುವಾದಿಸಲಾಗಿದೆ. ಇದು ಚಕಮಕಿ ಕಲ್ಲಿಗೆ ಸಂವಾದಿ ಶಬ್ಧವಾಗಿ ಬಳಸಲ್ಪಟ್ಟಿದೆ. ಆದರೆ ಕುಡಿಯರು ಸೊಂಟದಲ್ಲಿ ಕಟ್ಟಿಕೊಳ್ಳುವ 'ದಟ್ಟಿ' ಇದು ಅವರ ಸಾಂಸ್ಕೃತಿಕತೆಯನ್ನು ಸಾರುವ ವಿಚಾರವಾಗಿದ್ದು ಅದನ್ನು ಕೈ ಬಿಡಲಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೯ | ಅಧ್ಯಾಯ ೧೬, ಪು. ೨೮೩<br>ವಿಶಾಲ ಕಾಡಿನ ಆವರಣದಲ್ಲಿ ಗೇಣುದ್ದ ಜಾಗದಲ್ಲಿ ಕುಮರಿ ಬೆಳೆದರೆ ಒಬ್ಬಿಬ್ಬರು ವೈರಿಗಳಲ್ಲ – ಕಾಡಿನ ಕಪಿಗಳಿಗೆಲ್ಲ ಅವುಗಳ ಮೇಲೆಯೇ ಕಣ್ಣು. ಮಂಗ ಬೇರೆ, ಮುಸುವ ಬೇರೆ, ಸಿಂಗಲೀಕ ಬೇರೆ. | Chapter 16, Page 142<br>A farm is a farm even if it is only a span's width. All the monkeys, of the forest seemed bent on neining their nice stalks. | ಮೂಲ ಕಾದಂಬರಿಯಲ್ಲಿ ಬರುವ 'ಗೇಣುದ್ದ ಜಾಗ' ಎಂಬುದನ್ನು 'a span's width' ಎಂದು ಅನುವಾದಿಸಲಾಗಿದೆ. ಮೂಲಕಾದಂಬರಿಯಲ್ಲಿ ಬರುವ ಕಪಿಗಳ ವಿವಿಧ ಪ್ರಕಾರಗಳಾದ ಮಂಗ, ಮುಸುವ, ಸಿಂಗಲೀಕ ಇವುಗಳನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. |
| ೨೦ | ಅಧ್ಯಾಯ ೧೭, ಪು. ೨೯೬<br>ಆದರೆ ಎಂದಿನಂತೆ, ಮಹಾಲಯ ಅಮಾವಾಸ್ಯೆ ಕಳೆದು ಮಲೆಗೆ ಬರುವ ತಿರುಮಲ ಭಟ್ಟರಲ್ಲಿ ಅವರನ್ನು ಕುರಿತಾದ ಆಂತರಿಕ ದ್ವೇಷ ಭಾವ ಇಷ್ಟಿಷ್ಟು ಕಡಿಮೆಯಾಗಿರಲಿಲ್ಲ. | Chapter 17<br>ಅನುವಾದಿಸಿರುವುದಿಲ್ಲ. | 'ಮಹಾಲಯ ಅಮಾವಾಸ್ಯೆ ವೈದಿಕರ ಪಂಚಾಂಗದಲ್ಲಿ ಮಹತ್ವವನ್ನು ಪಡೆದುಕೊಂಡ ದಿನವಾಗಿದೆ. ಅನುವಾದಿಸದೇ ಇರುವುದರಿಂದ ಇನ್ನೊಂದು ಸಾಂಸ್ಕೃತಿಕ ಪರಿಸರದಲ್ಲಿ ಇದು ಪ್ರಚಲಿತವಾದ ವಿಚಾರವಾಗಿದಯೋ ಎಂಬುದನ್ನು ತಿಳಿಯುವುದು ಸಾಧ್ಯವಾಗುವುದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೨೧ | ಪು. ೩೦೨<br>ಇಂದ್ರ ತನ್ನ ವಜ್ರಾಯುಧ ಹಿಡಿದು ಬೆಟ್ಟಕ್ಕೆ ಬಡಿದುಂಟಾದ ದೇಶ ಗಾಯಗಳಂತೆ ಕಾಣುತ್ತಿದ್ದವು. | page 154<br>It was as if a giant had pounded the mountains with his club. | ಭಾರತೀಯ ಪುರಾಣದಲ್ಲಿ ಬರುವ ಇಂದ್ರ ಹಾಗೂ ಆತನ ವಜ್ರಾಯುಧದ ಕಲ್ಪನೆ ಕನ್ನಡದ ಓದುಗರಿಗೆ ಸ್ಪಷ್ಟವಾಗಿ ತಿಳಿದಿದೆ. ಹಾಗೂ ಕನ್ನಡೇತರ ಭಾರತೀಯ ಭಾಷೆಗಳ ಓದುಗರಿಗೂ ಇದರ ಕಲ್ಪನೆ ಇದೆ. ತೀರ ಭಿನ್ನವಾದ ಸಾಂಸ್ಕೃತಿಕ ಪರಿಸರದಲ್ಲಿ ಭಾರತೀಯ ಪುರಾಣ ಪ್ರಜ್ಞೆಯನ್ನು ತಲುಪಿಸುವ ಇಂತಹ ವಿಚಾರಗಳನ್ನು ಅನುವಾದಿಸುವುದರಿಂದ ಮೂಲ ಕಾದಂಬರಿಗಳ ಆಶಯ ಅಪೂರ್ಣವಾದಂತಾಗುವುದು. |
| ೨೨ | ಅಧ್ಯಾಯ ೧೮, ಪು. ೩೧೭<br>"…..ಪ್ರಾಯಶ: ನೀವು ಕುಡಿಯರ ಮಕ್ಕಳೆಲ್ಲ ಹಾಗೆಯೇ ಎಂದು ಕಾಣುತ್ತದೆ. ಕವಣೆ ಬೀಸಿ ಕಾಗೆ ಹೊಡೆಯುವಷ್ಟೇ ಬುದ್ಧಿವಂತರು" ಎಂದು ಪರಿಹಾಸ್ಯ ಮಾಡಿದರು. | Chapter 18,<br>ಅನುವಾದಿಸಿರುವುದಿಲ್ಲ. | 'ಕವಣೆ' ಕುಡಿಯರು ಆಯುಧ ರೂಪದಲ್ಲಿ ಬಳಸುತ್ತಿದ್ದ ವಸ್ತು. ಕವಣೆಯಲ್ಲಿ ಕಲ್ಲನಿಟ್ಟು ಗುರಿಯಿಟ್ಟು ಹೊಡೆದು ಪಕ್ಷಿಗಳನ್ನು ಸಾಯಿಸುವ ಪದ್ಧತಿ ಈ ಕುಡಿಯರಲ್ಲಷ್ಟೇ ಅಲ್ಲ, ಗ್ರಾಮೀಣ ಪ್ರದೇಶದಲ್ಲಿ ಇತರ ಜನಾಂಗಗಳಲ್ಲೂ ಇದು ಕಂಡು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಬರುತ್ತದೆ. |
| ೨೩ | ಪು. ೩೨೩<br>.....ಭಾದ್ರಪದ ಮಾಸದಲ್ಲಿ ಕೆಲಸ ತಪ್ಪಿಸಿ, ಕರಿಯನ ಮಲೆಗೆ ಹೋದ. ಒಕ್ಕಲಿಲ್ಲದ ಅವರ ತಾವನ್ನು ಕಂಡು ತುಂಬ ಖಿನ್ನನಾಗಿ ಮರಳಿದೆ | Page 170<br>When he went to Thimma's cave just before Navaratri, he was aghast to see the plece deserted. | "ಭಾದ್ರಪದ ಮಾಸದಲ್ಲಿ" ಎಂಬುದನ್ನು ಎಂದು 'Just before Navaratri' ಎಂದು ಅನುವಾದಿಸಲಾಗಿದೆ. ನವರಾತ್ರಿ ಎಂಬುದು ಕೂಡ ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿರುವ 'ದಸರಾ ಹಬ್ಬದ' ಸಂದರ್ಭವಾಗಿದೆ. ಅನ್ಯಾಭಾಷಿಕರಿಗೆ ಕೇವಲ ಅನುವಾದದ ಓದಿನಿಂದ ಮೂಲಕಾದಂಬರಿಯಲ್ಲಿನ ವಿಚಾರಗಳು ಸ್ಪಷ್ಟವಾಗುವುದಿಲ್ಲ 'ಭಾದ್ರಪದ ಮಾಸ' 'ನವರಾತ್ರಿ' ಇವುಗಳಿಗೆ ಇಂಗ್ಲಿಷ ಭಾಷೆಯಲ್ಲಿ ಸಂವಾದಿ ಪದಗಳು ಲಭ್ಯವಿಲ್ಲದಿರುವುದನ್ನು ಗಮನಿಸಬಹುದಾಗಿದೆ. ಭಾಷಾಂತರದಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಎದುರಿಸಬೇಕಾದ ಸಾಂಸ್ಕೃತಿಕ ತೊಡಕನ್ನು ಇದರಿಂದ ಕಂಡುಕೊಳ್ಳಬಹುದಾಗಿದೆ. |
| ೨೪ | ಅಧ್ಯಾಯ ೧೯, ಪು. ೩೪೮<br>ಅದನ್ನು ಕಂಡ ಕರಿಯನಿಗೆ 'ಇಷ್ಟಿದ್ದರೆ ಊರೇ ತೆಗೆದೇನು' ಎಂಬ ಹುಮ್ಮಸವಾಯಿತು. | Chapter 19, Page 189<br>That put spirit into Karia | ಮೂಲಕಾದಂಬರಿಯಲ್ಲಿನ ನುಡಿಗಟ್ಟಾದ 'ಇಷ್ಟಿದ್ದರೆ ಊರೇ ತೆಗೆದೇನು' ಎಂಬ ಕರಿಯ ತಾಳುವ ಆತ್ಮವಿಶ್ವಾಸ, ಹಾಗೂ ಹುಮ್ಮಸ್ಸಿನ ವಿಚಾರವನ್ನು ಸಾರಾಂಶ ರೂಪದಲ್ಲಿ ನೀಡಲಾಗಿದೆ. ಉದ್ದಿಷ್ಟ ಭಾಷೆಯಲ್ಲಿ ಪರ್ಯಾಯ ನುಡಿಗಟ್ಟಿನ ಕೊರತೆಯನ್ನು ಕಾಣಬಹುದಾಗಿದೆ. |
| ೨೫ | ಅಧ್ಯಾಯ ೨೦, ಪು. ೩೫೬<br>ಈಗಾಗಲೆ ಎಂಟು ದಿನಗಳ ಕೆಲಸ ಕಜಗಟ್ಟಿತಲ್ಲ ಎಂದು ಪ್ರತಿಯೊಬ್ಬರಿಗೂ ಚಿಂತೆಯೇ ಜತೆಗೆ ಕಳೆದುಕೊಂಡವರ ಸಲುವಾಗಿ ದು:ಖ | Chapter 20, Page 197<br>.....but grief for the dead and worry that work on the field had fallen in arrears. | ಮೂಲಕಾದಂಬರಿಯಲ್ಲಿ ಬರುವ 'ಕಜಗೆಟ್ಟಿತಲ್ಲ' ಎಂಬುದು ಪ್ರಾದೇಶಿಕ ಶಬ್ದವಾಗಿದ್ದು ಇದನ್ನು ಸಾರಾಂಶ ರೂಪದಲ್ಲಿ ಅನುವಾದಿಸಲಾಗಿದೆ. ಪರ್ಯಾಯ ಪದ ಉದ್ಧಿಷ್ಟ ಭಾಷೆಯಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಲಭ್ಯವಾಗದಿರುವಾಗ ಅನುವಾದ ಯಾಂತ್ರಿಕವಾಗುತ್ತದೆ ಎನ್ನುವುದನ್ನು ಗಮನಿಸಬಹುದಾಗಿದೆ. |

## ೪. ಮೂಲ ಕಾದಂಬರಿ : 'ಮೂಕಜ್ಜಿಯ ಕನಸುಗಳು'

## ಅನುವಾದ : MOOKAJJI'S VISIONS

## ಅನುವಾದಕರು : T.S. SANJEEV RAO

ಕಾರಂತರು ೧೯೬೮ರಲ್ಲಿ ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸಿದ ಕೃತಿ ಇದಾಗಿದೆ. ೧೯೭೭ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿಯನ್ನು ಇದು ಪಡೆದುಕೊಂಡಿದೆ. ಪ್ರಸ್ತುತ ಕಾದಂಬರಿಯ ಇಂಗ್ಲೀಷ ಅನುವಾದದ 'PREFACE' ಕಾರಂತರೇ ಸ್ಪಷ್ಟ ಪಡಿಸಿರುವ ಪ್ರಕಾರ ಈ ಕಾದಂಬರಿಯ ಅನುವಾದವನ್ನು ಸ್ವತ: ತಾವೇ ಮಾಡಿರುವುದಾಗಿ ತಿಳಿಸಿದ್ದಾರೆ. 'I wrote the Kannada Version of this novel in the year 1968 and now presenting to you an English version of the same." (Sanjeeva Rao T.S.; 1979; Page iv) ಇಂಗ್ಲೀಷ ಭಾಷೆಗೆ ಕಾರಂತರೇ ಅನುವಾದಿಸಿದ್ದಾರೆ ಎಂಬುದಕ್ಕೆ ಕಾದಂಬರಿಯ ಮುನ್ನುಡಿಯಲ್ಲಿ ಮತ್ತೂ ಹೆಚ್ಚಿನ ಸ್ಪಷ್ಟೀಕರಣ ಸಿಗುತ್ತದೆ – "Here I must humbly plead my own short -coming, so far as the language is concerned. Knowing my limitations in that matter, I have sought the help of friends, in making my writing more readable". (ಅದೇ ಪು. iv) ಕಾರಂತರ ಈ ಮಾತುಗಳು ಕಾದಂಬರಿಯ ಅನುವಾದದಲ್ಲಿ ಅನುವಾದದ ಭಾಷೆಯಲ್ಲಿ ತನಗಿರುವ ಮಿತಿಗಳನ್ನು ಸ್ಪಷ್ಟಪಡಿಸುತ್ತವೆ. ಆದರೆ ಕಾದಂಬರಿಯ ಇಂಗ್ಲೀಷ ಅನುವಾದದ ಶೀರ್ಷಿಕೆಯಲ್ಲಿ Rendered into English T.S. sanjeeva Rao ಎಂದೇ ನಮೂದಿಸಿರುವುದರಿಂದ T.S. Sanjeeva Rao ಇವರು ಪ್ರಸ್ತುತ ಕಾದಂಬರಿಯ ಅನುವಾದದಲ್ಲಿ ಮಹತ್ವದ ಪಾತ್ರ ವಹಿಸುತ್ತಾರೆ. 'The final result is however due to the kind scruitiny and polish effected by my friend sri. T.S. Sanjeeva Rao (of

Hubli), a veteran journalist. I appreciate the help rendered by him very much and feel very grateful to him;....." (ಅದೇ ಪು. iv) ಕಾರಂತರು ತಮ್ಮ ಬದುಕಿನಲ್ಲಿ ಆದ ಅಮೂಲ್ಯವಾದ ಅನುಭವಗಳನ್ನು ಕೇವಲ ಕನ್ನಡದ ಓದುಗರಿಗೆ ಮಾತ್ರ ಸೀಮಿತಗೊಳಿಸದೇ ಕರ್ನಾಟಕದ ಗಡಿಯನ್ನು ದಾಟಿ ಇತರ ದೇಶಗಳ ಜನತೆಗೂ ತಲುಪಿಸಬೇಕು ಎಂಬ ಆಶಯ ಹೊಂದಿದವರಾಗಿದ್ದಾರೆ. ಮನುಷ್ಯನ ಮನಸ್ಸು, ನಂಬಿಕೆಗಳು, ಧರ್ಮ, ದೇವರು ಇತ್ಯಾದಿ ವಿಚಾರಗಳು ಕೇವಲ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗಿರದೆ ಇವು ಜಾಗತಿಕವಾಗಿ ಚರ್ಚಿಸಬಹುದಾದ ವಿಚಾರಗಳಾಗಿವೆ. ಪ್ರಸ್ತುತ ಕಾದಂಬರಿಯನ್ನು ಈ ಕುರಿತಾದ ವಿಚಾರಗಳನ್ನಿಟ್ಟುಕೊಂಡೇ ರಚಿಸಲಾಗಿದೆ. ಮೂಕಜ್ಜಿಯ ಪಾತ್ರವನ್ನು ಸೃಷ್ಟಿಸುವುದರ ಮೂಲಕವಾಗಿ ಈ ಆಶಯವನ್ನು ಸಾಧಿಸಲಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕಾದಂಬರಿಯ ಇಂಗ್ಲಿಷ ಅನುವಾದದ ಪ್ರಕಟಣೆಯನ್ನು ಆರಂಭದಲ್ಲಿ ಕೆಲವು ಪ್ರಕಾಶಕರು ನಿರಾಕರಿಸಿರುವುದಾಗಿಯೂ ತಿಳಿಸಿರುವ ಕಾರಂತರು, ಜ್ಞಾನಪೀಠ ಪ್ರಶಸ್ತಿ ಬಂದ ನಂತರದಲ್ಲಿ ಕಾದಂಬರಿ ಪಡೆದುಕೊಂಡ ಗೌರವ ಹಾಗೂ ಬೇಡಿಕೆಗಳಿಂದಾಗಿ ಐ.ಬಿ.ಎಚ್. ಪ್ರಕಾಶನ ಇದನ್ನು ಪ್ರಕಟಿಸಿರುವುದನ್ನು ಮುನ್ನುಡಿಯಲ್ಲಿ ಸ್ಪಷ್ಟ ಪಡಿಸಿದ್ದಾರೆ. ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕಾದಂಬರಿಯ ಅನುವಾದದಲ್ಲಿ ಕಾರಂತರೇ ಹೆಚ್ಚಿನ ಪಾತ್ರವನ್ನು ವಹಿಸಿರುವುದರಿಂದ ಮೂಲಕಾದಂಬರಿಕಾರ ಹಾಗೂ ಅನುವಾದಕ ಒಬ್ಬರೇ ಆದಾಗ ಒಂದು ಪ್ರಾದೇಶಿಕ ಕೃತಿ ಜಾಗತಿಕ ಭಾಷೆಯಾದ ಇಂಗ್ಲಿಷನಲ್ಲಿ ಅನುವಾದಗೊಳ್ಳುವಾಗ ಎದುರಿಸಿದ ಸಾಂಸ್ಕೃತಿಕ ತೊಡಕುಗಳು, ಭಾಷಾಂತರದ ಹಾಗೂ ಭಾಷೆಯ ಮಿತಿಗಳನ್ನು ಇನ್ನು ಹೆಚ್ಚು ಸ್ಪಷ್ಟತೆಯಿಂದ ಅರಿಯುವ ಅವಕಾಶ ಇದೆ ಎಂಬುದು. ಮೂಲಕಾದಂಬರಿಯಲ್ಲಿದಂತೆ ಅನುವಾದದಲ್ಲಿಯೂ ಒಟ್ಟು ೧೫ ಅಧ್ಯಾಯಗಳನ್ನು ಒಳಗೊಂಡಿದೆ. ಮೂಲ ಕಾದಂಬರಿಯೊಂದಿಗೆ ಹೋಲಿಸಿ ನೋಡಿದಾಗ ಅನುವಾದದಲ್ಲಿ ಸಂಕ್ಷಿಪ್ತಗೊಳಿಸಲಾಗಿದೆ.

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೦೧ | ಅಧ್ಯಾಯ ೧, ಪು. ೦೧ ಹಿರಣ್ಯಕಶಿಪು ಕಂಬಕ್ಕೆ ಒದೆಯನ್ನು ಕೊಟ್ಟಾಗ ನರಸಿಂಹ ಬಂದದ್ದು – ಅಲ್ಲ – ಎನ್ನಲೇ? ಧ್ರುವ ನೆಟ್ಟಗೆ ನಕ್ಷತ್ರಲೋಕಕ್ಕೆ ಹೋದದ್ದು ಅಲ್ಲ ಎನ್ನಲೇ? ದೇವರು ಅವನಿಗೆ ವರವನ್ನು ಕೊಡಲಿಲ್ಲ. ಅನ್ನಲೇ? ಧೂರ್ವಾಸರಂಥ ಮಹಾ ಋಷಿಗಳು ಶಾಪವನ್ನು ಕೊಡಲಿಲ್ಲ. ಕೊಟ್ಟರೂ ಹಾಳಾಗಲಾರದು – ಎನ್ನಲೇ? ಈ ಪುರಾಣ ಕತೆಗಳೆಲ್ಲವೂ ಸುಳ್ಳಲ್ಲವಾದರೆ, ಬತ್ತೀಸಪುತ್ಥಲಿ, ಅಲಿಬಾಬಾ, ಅಷ್ಟೇ ಅಲ್ಲ, ಅಂಗಳ ದುಗ್ಗುವಿನಂಥ ಕಥೆಗಳು ಯಾತಕ್ಕೆ ಸುಳ್ಳಾಗಿ ಕಾಣಿಸಬೇಕು ಎಂಬ ಮನಸ್ಸಿತ್ತು ನನ್ನದು. | Chapter 1, P 1 Did I not implicitly believe that Narasimha, the 'Man-lion' burst forth from a pillar when demon Hiranyakasipu shattered it with a kick in anger. That young Dhruva, son of king Uttanapada ascended straight to heaven was no fiction to me. Neither were the curses that sages like Durvasa hurled at all and sundry. If those tales could be believed, why should I not accept the story of 'Ali Baba and the Forty Thieves or the stories told by 'The Thirty two statues"? | ಪುರಾಣದಲ್ಲಿ ಬರುವ ಕಥೆಗಳನ್ನು ಕಾರಂತರು ವಿಶ್ಲೇಷಣೆಗೆ ಒಳಪಡಿಸಿ ಅದರ ಸತ್ಯಾಸತ್ಯತೆಯನ್ನು ಹೊರಗೆಡಹುವ ಪ್ರಯತ್ನ ಮಾಡಿದ್ದಾರೆ. ಕನ್ನಡದ ಓದುಗರಿಗೆ, ಪ್ರಚಲಿತವಿರುವ ಈ ಪುರಾಣದ ವಿಚಾರಗಳು, ಸಾರಾಗವಾಗಿ ಅರ್ಥವಾಗುವಂತವುಗಳು, 'ನರಸಿಂಹನ ಅವತಾರವಾಗಲಿ' 'ಧ್ರುವ – ನಕ್ಷತ್ರವಾದದ್ದಾಗಲಿ ಪುರಾಣ ಪ್ರಜ್ಞೆಯನ್ನು ಹೊಂದಿದ ಕನ್ನಡದ ಓದುಗರಿಗೆ ತಿಳಿದಿರುವ ವಿಚಾರಗಳೇ ಆಗಿವೆ. ಇದನ್ನು ಕನ್ನಡ ಬಾರದ ಅನ್ಯಭಾಷಿಕರಿಗೆ ಹಾಗೂ ಜಾಗತಿಕ ಮಟ್ಟದಲ್ಲಿ ಪರಿಚಯಿಸುವ ನಿಟ್ಟಿನಿಂದ ಅನುವಾದದಲ್ಲಿ ಈ ವಿಚಾರಗಳನ್ನು ಅಲ್ಪ ಸ್ವಲ್ಪ ವಿವರಣೆ ಸಹಿತ ಅನುವಾದಿಸಿದ್ದು ಕಂಡು ಬರುತ್ತದೆ. 'ನರಸಿಂಹ' ಎಂಬುದನ್ನು 'Mantion' |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಎಂದು ಶಬ್ಧಶ: ಅನುವಾದಿಸಲಾಗಿದೆ. ಮೂಲದಲ್ಲಿ ಕೇವಲ 'ಹಿರಣ್ಯಕಶಿಪು' ಎಂಬುದಷ್ಟೇ ಇದ್ದರೆ ಅನುವಾದದಲ್ಲಿ ಇದನ್ನು demon 'Hiranyakasipu' ಎಂದು ಅನುವಾದಿಸಲಾಗಿದೆ. 'ಧ್ರುವ' ಎಂಬುದಷ್ಟೇ ಮೂಲದಲ್ಲಿ ಬಳಸಿದ್ದರೆ. ಅನುವಾದದಲ್ಲಿ ಇದನ್ನು 'Young Dhruva, son of King Uttanapada' ಎಂಬುದಾಗಿ ವಿವರಿಸಿ ಅನುವಾದಿಸಲಾಗಿದೆ. ಇದರಿಂದ ಅನುವಾದದ ಓದಿನಿಂದ ತಕ್ಕಮಟ್ಟಿಗೆ ಮೂಲಕಾದಂಬರಿಯ ಆಶಯವನ್ನು ಗ್ರಹಿಸುವುದು ಸಾಧ್ಯವಾಗುತ್ತದೆ ಹಾಗೂ ಇಲ್ಲಿನ ಪುರಾಣ ಪ್ರಜ್ಞೆಯನ್ನು ಅನ್ಯಭಾಷಿಕ ಪರಿಸರಕ್ಕೆ ತಲುಪಿಸಿದಂತಾಗುತ್ತದೆ. ಪುರಾಣದಲ್ಲಿ ಬರುವ ಈ ಸಂಗತಿಗಳನ್ನು |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ನಂಬಹುದಾದರೆ 'ಬತ್ತೀಸ ಪುತ್ಥಲಿ', ಆಲಿಬಾಬಾ' 'ಅಂಗಳ· ದುಗ್ಗುವಿನಂಥ' ಕಥೆಗಳನ್ನು ನಂಬಬೇಕಾಗುತ್ತದೆ. ಎಂಬುದು ಕಾದಂಬರಿಕಾರರ ವಿಮರ್ಶಾತ್ಮಕವಾದ ಅಭಿಪ್ರಾಯವಾಗಿದೆ. ಕಾದಂಬರಿಯಲ್ಲಿನ ವೈಚಾರಿಕತೆಯ ವಿಚಾರಗಳನ್ನು ಇದರಿಂದ ಅರಿಯಬಹುದಾಗಿದೆ. |
| ೦೨ | ಪು. ೨,<br>"ಅವನನ್ನು ಸುಡು, ಅವನ ಹೆಸರು ಕೇಳಿದರೆ ಮಿಂದು ಬರಬೇಕು" | Page 3<br>"Let him burn in hell! Let us not pollute our ears hearing his name" | 'ಅವನನ್ನು ಸುಡು' ಎಂದರೆ ಅವನ ಹೆಸರು ಹೇಳಬೇಡ, ಅವನು ನಂಬಲು ಯೋಗ್ಯವಾದ ವ್ಯಕ್ತಿಯಲ್ಲ. ಒಳ್ಳೆಯ ಗುಣ ನಡತೆಯನ್ನು ಹೊಂದಿದ ವ್ಯಕ್ತಿ ಆತನಲ್ಲ. ಎಂಬ ಅರ್ಥವನ್ನು ನೀಡುತ್ತದೆ. ಹಾಗು ಅವನ ಹೆಸರು ಕೇಳಿದರೆ 'ಮಿಂದು ಬರಬೇಕು' ಎಂದರೆ 'ಅವನ ಹೆಸರು ಕೇಳಿದರೆ ನಮಗೆ ಮೈಲಿಗೆ ಆಗುತ್ತದೆ', ನಮ್ಮ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಮನಸ್ಸು ದೇಹ ಅಪವಿತ್ರವಾಗುತ್ತದೆ ಎಂಬ ಅರ್ಥವನ್ನು ನೀಡುತ್ತದೆ. ಅನುವಾದದಲ್ಲಿ 'ಅವನನ್ನು ಸುಡು' ಎಂಬುದನ್ನು 'Let him burn in hell' ಎಂದು ಅನುವಾದಿಸಲಾಗಿದೆ. 'ಆತನನ್ನು ನರಕದಲ್ಲಿ ಸುಡು' ಎಂದು ಇದು ಅರ್ಥವನ್ನು ನೀಡುತ್ತದೆ ಮೂಲಕಾದಂಬರಿಯ ಅರ್ಥವನ್ನೇ ಅನುವಾದದಲ್ಲಿಯೂ ನೀಡುವ ಪ್ರಯತ್ನ ಮಾಡಲಾಗಿದೆ. ಆದರೂ ಭಾಷಾಂತರದಲ್ಲಿ ಭಾಷೆಯ ಮಿತಿಯಿಂದಾಗಿ ಅನುವಾದ ಹೇಗೆ ತೊಡಕನ್ನು ಅನುಭವಿಸುವಂತಾಗುತ್ತದೆ ಎಂಬುದನ್ನು ಅರಿಯಬಹುದಾಗಿದೆ. ಮೂಲಕಾದಂಬರಿಯಲ್ಲಿ ಆಡು ಮಾತಿನ ರೂಪದಲ್ಲಿರುವ ಈ ವಿಚಾರಗಳು ಸಹಜವಾಗಿ ಅರ್ಥವಾದರೆ ಅನುವಾದದಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | ಪ್ರಯತ್ನ ಪೂರ್ವಕವಾಗಿ ಅರಿಯಬೇಕಾಗುತ್ತದೆ. |
| ೦೩ | ಪು. ೧೨–೧೩ 'ರಾಮ ರಾವಣನನ್ನು ಕೊಂದುದು ಯಾತಕ್ಕಾಗಿ? ಆತ ಸೀತೆಯನ್ನು ಕದ್ದೊಯ್ದುದಕ್ಕಾಗಿ. ಹದಿನಾಲ್ಕು ವರ್ಷಗಳ ಕಾಲ ಅವಳಿಗಾಗಿ ಅಲೆದಾಡಿ, ಯುದ್ಧ ಮಾಡಿದ; ರಾವಣನನ್ನು ಕೊಂದ, ಸೀತೆ ಕಾಣಸಿಕ್ಕಿದಳು. ಎಂಬ ಹೊತ್ತಿನಲ್ಲಿ ಆ ರಾಮ ಏನು ಮಾಡಿದ? ಅವಳ ಗೋಳನ್ನು ಹನುಮಂತನಿಂದ ಕೇಳಿ ತಿಳಿದೂ, ತಿಳಿದೂ ಆತ ಮಾಡಿದ ಕೆಲಸವೇನು? 'ನೀನು ಪರರ ಮನೆಯಲ್ಲಿ ಇದ್ದವಳು. ನಿನ್ನ ಶುಚಿಯನ್ನು ಉಳಿಸಿಕೊಂಡಿದ್ದೀಯೆಂದು ಹೇಗೆ ತಿಳಿಯಲಿ?' ಎಂದಂದು ಅಗ್ನಿಪರೀಕ್ಷೆಗೆ ಹೊರಟ ಕತೆ ಆ ಹಂತಕ್ಕೆ ಬಂದಾಗ ಯಾರಿಗೂ ಸಂಕಟವಾಗುತ್ತದೆ. ಅಸಹ್ಯ | Page 13 Why should Rama have killed Ravana? He fought Ravana and Killed him in battle because Ravana had kidnapped Sita. When he was about to regain her, what did he do? He wanted to test her purity in fire. One feels distressed at such a situation and disgusted about Rama's behaviour. But once sita comes out unscathed from the fire, we seem to forget all else that had taken place before. | ಭಾರತದ ಮಹಾಕಾವ್ಯವಾದ 'ರಾಮಾಯಣದ' ಪ್ರಸಂಗವನ್ನು ವಿಶ್ಲೇಷಿಸುವ ಪ್ರಯತ್ನ ಹಾಗೂ ಆದರ್ಶ ಪುರುಷ ರಾಮನ ಕೃತ್ಯವನ್ನು ಪ್ರಶ್ನಿಸುತ್ತ ಸೀತೆಗೆ ಆದ ಅನ್ಯಾಯವನ್ನು ಓದುಗರಿಗೆ ಮನದಟ್ಟು ಮಾಡುವ ಕಾರಂತರ ಪ್ರಯತ್ನ ಮೂಲ ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಅನುವಾದಾದಲ್ಲಿಯೂ ಕೂಡ ಈ ವಿಚಾರಗಳನ್ನು ಪರಿಣಾಮಕಾರಿಯಾಗಿ ಮೂಡಿಸುವಲ್ಲಿ ಅನುವಾದಕರು ಯಶಸ್ವಿಯಾಗಿದ್ದಾರೆ. ಹೀಗೆ ಭಾರತದ ಮಹಾಕಾವ್ಯದ ಜಿಜ್ಞಾಸೆಯ ತುಣುಕೊಂದು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗುವುದಕ್ಕೆ ಈ ರೀತಿಯ ಅನುವಾದ ಸಹಕಾರಿಯಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಹುಟ್ಟೀತು. ರಾಮನ ವಿಚಾರದಲ್ಲಿ 'ಅಗ್ನಿ ಪರೀಕ್ಷೆ' ನಡೆಯಿತು. ಸೀತೆ ಪಾರಾಗಿ ಬಂದಳು' ಎಂದೊಡನೆಯೇ ನಮಗೆಲ್ಲವೂ ಮರೆತು ಹೋಗುತ್ತದೆ. | | |
| ೦೪ | ಅಧ್ಯಾಯ ೨, ಪುಟ. ೩೭<br>ಅವನಿಗೆ ಆ ಸಂಚಿ ಪೆಟ್ಟಿಗೆ ಮುಖ್ಯವಾಗಿ ಬೇಕಾಗಿತ್ತು. ಅವನದ್ದದು; ಕೊಟ್ಟೆಯಲ್ಲ. ನಾಳೆ ಅವನ ಸುಣ್ಣದ ಡಬ್ಬಿಯೋ, ಹೊಗೆ ಸೊಪ್ಪಿನ ಅಂಡೆಯೋ ಸಿಕ್ಕದರೆ ಅವನಿಗೆ ಮುಟ್ಟಿಸು." | Chapter 2, Page 37<br>"What he wanted was the betel leaf case. It was his, and you have given it back. If you find his chunnam tin and tobacco box, Just return them to him'. | ಕರಾವಳಿ ಕರ್ನಾಟಕ ಪ್ರದೇಶದಲ್ಲಿ ಸಮಾಜದ ಬಹುತೇಕ ಕೆಳವರ್ಗದ ಜನರು, ಕೂಲಿ ಕಾರ್ಮಿಕರು ಎಲೆ ಅಡಿಕೆಯನ್ನು ತಿನ್ನುವ ಅಭ್ಯಾಸವನ್ನು ಹೊಂದಿದವರು. ಇದಕ್ಕಾಗಿಯೇ ಅವರು 'ಸಂಚಿ' ಯೊಂದನ್ನು ಮಾಡಿಕೊಂಡು ಅದರಲ್ಲಿ ಎಲೆ, ಅಡಿಕೆಯ ಹೋಳುಗಳು, ಸುಣ್ಣದ ಡಬ್ಬ ಹಾಗೂ ಹೊಗೇಸೊಪ್ಪಿನ ಅಂಡೆಯನ್ನು ಇಟ್ಟುಕೊಂಡಿರುತ್ತಾರೆ. ಇದು ಇನ್ನಿತರ ಪ್ರದೇಶಗಳಲ್ಲಿ ರೂಢಿಯಿಲ್ಲಿಲ್ಲದ ವಿಚಾರವೂ ಆಗಿರಬಹುದು. ಜಾಗತಿಕ ಮಟ್ಟದಲ್ಲಿಯೂ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಇಂತಹದೊಂದು ಪ್ರಾದೇಶಿಕ ಸಾಂಸ್ಕೃತಿಕ ವಿಚಾರವನ್ನು ಅನುವಾದದ ಮೂಲಕ ತಲುಪಿಸುವ ಸಾಧ್ಯತೆ ಇದೆ. ಒಂದು ಪ್ರದೇಶದ ಜನರ ಜೀವನ ಶೈಲಿ ಹಾಗೂ ಇನ್ನೊಂದು ಪ್ರದೇಶದ ಜೀವನ ಶೈಲಿಯನ್ನು ತುಲನಾತ್ಮಕವಾಗಿ ಅಭ್ಯಸಿಸಲು ಅನುವಾದ ಸಹಕಾರಿಯಾಗುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ಅರಿಯಬಹುದಾಗಿದೆ. ಮೂಲಕಾದಂಬರಿಯ ವಿಚಾರಗಳನ್ನು ನೇರವಾಗಿ ಅನುವಾದಿಸಿರುವ ಅನುವಾದಕರು ಈ ಕುರಿತು ವಿವರಣೆಯನ್ನು ನೀಡಬಹುದಾಗಿತ್ತು. |
| ೦೫ | ಅಧ್ಯಾಯ ೩, ಪುಟ. ೪೭-೪೮<br>".....ಇದು ಭೀಮಸೇನ ಅಡಿಗೆ ಮಾಡಿದ ಒಲೆ ಇದೆ. ಪಾಂಡವರು ಕಟ್ಟಿದ ದೇವಸ್ಥಾನ; ಆ | Chapter 3, Page 47<br>"This is the temple that the pandavas built; and 'In this pond Ravana had a swim'. | ಶಿವರಾಮ ಕಾರಂತರು ಪುರಾಣದ ರಾಮಾಯಣ ಮಹಾಭಾರತದ ಕತೆಗಳ ಪ್ರಸಂಗಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿಡಂಬಿಸುವುದನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಗುಮ್ಮಿ ರಾವಣನು ಮಿಂದ ತೀರ್ಥ ಹೀಗೆ ಕತೆಯ ಮೇಲೆ ಕತೆ! ನಮ್ಮ ಅಮ್ಮನ ಬಾಯಿಯಲ್ಲಿ ಅಂಥ ನೂರಾರು ಕಥೆಗಳಿವೆ. ಅವು ಒಂದಕ್ಕಾದರೂ ತಲೆಬುಡಿವಿದೆಯೋ? ಅದನ್ನು ಎಣಿಸಿದರೆ ನಗು ಬರುತ್ತದೆ....." | Not one story makes sense. The very idea its funny....." | ಕಾಣಬಹುದಾಗಿದೆ. ಮೂಲಕಾದಂಬರಿಯಲ್ಲಿ ಪ್ರಸ್ತಾಪಿತವಾದ ಎಲ್ಲ ವಿಚಾರಗಳನ್ನು ಅನುವಾದಿಸಿದೇ ಸಂಕ್ಷಿಪ್ತಗೊಳಸಲಾಗಿದೆ. ಭಾಷೆಯ ಮಿತಿಯಿಂದಾಗಿ ಎಲ್ಲವನ್ನೂ ಅನುವಾದಿಸುವುದು ಕಷ್ಟಸಾಧ್ಯವಾಗಿರಬಹುದು. ಇದು 'ಭೀಮಸೇನ ಅಡಿಗೆ ಮಾಡಿದ ಒಲೆ' 'ಗುಮ್ಮಿ ರಾವಣ' ಇಲ್ಲಿ 'ಗುಮ್ಮಿ' ಎಂಬ ಪದವನ್ನು ಕೈ ಬಿಡಲಾಗಿದೆ. ಮೂಲಕಾದಂಬರಿಯಲ್ಲಿ ರಾವಣನು ಮಿಂದ ತೀರ್ಥ' ಎಂದು ಇದ್ದರೆ ಅನುವಾದದಲ್ಲಿ 'In this pond Rvana had a swim' ಎಂದು ಅನುವಾದಿಸಲಾಗಿದೆ. ತೀರ್ಥ ಎನ್ನುವುದಕ್ಕೆ 'pond' ಸಂವಾದಿ ಶಬ್ದ ಎನಿಸಲಾರದು. ಹಾಗೂ <u>ಮಿಂದ'</u> ಎಂದರೆ ಸ್ನಾನ ಮಾಡಿದ ಎಂದು ಅರ್ಥ – ಅನುವಾದದಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | 'swim' ಎಂದು ಬಳಸಲಾಗಿದೆ ಎಂದರೆ ಈಜಾಡುವುದು ಎಂಬ ಅರ್ಥ ಬರುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ ಪುರಾಣದ ಗಂಭೀರ ವಿಚಾರಗಳು ಭಾಷೆಯ ಮಿತಿಯಿಂದಾಗಿ ಅಥವಾ ಭಾಷಾಂತರದ ಮಿತಿಯಿಂದಾಗಿ ತಮ್ಮ ಗಂಭೀರತೆಯನ್ನು ಕಳೆದುಕೊಂಡು ಕೆಲವು ಸಂದರ್ಭಗಳಲ್ಲಿ ಹಾಸ್ಯಾಸ್ಪದವಾಗುವ ಅಪಾಯವಿದೆ 'Ravama had a swim' ಎಂಬುದು ಇದಕ್ಕೆ ಒಂದು ಉದಾಹರಣೆಯಾಗಿದೆ. |
| ೦೬ | ಪುಟ. ೬೯<br>ಚರಿತ್ರೆಯಲ್ಲಿ ಪುರಾತನ ಬೌದ್ಧ ಗುಹಾಲಯಗಳನ್ನು ಓದಿದ ನೆನಪಿನಿಂದಲೋ ಏನೋ, ನನಗೆ ಆ ಗುಹೆಯಲ್ಲಿ ಬುದ್ಧ ಕಾಣಿಸಿದ. ಸುತ್ತ ಕುಳಿತ | ಅನುವಾದಿಸಿರುವುದಿಲ್ಲ. | ಮೂಲಕಾದಂಬರಿಯಲ್ಲಿ ಕಾರಂತರು ಮೂಕಜ್ಜಿಯ ಮುಖೇನ ಜನರ ಜೀವನದಲ್ಲಿ ಧರ್ಮಗಳು ಒಂದರ ನಂತರ ಮತ್ತೊಂದು ಬಂದು ಹೇಗೆ ಪ್ರಭಾವಿಸಿದವು, ಹಾಗೂ ಬೌದ್ಧ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಭಿಕ್ಷುಗಳಿಗೆ ಉಪದೇಶ ಮಾಡುತ್ತಿದ್ದ. 'ಸಂಘಂ ಗಚ್ಛಾಮಿ ಶರಣಂ ಗಚ್ಛಾಮಿ' ಎಂಬ ಘೋಷಗಳೂ ಕೇಳಿಸಿದವು. | | ಧರ್ಮದ ಪ್ರಸ್ತಾಪದ ಕುರಿತಾದ ಈ ವಿಚಾರಗಳನ್ನು ಅನುವಾದಿಸಿಲ್ಲ. 'ಸಂಘಂ ಗಚ್ಛಾಮಿ', 'ಶರಣಂ ಗಚ್ಛಾಮಿ' ಎಂಬ ಬೌದ್ಧಧರ್ಮದ ಉಲ್ಲೇಖವನ್ನು ಇಂಗ್ಲಿಷಗೆ ಅನುವಾದಿಸಲು ಭಾಷೆಯ ಮಿತಿಯೂ ಇದೆ. ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. |
| ೦೬ | ಅಧ್ಯಾಯ ೦೪, ಪುಟ. ೬೯<br>"ಅವನ ಮನೆಯ ನೀರಿನ ಋಣ ಕಡಿಯಿತು. ನನಗೆ ಇಲ್ಲಿನ ನೀರಿನ ಋಣವೇ ಗಟ್ಟಿಯಾಗಿತ್ತು. 'ಋಣ' ಎಂಬುದೊಂದು ಮಾತು ಅರ್ಥವಿಲ್ಲದ ಮಾತು. ಏನೆಂದು ತಿಳಿಯದ್ದಕ್ಕೆ ಹೇಳುವ ಮಾತು. ಆ ಅಶ್ವತ್ಥ ಮರಕ್ಕೆ ನಮ್ಮ ಮನೆಯ ಋಣ ಇದೆ – ಎಂದಷ್ಟೇ ಫಲ. | Chapter 4,<br>ಅನುವಾದಿಸಿರುವುದಿಲ್ಲ | 'ನೀರಿನ ಋಣ' ಎಂಬುದು ಆಡು ಮಾತಿನಲ್ಲಿ ಬಳಸುವ ನುಡಿಗಟ್ಟಾಗಿದೆ. 'ಅವನ ಮನೆಯ ನೀರಿನ ಋಣ ಕಡಿಯಿತು' ಎಂದರೆ ಅವನ ಮನೆಯೊಂದಿಗಿರುವ ಸಂಬಂಧ ಕಡಿಯಿತು ಎಂಬ ಅರ್ಥವನ್ನು ಇದು ಕೊಡುತ್ತದೆ. 'ಋಣಾನುಬಂಧ' ಎಂಬ ಪದದ ಬಳಕೆಯೂ ಕನ್ನಡದಲ್ಲಿದೆ. ಉದ್ದಿಷ್ಟ ಭಾಷೆಯಾದ ಇಂಗ್ಲಿಷಿನಲ್ಲಿ ಇದಕ್ಕೆ ಸಂವಾದಿಯಾದ ಪದದ ಬಳಕೆಯಾಗಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದದಲ್ಲಿ ಈ ವಿಚಾರವನ್ನು ಕೈ ಬಿಡಲಾಗಿದೆ. |
| ೦೮ | ಪುಟ. ೩೩<br>"ಇನ್ನೊಂದು ಸಾರಿಯೋ! ನೀನು ಬೇಕಾದರೆ ಹೋಗು; ನಾನು ಒಲ್ಲೆ. ನಿನ್ನ ತಮ್ಮ ಶಿವಮೊಗ್ಗದಿಂದ ಊರಿಗೆ ಬರುವುದು ಯಾವಾಗ? ಅಣ್ಣ ತಮ್ಮಂದಿರು ಇಬ್ಬರೂ ಸೇರಿ ರಾಮ ಲಕ್ಷ್ಮಣರಂತೆ ಹೊರಡಿ. ಆಮೇಲೆ ಬೇಕಾದರೆ ನೀನು ನನ್ನ ಹೆಂಡತಿಯನ್ನು ಜತೆಗೆ ಕರೆದುಕೊಂಡು ಹೊರಡು. ಅಣ್ಣು ನಾಯಕ ನಿಮ್ಮ ಪಾಲಿನ ಅಂಜನೇಯ. ಅವನಾದರೆ ಗಟ್ಟಿ ಜನ. ಒಂದು ಚೂರೂ ಹೆದರಿಕೆ ಇಲ್ಲ; ಒಂದಿಷ್ಟೂ ಬಿಸಾತಿಲ್ಲ. | Chapter 4, Page 73<br>"Again! You go; I shall not venture. When is your brother coming from Shimoga? Both of you can then wonder in the forest like Rama and Laxmana. If you want, like Rama you can take your wife too. You have your Hanuman in Annu Naik. Surely, that is a brave fellow, he doesnot have even the slightest fear". | ಭಾರತದ ಪುರಾಣ ಕಾವ್ಯವಾದ 'ರಾಮಾಯಣ'ದಲ್ಲಿ ಬರುವ ಸನ್ನಿವೇಶವನ್ನು ಕಾರಂತರು ಬಳಸಿಕೊಂಡು ಕಾದಂಬರಿಯ ಸನ್ನಿವೇಶದೊಂದಿಗೆ ಹೋಲಿಸಿದ್ದಾರೆ. ಒಮ್ಮೆ ಸುಬ್ರಾಯನೊಂದಿಗೆ ಕಾಡಿನೊಳಕ್ಕೆ ಹೋಗಿ, ಬೆಟ್ಟ ಏರಿ ದಣಿದು ಬಂದ ಜನಾರ್ಧನ ಇನ್ನೊಂದು ಸಾರಿ ತಾನ ಬರಲಾರೆ ಎಂದು ಹೇಳಿ ಈ ಮಾತುಗಳನ್ನು ಆಡುತ್ತಾನೆ. ರಾಮ ಲಕ್ಷ್ಮಣ ಸುಬ್ರಾಯ, ನಾರಾಯಣರೆಂದರೆ ಸೀತೆ ಸುಬ್ರಾಯನ ಹೆಂಡತಿ ಇನ್ನು ಅಣ್ಣು ನಾಯ್ಕನನ್ನು ಹನುಮಂತನಿಗೆ ಹೋಲಿಸಲಾಗಿದೆ. 'ರಾಮಾಯಣ'ದ ಕಥೆಯನ್ನು ಅರಿತ ಓದುಗರಿಗೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅನುವಾದದಲ್ಲಿನ ಈ ವಿಚಾರಗಳು ಅರಿವಾಗಬಹುದು. ರಾಮಾಯಣದ ವಿಚಾರಗಳು ತಿಳಿಯದ ಅನ್ಯಭಾಷಿಕರಿಗೆ ಅದರಲ್ಲಿಯೂ ವಿದೇಶಿ ಓದುಗರಿಗೆ ಈ ಹೋಲಿಕೆಯ ಅರಿವಾಗದೇ ಹೋಗಬಹುದು. ಆದಾಗ್ಯೂ ರಾಮಾಯಣದಂತ ಭಾರತೀಯ ಪುರಾಣ ಕಾವ್ಯದ ವಿಚಾರಗಳನ್ನು ವಿದೇಶಿ ಭಾಷಿಕರಿಗೆ ಅನುವಾದದ ಮೂಲಕ ಇದರಿಂದ ಪರಿಚಯಿಸಿದಂತಾಗುತ್ತದೆ. ಹಾಗೂ ಈ ಸಂದರ್ಭದಲ್ಲಿ ಇಂಗ್ಲಿಷ ಹಾಗೂ ಕನ್ನಡ ಭಾಷೆಯ ರಚನೆಯಲ್ಲಿನ ವ್ಯತ್ಯಾಸಗಳನ್ನು ಗಮನಿಸಬಹುದಾಗಿದೆ. |
| ೦೯ | ಅಧ್ಯಾಯ ೫, ಪುಟ. ೮೮<br>"ಅದು ನೋಡಿ, ನಮ್ಮ ಅಜ್ಜಿ ವರ್ಷ ಎಪ್ಪತ್ತೋ, | Chapter 5, Page 81-82<br>"She is my grandmother. She is seventy | ಮೂಲಕಾದಂಬರಿಯಲ್ಲಿ ನಾರಾಯಣನು ಮೂಕಜ್ಜಿಯ ಪರಿಚಯವನ್ನು ತನ್ನ ಸ್ನೇಹಿತನಿಗೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಎಂಬತ್ತೋ, ಒಂದು ತರಹ ಸ್ವಭಾವ; ಮಾತು ಕಡಿಮೆ. ಏನು ಆಡುವುದಿದ್ದರೂ ಅದು ಅವರಷ್ಟಕ್ಕೇ; ನನ್ನ ಹತ್ತಿರವೂ ಅವರಿಗೆ ಅಷ್ಟೊಂದು ಸಲಿಗೆಯಿಲ್ಲ. ಅಂದರೆ ಒಂದು ಸುತ್ತು ಕಡಿಮೆ, ಸಣ್ಣದರಿಂದಲೂ ಹಾಗೆಯೇ ಅಂತೆ" ಎಂದೆ | or eighty now. A queer person; given to few words. Most of her talk is addressed to herself. She is not free even with me.....a little bit crazy; she has been so from her childhood". | ಮಾಡಿಕೊಡುವ ಸಂದರ್ಭದ ಮಾತುಗಳಿವು. ಇಲ್ಲಿ ಮೂಲ ಕಾದಂಬರಿಯಲ್ಲಿನ ಮಾತುಗಳಿಗೂ, ಅನುವಾದದಲ್ಲಿನ ಮಾತುಗಳಿಗೂ ಸಾಕಷ್ಟು ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ "ಒಂದು ತರಹ ಸ್ವಭಾವ" ಎಂಬುದನ್ನು "A queer person" ಎಂದು ಅನುವಾದಿಸಲಾಗಿದೆ. ಏನು ಆಡುವುದಿದ್ದರೂ ಅದು ಅವರಷ್ಟಕ್ಕೇ ಎಂಬುದನ್ನು 'Most of her talk is addressed to herself" ಎಂದು ಅನುವಾದಿಸಲಾಗಿದೆ. ಅರ್ಥ ವ್ಯತ್ಯಾಸವನ್ನು ಗಮನಿಸಬಹುದಾಗಿದೆ. ತಮ್ಮಷ್ಟಕ್ಕೆ ತಾನು ಮಾಡನಾಡುವುದಕ್ಕೂ ತಮ್ಮನ್ನು ಕುರಿತಾಗಿಯೇ ತಾನು ಮಾತನಾಡಿಕೊಳ್ಳುವುದಕ್ಕೂ ವ್ಯತ್ಯಾಸವಿದೆ. 'ಮೂಕಜ್ಜಿ' ಮಾಡನಾಡುವುದು ಅವಳಷ್ಟಕ್ಕೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಅದರೂ ಅವಳ ಮಾತುಗಳಲ್ಲಿ ಮನುಷ್ಯ, ನಂಬಿಕೆ, ಧರ್ಮ, ದೇವರು ಇತ್ಯಾದಿ ವಿಚಾರಗಳೇ ತುಂಬಿರುವುದನ್ನು ಮೂಲ ಕಾದಂಬರಿಯಲ್ಲಿ ಗಮನಿಸಬಹುದಾಗಿದೆ. ಮೂಲ ಕಾದಂಬರಿಯಲ್ಲಿ ಬರುವ ಮೂಕಜ್ಜಿಯ ಕುರಿತಾದ ಈ ಮಾತು "ಅಂದರೆ ಒಂದು ಸುತ್ತು ಕಡಿಮೆ' ಆಡು ಮಾತಿನಲ್ಲಿ "ಮರುಳು" "ಹುಚ್ಚು" ಎಂದು ಅರ್ಥ ಕೊಡುತ್ತದೆ. ಮೂಲ ಭಾಷೆಯಲ್ಲಿ ಯಾವ ದ್ವಂದ್ವಗಳಿಗೆ, ಅಪಾರ್ಥಗಳಿಗೆ ಅಸ್ಪದ ಕೊಡದ ಈ ಅನುವಾದದಲ್ಲಿ 'a little bit crazy' ಎಂದು 'Crazy' ಅನುವಾದಿಸಲ್ಪಟ್ಟಿದೆ. ಎಂಬುದು ಇಲ್ಲಿ ಹುಚ್ಚು 'ವಗಳು' ಎಂಬ ಅರ್ಥವನ್ನು ಸಮರ್ಪಕವಾಗಿ ಪ್ರತಿನಿಧಿಸುವುದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೦ | ಅಧ್ಯಾಯ ೬, ಪುಟ. ೧೧೪<br>"ಮಗೂ, ನಮ್ಮೂರ ಶೂದ್ರರಲ್ಲಿ ಅ ಬಳಿ, ಈ ಬಳಿ – ಅಂತ ಇದೆಯಲ್ಲ. ಅದೂ ಹೀಗೆಯೇ ಇರಬೇಕು".<br>"ನಮ್ಮಲ್ಲಿ ಗೋತ್ರ ಇಲ್ಲವೇ ಅಜ್ಜಿ–ವಿಶ್ವಾಮಿತ್ರ, ಭಾರದ್ವಾಜ, ವಸಿಷ್ಠ ಅಂತ" | Chapter 6<br>"Child, the 'Sudra'communities of our own village have similar 'Clan' customs.<br>"We have our 'gotras' Vishwamitra, Bharadwaja, Vasistah and the like. | ಸುಬ್ರಾಯ ಹಾಗೂ ಮೂಕಜ್ಜಿಯರ ಮಧ್ಯದಲ್ಲಿ ನಡೆಯುವ ಸಂಭಾಷಣೆಯ ಈ ತುಣುಕಿನಲ್ಲಿ ಶೂದ್ರದಲ್ಲಿ ಪ್ರಚಲಿತವಿದ್ದ ಬಳಿಗಳಿಗೆ ಹೆಸರನ್ನು ಹೇಳಿ ಅವರ ವಂಶವನ್ನು ಗುರುತಿಸುವ ಸಂಪ್ರದಾಯವಿತ್ತು. ಹಾಗೂ ಅನೇಕ ಹೆಸರುಗಳಿಂದ ಕರೆಯುವ ಈ ಬಳಿಗಳಲ್ಲಿ–ಒಂದೇ ಬಳಿಗೆ ಸೇರಿದವರ ನಡುವೆ ಮದುವೆಯ ಸಂಬಂಧ ಏರ್ಪಡುತ್ತಿರಲಿಲ್ಲ. ಬ್ರಾಹ್ಮಣರಲ್ಲಿ ಈ ರೀತಿಯ ಬಳಿಗಳಿರದೇ ಅವರನ್ನು ಗೋತ್ರಗಳಿಂದ ಗುರುತಿಸಲಾಗುತ್ತಿತ್ತು. ಅನುವಾದದಲ್ಲಿ ಈ ವಿಚಾರಗಳು ಸ್ಪಷ್ಟವಾಗಿ ಅರಿವಿಗೆ ಬರುವುದಿಲ್ಲ. 'ಬಳಿ' ಅನ್ನುವುದಕ್ಕೆ 'Clan' ಎಂದು, 'ಗೋತ್ರ' ಶಬ್ಧಕ್ಕೆ 'gotra' ಎಂದೇ ಬಳಸಿರುವುದನ್ನು ಕಾಣಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೧ | ಅಧ್ಯಾಯ ೭, ಪುಟ. ೧೨೫<br>"ಅಜ್ಜಿಯು ಹುಚ್ಚು ಕನಸುಗಳನ್ನು ಈತ ನಂಬುತ್ತಾನಲ್ಲ" ಎಂದು. ಕವಡೆ ಇರಿಸಿ, ಫಲ ಹೇಳುವುದನ್ನು ಕೆಲವರು ನಂಬುತ್ತಾರೆ. ಜಾತಕ ತೋರಿಸಿ ನಂಬುತ್ತಾರೆ. ಸಾಮುದ್ರಿಕರಿಗೆ ಅಂಗೈ ತೋರಿಸಿ ಬೇಕಷ್ಟು ಅವಲಕ್ಷಣಗಳನ್ನು ಕೇಳಿ, ಜೊಲ್ಲು ಸುರಿಸುತ್ತಾರೆ. ಉಳಿದವರು ಇನ್ನು ಕೆಲವರೋ! ಸಂತೆಗೆ ತಂದ ಹಕ್ಕಿಗಳಿಂದ ಶಕುನ ಹೇಳಿಸಿ ಸಮಾಧಾನ ತಾಳುತ್ತಾರೆ. ಇಷ್ಟೆಲ್ಲಾ ಪ್ರಸಂಗಗಳಲ್ಲೂ ಹಿಂದೆ ಹೀಗಾಗಿತ್ತು; ಮುಂದೆ ಹೀಗಾಗುತ್ತದೆ" ಎಂದು ತಿಳಿಸುತ್ತಾರೆ. | Chapter 7, Page 115<br>'This fellow really believes the day dreams of that old woman!' 'Why not?' is my question you believe in the prophecies of astrologers who cast cowries and cook up things. You show your horoscopes to a clever fellow and make him tell you the position of good and bad planets. You show your palm to a palmist who will tell you a palmist who will tell you a lot of unpleasant things about your past and future. Some go to fairs and pick up written slips from the beakes of tiny birds, on the basis of which the past and the future are interpreted. | "ಹುಚ್ಚು ಕನಸುಗಳು' ಎಂಬುದನ್ನು 'day dreams' ಎಂದು ಅನುವಾದಿಸಲಾಗಿದೆ. ಇದು ಕನ್ನಡದಲ್ಲಿ 'ಹಗಲುಗನಸುಗಳು' ಎಂಬ ಅರ್ಥವನ್ನು ನೀಡುತ್ತದೆ. ಉಳಿದಂತೆ ಜಾತಕ, ಕವಡೆ, ಗಿಳಿ ಶಕುನ, ಹಸ್ತ ಸಾಮುದ್ರಿಕೆ ಈ ಮುಂತಾದವುಗಳನ್ನು ಆಧರಿಸಿ ಭವಿಷ್ಯವನ್ನು ಕೇಳಿ ತಿಳಿದುಕೊಳ್ಳುವ ಜನರು ಬಹುತೇಕ ಪ್ರದೇಶಗಳಲ್ಲಿ ಕಂಡು ಬರುತ್ತಾರೆ. ಇಂದಿಗೂ ಕೂಡ ವಿಶೇಷವಾಗಿ ಹಳ್ಳಿಗಳಲ್ಲಿನ ಜನತೆ ಇವುಗಳಲ್ಲಿ ನಂಬಿಕೆಗಳನ್ನು ಇರಿಸಿಕೊಂಡಿದ್ದಾರೆ. ವೈಚಾರಿಕ ಹಿನ್ನಲೆಯಲ್ಲಿ ಈ ಎಲ್ಲಾ ವಿಚಾರಗಳ ಸತ್ಯಾಸತ್ಯತೆಯನ್ನು ಚರ್ಚಿಸುವ ಕಾರಂತರ ಮೂಲಕಾದಂಬರಿಯಲ್ಲಿನ ವಿಚಾರಗಳು ಅನುವಾದದಲ್ಲಿ ಸಾಕಷ್ಟು ಪರಿಣಾಮಕಾರಿಯಾಗಿ ಮೂಡಿ ಬಂದಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೨ | ಅಧ್ಯಾಯ ೮, ಪುಟ. ೧೪೫<br>"ಸುಬ್ರಾಯರೇ, ದೇವರ ಕಾರ್ಯ, ಚಂಡಿಕಾ ಹೋಮ, ಸಹಸ್ರನಾಮ ಇವು ಎಲ್ಲವೂ ಅಲ್ಲೇ ಆಗುವುದು. ಆದರೆ, ಸಂತರ್ಪಣೆಯನ್ನು ಅಲ್ಲಿ ಮಾಡಿಸುವುದಕ್ಕೆ ಉಪಾಯವಿಲ್ಲ. ಅಲ್ಲಿನ ಬಾವಿಯಲ್ಲಿ ನೀರು ಏನೇನೂ ಸಾಲದು ಹಾಗಿದ್ದ ಮೇಲೆ" | Chapter 8, Page 132<br>'Mr. Subbarao, all religious ceremonies like Chandika Homa, Sahasranama and worship take place there. But I can't have the feast there because there is not enough water in the temple well". | "ಚಂಡಿಕಾ ಹೋಮ", "ಸಹಸ್ರನಾಮ" ಮುಂತಾದವುಗಳು ಧಾರ್ಮಿಕ ವಿಧಿ ವಿಧಾನಗಳಿಗೆ ಸಂಬಂಧಿಸಿದ ವಿಚಾರಗಳು ಇವುಗಳನ್ನು ಯಥಾವತ್ತಾಗಿ ಅನುವಾದಿಸಲಾಗಿದೆ. ಜಾಗತಿಕ ಭಾಷೆಗೆ ಅನುವಾದಗೊಳ್ಳುವಾಗ ಉದ್ದಿಷ್ಟ ಭಾಷೆಯಲ್ಲಿ ಸಂವಾದಿ ಪದಗಳು ಲಭ್ಯವಿಲ್ಲದಿರುವುದನ್ನು ಗಮನಿಸಬಹುದಾಗಿದೆ. "ಸಂತರ್ಪಣೆ' ಎಂಬುದನ್ನು 'feast' ಎಂದು ಅನುವಾದಿಸಲಾಗಿದೆ. ಉದ್ದಿಷ್ಟ ಭಾಷೆಯ ಈ ಪದ 'ಸಂತರ್ಪಣೆ' ಶಬ್ದದ ಸಮಾನಾರ್ಥಕ ಪದವಾಗಿ ಮೂಡಿ ಬಂದಿಲ್ಲ. ಇಲ್ಲಿ ಭಾಷಾಂತರ ಮಿತಿಯನ್ನು ಗಮನಿಸಬಹುದಾಗಿದೆ. |
| ೧೩ | ಪುಟ. ೧೫೧<br>"ಯಾಕೋ! ಅದು ಯಾರು, ಯಾರಿಗೂ | Page 137<br>"No, no, not that others did not want her. | 'ಜಕಣಿ' ಎಂಬುದು ಭೂತ – ಪ್ರೇತದ ಹೆಸರು. ಇದು ಪ್ರಾದೇಶಿಕವಾದ ನಂಬಿಕೆಯ ವಿಚಾರ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಬೇಡವಾಗಿದೆಯಲ್ಲ. ಅವಳಿಗೆ ನೋಡು, ಸಣ್ಣದರಿಂದಲೂ ಜಕಣಿ ಉಪದ್ರ". | But from her youth a queer Jakni has possessed and tormented her" | ಈ ಭೂತನು ವ್ಯಕ್ತಿಯ ಮೈಮೇಲೆ ಬಂದು ತೊಂದರೆಕೊಡುವುದು, ಅದರ ಪರಿಹಾರಕ್ಕಾಗಿ ಮಾಟ ಮಂತ್ರಗಳನ್ನು ಮಾಡಿಸುವುದು ಕರಾವಳಿ ಕರ್ನಾಟಕದಲ್ಲಿ ಕಂಡುಬರುವ ಸನ್ನಿವೇಶ. ಅನುವಾದಲ್ಲಿಯೂ ಇದನ್ನು queer Jakni ಎಂದರೆ 'ವಿಚಿತ್ರ-ಜಕಣಿ' ಎಂದು ಬಳಸಲಾಗಿದೆ. ಅನುವಾದದ ಓದು ಅನ್ಯಭಾಷಿಕರಿಗೆ ಅಸ್ಪಷ್ಟವಾಗುತ್ತದೆ. |
| ೧೪ | ಅಧ್ಯಾಯ ೮, ಪುಟ. ೧೫೭<br>ಮತ್ತೊಂದು ಕ್ಷಣದೊಳಗಾಗಿ ಅವಳ ಎದುರಿಗೆ ದೊಡ್ಡ ಕಟ್ಟಿಗೆ ರಾಶಿಯೊಂದನ್ನು ಉರಿಸಿ, ಅದರ ಕೆಂಡಗಳನ್ನು ಹರವಿ, ಆ ಕೆಂಡದ ಹಾಸಿಗೆಯ ಮೇಲೆ ಹೆಂಗಸರೂ, ಮಕ್ಕಳು ತುಳಿದು ಓಡಾಡುತ್ತಿರುವುದು ಕಾಣಿಸಿತು. ನಾನು "ಕೆಂಡ ತುಳಿಯುತ್ತಾರೆ". ಎಂಬುದನ್ನು ಕೇಳಿದ್ದೇನೆ. | Chapter 8, Page 143<br>The next moment I dreamt another gruesome scene. A huge pyre of wood was lit, then its cinders were spread on the ground, and her devotees - men, women, and even children walked on it in religious frenzy. I had heard of such things....." | 'ಕೆಂಡ ತುಳಿಯುವುದು' ಕೂಡ ಒಂದು ಧಾರ್ಮಿಕವಾದ ನಂಬಿಕೆಯಾಗಿದೆ. ಇಂತಹ ಪ್ರಾದೇಶಿಕ ಆಚರಣೆಯ ಬಗ್ಗೆ ಅರಿವಿರುವ ಓದುಗಾರಿಗೆ ಇದು ಸಹಜವಾಗಿ ಅರ್ಥವಾಗುತ್ತದೆ. ಆದರೆ ಕೇವಲ ಅನುವಾದವನ್ನು ಮಾತ್ರ ಓದುವವರಿಗೆ ಓದು ಅಪೂರ್ಣವಾಗುತ್ತದೆ. ಆದಾಗ್ಯೂ ಅನುವಾದಕರು ಮೂಲ |

| ಕ್ರಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಕಾದಂಬರಿಯ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ಮೂಲ ಕಾದಂಬರಿಯಲ್ಲಿ ಹೆಂಗಸರು ಮಕ್ಕಳು ಕೆಂಡ ಹಾಯುತ್ತಾರೆ. ಎಂಬ ವಿವರಣೆಯನ್ನು ಅನುವಾದದಲ್ಲಿ ;men, women and even children' ಎಂದು ಅನುವಾದಿಸಲಾಗಿದೆ. |
| ೧೫ | ಅಧ್ಯಾಯ ೯, ಪುಟ. ೧೬೫<br>'ಮಾಣಿ ಸಾಪಾಗಿ ಕೇಳಿಸುತ್ತದೆ ಬ್ರಾಹ್ಮಣರ ಧ್ವನಿ 'ಓಂ ಇಂದ್ರಾ ಇದನ್ನಮಃ' 'ಓಂ ವರುಣಾ ಇದನ್ನಮಃ' 'ಓಂ ಮಿತ್ರಾ ಇದನ್ನಮಃ' ಅನ್ನುತ್ತಿದ್ದಾರೆ! ಕೇಳು" ಎಂದರು. | Chapter 9, Page 151<br>"Why, I can hear quite clearly the words, "O Indira, I bow to you. O Varuna, I bow to you O Mitra, I bow to you. Listen" | ಯಜ್ಞ – ಯಾಗಗಳನ್ನು ಮಾಡುವಾಗ ಉಚ್ಚರಿಸುವ ಮಂತ್ರ ಘೋಷಗಳನ್ನು ಇಂಗ್ಲೀಷಗೆ ಅನುವಾದಿಸಿರುವುದನ್ನು ಕಾಣಬಹುದಾಗಿದೆ. ಅನುವಾದ ಯಾಂತ್ರಿಕವಾಗಿರುವುದರ ಜೊತೆಗೆ ಮೂಲದ ಓದಿನಲ್ಲಿ ಉಂಟಾಗುವ ಭಕ್ತಿಯ ಭಾವ ಅನುವಾದದಲ್ಲಿ ಉಂಟಾಗುವುದಿಲ್ಲ. ಸಾಂಸ್ಕೃತದಲ್ಲಿರುವ ಈ ಮಂತ್ರದ ಉಚ್ಚಾರಗಳು ಭಾಷಾಂತರದ ಮಿತಿಯಿಂದಾಗಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ನೀರಸವಾಗುವುದನ್ನು ಗುರುತಿಸಬಹುದಾಗಿದೆ. |
| ೧೬ | ಪುಟ. ೧೬೮ "ಅಲ್ಲದೆ ಹೋದರೆ – ಇಂದ್ರ, ವರುಣ, ಉಳಿದ ಎಲ್ಲ ಅಷ್ಟದಿಕ್ಪಾಲಕರು, ಮತ್ತೊಂದು ಎಂದವರು. ಅವರೆಲ್ಲರನ್ನು ಮರೆತು ಬಿಟ್ಟು ಎಷ್ಟು ಹೊಸ ದೇವರುಗಳನ್ನು ಪೂಜಿಸುವುದಂತೆ? ಬ್ರಹ್ಮ, ವಿಷ್ಣು, ಶಿವ, ಗಣೇಶ, ದುರ್ಗೆ, ಪಾರ್ವತಿ, ಮೂಕಾಂಬೆ – ಹೀಗೆಯೇ ಇನ್ನೆಷ್ಟೆಷ್ಟೋ! ಒಬ್ಬೊಬ್ಬ ದೇವರಿಗೆ ಸಾವಿರ, ಸಾವಿರ ಹೆಸರು". | Page 154 "Why then do we men worship never and never gods, after once praising and worshipping gods like Indira, Varuna, and the gods of other directions? Their name is legion-Brahma, Vishnu, Shiva, Ganesh, Durga, Parvati, Mookambu and so on and on. Each one in her or his turn has a thousand names". | 'ಅಷ್ಟದಿಕ್ಪಾಲಕರು' ಪದವನ್ನು ಅನುವಾದಿಸಿರುವುದು ಕಂಡು ಬರುವುದಿಲ್ಲ. ಹಿಂದು ಧರ್ಮಗಳಲ್ಲಿರುವ ನೂರಾರು ದೇವರುಗಳ ಉಲ್ಲೇಖಗಳ ಕುರಿತಾದ ವಿಚಾರ ಇದಾಗಿದೆ. ಭಾಷಾಂತರದಲ್ಲಿನ ಯಾಂತ್ರಿಕತೆಯನ್ನು ಗುರುತಿಸಬಹುದಾಗಿದೆ. |
| ೧೭ | ಅಧ್ಯಾಯ ೧೦, ಪುಟ. ೧೮೫ ಆತ ಆವಸರಿಸಿ ಎದ್ದು, "ನಾನು ನನ್ನ ಮನೆಗೆ ಓಡುತ್ತೇನೆ. ಅಲ್ಲಿ ಏನೇನು ಅನಾಹುತವಾಗಿದೆಯೋ! ಆಗುವುದೇನು – ಚಪ್ಪರದ | Chapter 10, Page 168 He got up in a hurry and said, "Let me run home. I don't know what catastrophe has befallen there. I can imagine it . The | 'ಚಪ್ಪನ್ನೈವತ್ತಾರು ದೇಶಗಳು' ಎಂಬುದು ಪುರಾಣದಲ್ಲಿ ಬರುವ ಐವತ್ತಾರು ದೇಶಗಳಿಗೆ ಸಂಬಂಧಿಸಿದ ವಿಚಾರ ಇದಾಗಿದೆ. ಮೂಲ ಕಾದಂಬರಿಯಲ್ಲಿ ರಭಸವಾಗಿ ಬೀಳುವ ಮಳೆಯ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಮಡಲೂ, ಬಿದಿರೂ ಚಪ್ಪನ್ನೈವತ್ತಾರು ದೇಶಕ್ಕೆ ಹೋಗಿ ಬಿದ್ದೀತು. ಮನೆಯ ಮಾಡು ಉಳಿದರೆ ಆಶ್ಚರ್ಯವೇ" ಎಂದ | winds must have torn the entire covering, and scattered the pieces far and wide. Even the roof of the house might have been blown off". | ಪರಿಣಾಮದಿಂದಾಗಿ ಚಪ್ಪರದ ಮಡಲು ಬಿದಿರುಗಳೆಲ್ಲ ಚೆಲ್ಲಾ ಪಿಲ್ಲಿಯಾಗಿ ಎಲ್ಲೆಲ್ಲೋ ಹೋಗಿ ಬಿದ್ದಿರಬಹುದು ಎಂಬುದನ್ನು ಪುರಾಣ ಮೂಲದ ಈ ಶಬ್ಧವನ್ನು ಬಳಸಿ ಕಾರಂತರು ವಿವರಿಸಿದ್ದಾರೆ – ಇಂಗ್ಲೀಷನ ಅನುವಾದದಲ್ಲಿ ಇದನ್ನು – 'scattered the pieces far and wide' ಎಂದು ಅನುವಾದಿಸಿದ್ದಾರೆ. ಮೂಲ ಭಾಷೆಯ ಪದದ ಅರ್ಥವನ್ನೇ ಹೋಲುವ ನುಡಿಗಟ್ಟು ಇದಾಗಿದ್ದರೂ ಪೌರಾಣಿಕವಾದಿ ಹಿನ್ನಲೆಯನ್ನು ಹೊಂದಿಲ್ಲ. ಆದಾಗ್ಯೂ ಮೂಲ ಭಾಷೆಗೆ ಅತಿ ಹತ್ತಿರವಿರುವ ನುಡಿಗಟ್ಟನ್ನು ಬಳಸಲಾಗಿದೆ. |
| ೧೮ | ಅಧ್ಯಾಯ ೧೧, ಪುಟ. ೧೯೧<br>"ನೀವು ಬೇಸರ ಮಾಡಬಾರದು. ನಮ್ಮವರಿಗೆ ನಿಮ್ಮ ಅಜ್ಜಿ ಒಂದು ಮಾತೆಂದರೆಂತೆ – ಅವರಿಗೆ | Chapter - 11, Page 174<br>"Your granny seems to have criticized my husband saying that he was bursting with | ಮೂಲಕಾದಂಬರಿಯಲ್ಲಿನ ಸಹಜವಾದ ಓದು ಅನುವಾದದಲ್ಲಿ ಸಾಧ್ಯವಾಗಲಾರದು. 'ಒಂದು ಮಾತು ಅಂದರಂತೆ' ಎಂಬುದನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | ಬಹಳ ಠೇಂಕಾರ – ಅಂದರಂತೆ. ನಾವು ಏನು ಮಾಡಿದ್ದೇವೆ ಅಂಥ ಠೇಂಕಾರದ ಕೆಲಸ?" ಎಂದು ಪ್ರಶ್ನಿಸಿದಳು. | vanity. How has he displayed vanity?" she said. | 'criticized'ಎಂದು ಅನುವಾದಿಸಲಾಗಿದೆ. 'ಠೇಂಕಾರ' ಎಂದರೆ ಅಹಂಕಾರ ಎಂಬ ಅರ್ಥವನ್ನು ನೀಡುವ ಶಬ್ಧವಾಗಿದೆ. ಇಂಗ್ಲಿಷನಲ್ಲಿ ಇದಕ್ಕೆ ಸಂವಾದಿಯಾಗಿ 'vanity' ಎಂದು ಬಳಸಲಾಗಿದೆ. ಇದು ಸಮರ್ಪಕವಾದ ಪರ್ಯಾಯ ಪದವಾಗಿದ್ದರೂ ಮೂಲದ ಭಾಷೆಯಲ್ಲಿನ ಸೊಗಡು ಅನುವಾದದಲ್ಲಿ ಅನುಭವಕ್ಕೆ ದಕ್ಕಲಾರದು. |
| ೧೯ | ಪುಟ. ೧೯೫<br>ಗೌತಮನ ಹೆಂಡತಿ ಅಹಲ್ಯೆ ಏನು ಮಾಡಿದಳಂತೆ? ಉದ್ದೇಶಪಟ್ಟೋ, ಪಡೆದೆಯೋ ಅವಳು ಒಂದು ದಿನ 'ಇಂದ್ರಾಯ' ಸ್ವಾಹಾ: ಆಗಲಿಲ್ಲವೇ? ಗೌತಮರು ಶಾಪಕೊಟ್ಟರು; ಇವಳು ಕಲ್ಲಾಗಿ ಬಿದ್ದಳು ರಾಮನಿಂದ ತಿರುಗಿ ಹೆಣ್ಣಾದಳು..... | Page 178-179<br>"What did Ahalya do? willingly or unwillingly, Ahalya was a victim of Indra's appetitie. But sage Gautama cursed her. She became a stone and remained a stone till Rama restored her to life...." | ಹಿಂದು ಪುರಾಣದಲ್ಲಿ ಬರುವ ಸನ್ನಿವೇಶವಿದು. ಮೂಲಕಾದಂಬರಿಯಲ್ಲಿ ಗೌತಮನ ಹೆಂಡತಿ ಅಹಲ್ಯ ಎಂದಿರವುದನ್ನು ಅನುವಾದದಲ್ಲಿ 'ಅಹಲ್ಯೆ' ಎಂದಷ್ಟೇ ಅನುವಾದಿಸಲಾಗಿದೆ. 'ಇಂದ್ರಾಯ ಸ್ವಾಹಾ: ಎಂಬುದನ್ನು 'was a victim of Indra's appetite' 'ಎಂದು ಅನುವಾದಿಸಲಾಗಿದೆ ಅಹಲ್ಯೆ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಇಂದ್ರನ ಭೋಗದ ವಸ್ತುವಾದಳು ಎಂಬುದನ್ನು ಈ ರೀತಿ ಅನುವಾದಿಸಲಾಗಿದೆ. ಸ್ತ್ರೀ ಪರವಾದ ಕಾಳಜಿಯುಳ್ಳ ಕಾರಂತರು ಹೆಣ್ಣಿಗಾದ ಶೋಷಣೆಯನ್ನು ಸೂಚ್ಯವಾಗಿ ಮೂಲಕಾದಂಬರಿಯಲ್ಲಿ ವಿಡಂಭಿಸಿದ್ದಾರೆ. 'ಇಂದ್ರಾಯ ಸ್ವಾಹಾ:' ಎಂಬ ಮಂತ್ರವನ್ನು ಉಲ್ಲೇಖಿಸಿ ಸಾಂಕೇತಿಕವಾಗಿ ಅಹಲ್ಯೆಯನ್ನು ಭೋಗಿಸಿದ ಇಂದ್ರನನ್ನು ವಿಡಂಭಿಸಿದ ಮೂಲಭಾಷೆಯ ಶೈಲಿ ಅನುವಾದದಲ್ಲಿ ಯಾಂತ್ರಿಕವಾಗಿ ಮೂಡಿಬಂದಿದೆ. ಮೂಲಭಾಷೆಯ ಸೊಗಡನ್ನು ಅನುವಾದದಲ್ಲಿ ಭಾಷಾಂತರದ ಮಿತಿಯಿಂದಾಗಿ ಕಾಯ್ದುಕೊಳ್ಳುವುದು ಕಷ್ಟಸಾಧ್ಯವಾಗುತ್ತದೆ. ಎಂಬುದನ್ನು ತಿಳಿಯಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೨೦ | ಅಧ್ಯಾಯ ೧೨, ಪುಟ. ೨೦೦ "ಕುಂಭಾರನಿಗೆ ವರುಷ, ದೊಣ್ಣೆಗೆ ನಿಮಿಷ" ಎಂದರೆ ಇದೇ ಎಂದು ಕೊಂಡೆ. | ಅನುವಾದಿಸಿರುವುದಿಲ್ಲ. | ಕನ್ನಡ ಭಾಷೆಯಲ್ಲಿರುವ ಈ ಗಾದೆ ಮಾತಿಗೆ ಸಂವಾದಿಯಾಗಿ ಇಂಗ್ಲಿಷ ಭಾಷೆಯಲ್ಲಿ ಗಾದೆ ಮಾತನ್ನು ಬಳಸಿದಲ್ಲಿ ಅನುವಾದ ಹೆಚ್ಚು ಸಮರ್ಪಕವಾಗುತ್ತಿತ್ತು. ಭಾಷೆಯ ಮಿತಿಯನ್ನು ಗಮನಿಸಬಹುದಾಗಿದೆ. |
| ೨೧ | ಪುಟ. ೨೦೪ ದೇವರ ಅವಭೃತಕ್ಕೆ ಒಂದು ಚಂಬು ನೀರಿದ್ದರೆ ಸಾಕು. ಶೂದ್ರರು ತಂದು ತುಂಬಿಸಿದ ಮೈಲಿಗೆ ನೀರಿನಲ್ಲಿ ಅವನನ್ನು ಮೀಯಿಸಲಾರರು. ಹಾಗಿದ್ದರೂ, ಈ ಓಕುಳಿ ಹೊಂಡ ಯಾತಕ್ಕಿತ್ತು? ಕೃಷ್ಣ ದೇವರಾದರೆ ಓಕುಳಿ ಆಟ ಅಡಿಯಾರು. | Chapter 12, Page 186 Of course, the 'god' is not bathed here, because the water is brought by the lower communities and so it is considered polluted. It is called 'Okuli pond'. Okuli water is coloured water, which gets its red tinge because of the addition of turmeric and lime. Lord krishna is supposed to have loved to sport with such coloured water. | 'ದೇವರ ಅವಭೃತಕ್ಕೆ ಒಂದು ಚಂಬು ನೀರಿದ್ದರೆ ಸಾಕು' ಇದನ್ನು ಅನುವಾದಿಸಿರುವುದಿಲ್ಲ. 'ಶೂದ್ರರು' ಎಂಬುದನ್ನು 'lower communities' ಎಂದು 'ಓಕುಳಿ ಹೊಂಡ' ಇದನ್ನು 'Okuli Pond' ಎಂದು ಅನುವಾದಿಸಲಾಗಿದೆ. ಒಂದು ಪ್ರದೇಶದ ಸಾಂಸ್ಕೃತಿಕ ಧಾರ್ಮಿಕ ವಿಚಾರಗಳು ಆಯಾ ಪ್ರದೇಶದ ಭಾಷೆಯಲ್ಲಿಯೇ ಸಮರ್ಪಕವಾಗಿ ವ್ಯಕ್ತವಾಗುತ್ತವೆ. ಭಾಷೆಯಲ್ಲಿಯೇ ಅಲ್ಲಿನ ಸಾಂಸ್ಕೃತಿಕತೆಯು ಅಡಗಿದೆ ಎಂಬುದನ್ನು ಕಾಣಬಹುದಾಗಿದೆ. ಕೃಷ್ಣನ ಲೀಲೆಯನ್ನು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ತಿಳಿದಿರುವ ಕನ್ನಡದ ಓದುಗರಿಗೆ 'ಕೃಷ್ಣದೇವರು ಓಕುಳಿ ಆಡುವುದೆಂದರೇನು' ಎಂಬುದರ ಅರ್ಥವಾಗುತ್ತದೆ. ಆದರೆ ಇನ್ನೊಂದು ತೀರಾ ಭಿನ್ನವಾದ ಸಾಂಸ್ಕೃತಿಕ ಪರಿಸರದ ಓದುಗರಿಗೆ ಇದು ಅರ್ಥವಾಗದೇ ಹೋಗುವ ಸಂಭವನೇ ಹೆಚ್ಚು. |
| ೨೨ | ಅಧ್ಯಾಯ ೧೨, ಪುಟ. ೨೦೮<br>"ಅನ್ನುತ್ತಾರೆ ನಿಜ; ಭಾಗವತ, ರಾಮಾಯಣ ಮತ್ತು ಮಹಾಭಾರತ ಹಾಗೆನ್ನುತ್ತದೆ ನಿಜ. ಅವು ಕೂಡ ಹದಿನೆಂಟು ಪುರಾಣಗಳ ಬದನೆಕಾಯಿಯೋ ಇದ್ದೀತು. | Chapter 12, Page 190<br>"Yes, the Ramayana and the Bhagavatha tell us so. These things could also be the proverbial 'brinjals'. | ರಾಮಾಯಣಃ, ಮಹಾಭಾರತ, ಭಾಗವತ ಮುಂತಾದವುಗಳನ್ನು ಕಾರಂತರು ಮೂಲಕಾದಂಬರಿಯಲ್ಲಿ ವಿಡಂಭಿಸಿರುವುದು ಕಂಡು ಬರುತ್ತದೆ. ಅವು 'ಹದಿನೆಂಟು ಪುರಾಣಗಳ ಬದನೆಕಾಯಿಯೋ ಇದ್ದೀತು' ಎಂಬಲ್ಲಿ ಅವುಗಳಲ್ಲಿ ವಾಸ್ತವ ಅಂಶಗಳಿಗಿಂತ ಸತ್ಯಕ್ಕೆ ದೂರವಾದ ಸಂಗತಿಗಳೇ ಹೆಚ್ಚಾಗಿ ಇರಬಹುದು ಎನ್ನುವ ತರ್ಕವಿದೆ. -'could |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| | | | also be the proverbial 'brinjals' ಎಂದು ಅನುವಾದಿಸಿರುವುದು ಸ್ಪಷ್ಟವಾಗಿ ಮೂಲದ ಅರ್ಥವನ್ನು ಕೊಡುವುದಿಲ್ಲ. |
| ೨೩ | ಪುಟ. ೨೧೭<br>ಆ ಕಾಲದ ಬಳಿಕ ಯಾಗ, ಯಜ್ಞ, ಅಜಮೋದ, ಗೋಮೇಧ ಬೇಕಾದರೆ ನರಮೇಧವನ್ನು ಮಾಡುವುದೂ ಹೆಚ್ಚಾಯಿತು ಅನ್ನುತ್ತಾರೆ. | Page 199<br>Their belief in sacrifice led to various developments such as Yajna, Ajamedha, Gomedha and even Naramedha (goat sacrifice, cow sacrifice, and even human sacrifice) | ಇಂಗ್ಲಿಷ ಭಾಷೆಯ ಅನುವಾದದಲ್ಲಿ ಅಜಮೇಧ, ಗೋಮೇಧ, ನರಮೇಧ, ಇವುಗಳ ಅರ್ಥ ಇಂಗ್ಲಿಷನ ಓದುಗರಿಗೆ ಸ್ಪಷ್ಟವಾಗಿ ಅರ್ಥವಾಗುವಂತೆ ಕಂಸದಲ್ಲಿ ಪ್ರತಿಯೊಂದರ ಅರ್ಥವನ್ನು ನೀಡಿರುವುದು ಔಚಿತ್ಯ ಪೂರ್ಣವಾಗದೆ. |
| ೨೪ | ಅಧ್ಯಾಯ ೧೩, ಪುಟ. ೨೩೯<br>ಪ್ರಾಯಶ: ಆಕೆ ಓಡಿ ಹೋಗಿ, ಒಳಗಿಂದ ಮಿಳ್ಳೆಯಿಂದ ಒಂದು ಸೌಟು ಗಂಗಾಜಲವನ್ನು ತಂದು ಕೊಟ್ಟಿರಬೇಕು. ನಮ್ಮಜ್ಜಿ ಗಟ್ಟಿ ಸ್ವರದಿಂದ | Chapter 13, Page 218<br>She rushed and brought a spoonful of Ganges water from a little pot. Holding it, granny spoke loudly into Tippajji's ears; "It is Ganges water; please drink" | ಮೂಲಕಾದಂಬರಿಯ ವಿಚಾರಗಳನ್ನು ಅನುವಾದಿಸಲಾಗಿದೆಯಾದರೂ 'ಗಂಗಾಜಲ'ದ ಪಾವಿತ್ರ್ಯತೆ ಹಿಂದುಗಳಲ್ಲಿ ಅಂತ್ಯಕಾಲದಲ್ಲಿ ಗಂಗಾಜಲವನ್ನು ಕುಡಿಸುವುದರಿಂದ ಅವರಿಗೆ ಮೋಕ್ಷ ಸಿಗುತ್ತದೆ ಎಂಬ ಕಲ್ಪನೆ ಹಾಗೂ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಅವರ ಕಿವಿಯಲ್ಲಿ 'ಭಾಗೀರಥಿ ಜಲ; ಕುಡಿ" ಎಂದರು. | | ಪ್ರತಿಂಯೊಂದು ಮನೆಂಯಲ್ಲಿ ಅದನ್ನು ಸಂಗ್ರಹಿಸಿಟ್ಟುಕೊಂಡಿರುವುದು – ಈ ಎಲ್ಲ ವಿಚಾರಗಳು ಕೇವಲ ಕನ್ನಡದ ಓದುಗರಿಗೆ ಮಾತ್ರ ಅರಿವಾಗಬಹುದು. ಇಂಗ್ಲಿಷನ ಅನುವಾದವನ್ನಷ್ಟೇ ಓದುವುದರಿಂದ ಗಂಗಾಜಲದ ಕುರಿತಾದ ಯಾವ ಸಾವಿತ್ರ ಭಾವನೆ ಬರುವುದಿಲ್ಲ. ಅನುವಾದ ಸರಳವಾಗಿ, ಯಾಂತ್ರಿಕವೆನಿಸುತ್ತದೆ. |
| ೨೫ | ಅಧ್ಯಾಯ ೧೪, ಪುಟ. ೨೪೬<br>ತುಸು ಹೊತ್ತಿನ ಮೇಲೆ "ಎಲ್ಲವೂ ವಿಚಿತ್ರ! ಅತ್ತೆಗೊಂದು ಕಾಲ ; ಸೊಸೆಗೊಂದು ಕಾಲ – ಎಂಬ ಗಾದೆಯ ಹಾಗಿದೆ". | Chapter 14, Page 225<br>After a little while she exclaimed, 'Strange!They say 'The mother - in - Law has her day and the daughter - in - Law too has her day'. | ಕನ್ನಡದ ಗಾದೆಯ ಮಾತನ್ನು ಇಂಗ್ಲೀಷಗೆ ನೇರವಾಗಿ ಅನುವಾದಿಸಲಾಗಿದೆ ಉದ್ಧಿಷ್ಟ ಭಾಷೆಯಲ್ಲಿ ಪರ್ಯಾಯವಾದ ಗಾದೆ ಮಾತು ಲಭ್ಯವಿಲ್ಲದಿರುವಾಗ ಮೂಲದ ಗಾದೆಯ ಮಾತಿನ ಅರ್ಥ ಕೆಡದ ರೀತಿಯಲ್ಲಿ ಅನುವಾದಿಸುವ ಪ್ರಯತ್ನವನ್ನು ಕಾಣಬಹುದಾಗಿದೆ. ಆದಾಗ್ಯೂ ಮೂಲದಲ್ಲಿ ಗಾದೆಯ ಮಾತಿನಿಂದ ಧ್ವನಿಸುವ ಆರ್ಥವು ಅನುವಾದದಲ್ಲಿ ಪರಿಣಾಮಕಾರಿಯಾಗಿ ಬಂದಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೨೬ | ಅಧ್ಯಾಯ ೧೫, ಪುಟ. ೨೬೪<br>"ಅಂಯ್ಯೋ, ಇಸಗಾಳಿ ಏನೆಂದು ನಿಮಗೆ ಗೊತ್ತಾಗಲಿಲ್ಲವೇ 'ಇಸಗಾಳಿ' ಭೂತವಲ್ಲ, ಮೂಗಿಗೆ ಬಡಿಯುವ ಇಸಗಾಳಿ" ಎಂದು ಹೇಳಿದೆ. | Chapter 15, Page 240<br>"No, no, I mean poisonous air that hits one's nose. You ought not to breath it." | 'ಇಸಗಾಳಿ' ಎಂದರೆ ವಿಷಪೂರಿತವಾದ ಗಾಳಿ ಎಂದು 'ಇಸಗಾಳಿ'ಯ ಅರ್ಥವನ್ನು ಅನುವಾದದಲ್ಲಿ ನೀಡಲಾಗಿದೆ. 'ಭೂತವಲ್ಲ' ಎಂಬ ಪದವನ್ನು ಅನುವಾದಿಸಿಲ್ಲ. |
| ೨೭ | ಪುಟ. ೨೭೦<br>'ಜಿನ ಮರುಳೋ, ಜಾತ್ರೆ ಮರುಳೋ ಅಂತ ಮಾತಿಗೆನ್ನುತ್ತಾರೆ ಎರಡೂ ಮರುಳೇ | Page 246<br>There is the proverb are the people mad or the Jatra mad? Infact both are mad. | ಕನ್ನಡದ ಗಾದೆ ಮಾತನ್ನು ಇಂಗ್ಲೀಷಗೆ ಅನುವಾದಿಸಲಾಗಿದೆ. ಮೂಲ ಭಾಷೆಯ ಈ ಗಾದೆ ಮಾತನ್ನು ಉದ್ಧಿಷ್ಟ ಭಾಷೆಯಲ್ಲಿ ಅನುವಾದಿಸಿದಾಗ ಅನುವಾದ ಯಾಂತ್ರಿಕವೆನಿಸುತ್ತದೆ. |
| ೨೮ | ಪುಟ. ೨೭೫<br>ಯದಾಯದಾಹಿ ಧರ್ಮಸ್ಯ.....ನೈನಂ ಛಿಂದಂತಿ ಶಸ್ತ್ರಾಣಿ.....ಇತ್ಯಾದಿಗಳು ನನಗೆ ಹೊಸತಲ್ಲ. | Page 252<br>Versers like 'Nainam chindanthi shastrani' or 'Yada yada hi dharmasya' were not new to me. | ಭಗವದ್ಗೀತೆಯ ಸಾಲುಗಳನ್ನು ಇಂಗ್ಲೀಷಿಗೆ ನೇರವಾಗಿ ಅನುವಾದಿಸಲಾಗಿದೆ. ಇಲ್ಲಿಯೂ ಕೂಡ ಕನ್ನಡೇತರ ವಿದೇಶಿ ಓದುಗರಿಗೆ ಇದರ ಅರ್ಥ ಸ್ಪಷ್ಟವಾಗದೇ ಹೋಗಬಹುದು. ಅನುವಾದದಲ್ಲಿ ಯಾಂತ್ರಿಕತೆಯನ್ನು ಗಮನಿಸಬಹುದಾಗಿದೆ. |

## ೬. ಮೂಲ ಕಾದಂಬರಿ : 'ಮೈಮನಗಳ ಸುಳಿಯಲ್ಲಿ'

## ಅನುವಾದ : THE WOMAN OF BASRUR

## ಅನುವಾದಕರು : H.Y. SHARADA PRASAD

೧೯೭೦ರಲ್ಲಿ ಕಾರಂತರು ಬರೆದು ಸಾಹಿತ್ಯಲೋಕಕ್ಕೆ ಅರ್ಪಿಸಿದ ಕೃತಿ 'ಮೈ ಮನಗಳ ಸುಳಿಯಲ್ಲಿ' ಸುಮಾರು ೨೭ ವರ್ಷಗಳ ನಂತರದಲ್ಲಿ ೧೯೯೭ರಲ್ಲಿ ಇದು 'The woman of Basrur' ಎಂಬ ಶೀರ್ಷಿಕೆಯಡಿಯಲ್ಲಿ ಇಂಗ್ಲಿಷಗೆ ಅನುವಾದಗೊಂಡಿರುವುದು ಕಂಡು ಬರುತ್ತದೆ. ಇಂಗ್ಲಿಷ ಅನುವಾದದ ಆರಂಭದ ಪುಟದಲ್ಲಿ ಕಾದಂಬರಿಯ ಕುರಿತಾಗಿ, ಕಾರಂತರ ಕುರಿತಾಗಿ ಹಾಗೂ ಅನುವಾದದ ಕುರಿತಾಗಿ ಪ್ರಕಾಶಕರು ನೀಡಿರುವ ವಿವರಣೆಯಲ್ಲಿ ಕಾರಂತರು ಅಸಮಾನ್ಯ ಕಾದಂಬರಿಕಾರರಾಗಿ ಪ್ರಸಿದ್ಧರಾದರೂ ಇಂಗ್ಲಿಷ ಭಾಷೆಗೆ ಅವರ ಪ್ರಸ್ತುತ ಕಾದಂಬರಿಯೂ ಸೇರಿದಂತೆ ಅನುವಾದ ಗೊಂಡಿರುವುದು ಕೇವಲ ಆರು ಕಾದಂಬರಿಗಳು ಮಾತ್ರ ಎಂಬ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಮೂಲಕಾದಂಬರಿಯ ಶೀರ್ಷಿಕೆಗೂ ಇಂಗ್ಲಿಷ ಅನುವಾದದ ಶೀರ್ಷಿಕೇಗೂ ಮೇಲ್ನೋಟದಲ್ಲಿ ಅಷ್ಟೊಂದು ಹೊಂದಾಣಿಕೆಯಾಗಿರುವುದು ಕಂಡು ಬರುವುದಿಲ್ಲ. ಮೂಲಕಾದಂಬರಿಯಲ್ಲಿ ಒಟ್ಟು ೧೬ ಅಧ್ಯಾಯಗಳು ಇದ್ದು ಇಂಗ್ಲಿಷ ಅನುವಾದದಲ್ಲಿಯೂ ಎಲ್ಲ ೧೬ ಅಧ್ಯಾಯಗಳನ್ನು ಬಳಸಿಕೊಳ್ಳಲಾಗಿದೆ. ಕಾರಂತರ 'ಕುಡಿಯರ ಕೂಸು' ಕಾದಂಬರಿಯನ್ನು ೧೯೭೯ರಲ್ಲಿ ಅನುವಾದಿಸಿದ ಎಚ್. ವೈ. ಶಾರದಾ ಪ್ರಸಾದರವರೇ ಪ್ರಸ್ತುತ ಕಾದಂಬರಿಯನ್ನು ೧೯೯೭ರಲ್ಲಿ ಅನುವಾದಿಸಿದ್ದಾರೆ. ಒಂದು ಕಾಲದಲ್ಲಿ ಕೆಳದಿ ಅರಸರಿಗೆ ಪೋರ್ಚುಗೀಸರಿಂದ ಕುದುರೆಗಳನ್ನು, ಸಾಮಾನು ಸರಂಜಾಮುಗಳನ್ನು ತಂದು ಹಾಕುವ ಕೇಂದ್ರವಾಗಿದ್ದ ಬಸ್ರೂರು, ಅಲ್ಲಿನ ಅಂದಿನ ಇತಿಹಾಸದ ಚಿತ್ರಣವನ್ನು ನೀಡುವ ಕಾದಂಬರಿ ಇದಾಗಿದೆ. ಯಲ್ಲಿ ಮುಖ್ಯವಾಗಿ 'ಮಂಜುಳೆ' ಎಂಬ ವೇಶ್ಯೆಯ ಬದುಕಿನ ಎಳೆ ಎಳೆಗಳನ್ನು ಬಿಡಿಸಿ ತೋರಿಸುವ ಪ್ರಯತ್ನ ಮಾಡಿರುವ ಕಾರಂತರು ವೇಶ್ಯೆಯರ ಬದುಕಿನಲ್ಲಿ ಮೈಗಷ್ಟೇ ಪ್ರಾಮುಖ್ಯತೆಯನ್ನು ನೀಡದೇ ಅವರ ಮನಸ್ಸನ್ನು ಸಮಾಜ ಅರಿಯುವಂತೆ ಮಾಡಿದ್ದಾರೆ. ಒಂದು ರೀತಿಯಲ್ಲಿ ಮಂಜುಳೆಯ ಬದುಕಿನ ಆತ್ಮ ಕಥನದಂತೆ ಕಾದಂಬರಿ ಮೂಡಿ ಬಂದಿದೆ. ಅನುವಾದದ ಆರಂಭದಲ್ಲಿ ಪ್ರಕಾಶಕರು ಈ ವಿಚಾರವನ್ನು ಪ್ರಸ್ತಾಪಿಸಿದ್ದಾರೆ.

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೧ | ಅಧ್ಯಾಯ ೧, ಪುಟ. ೧೧<br>ಹಿಂದಣ ದಿನದ ಮಾಲಕಂಸವೋ, ಚಂದ್ರಕಂಸವೋ, ನಾರಾಯಣಿಯೋ, ಮತ್ತೊಂದು ರಾಗದ ನೆನಪು ಬರಿದು ಪೂರ್ವ ಸ್ವಪ್ನವನ್ನು ಅವನಲ್ಲಿ ಹುಟ್ಟಿಸಿತಾದರೆ ಆಗ ಮುಖದಲ್ಲಿ ಉಕ್ಕಿ ಬರುವ ಅಭಿಮಾನವೂ ಅಷ್ಟಿಷ್ಟಲ್ಲ. | Chapter 1, Page 3<br>The Singing ended, they compared the quality of the Malkauns or the Narayani with interpretations they had heard earlier. | ಸಂಗೀತದ ವಿವಿಧ ರಾಗಗಳನ್ನು ಉಲ್ಲೇಖಿಸಿರುತ್ತಾರೆ. ಮೂಲಕಾದಂಬರಿಯಲ್ಲಿ ಮಾಲಕಂಸ, ಚಂದ್ರಕಂಸ ಹಾಗೂ ನಾರಾಯಣಿ ಈ ಮೂರು ರಾಗಗಳನ್ನು ಹೆಸರಿಸಿದ್ದಾರೆ. ಅನುವಾದದಲ್ಲಿ ಮಾಲಕಂಸ ಹಾಗೂ ನಾರಾಯಣಿ ಎಂದು ಎರಡು ಪ್ರಕಾರಗಳನ್ನು ಮಾತ್ರ ಹೆಸರಿಸಲಾಗಿದೆ. |
| ೦೨ | ಅಧ್ಯಾಯ ೨, ಪುಟ. ೧೫<br>'ವೃದ್ಧನಾರೀ ಪತಿವೃತಾ' ಎನ್ನುವ ವಾಡಿಕೆಯ ಮಾತಿಗೆ ನಿತ್ಯ ಸುಮಂಗಲೆಯಾದ ಮಂಜುಳೆ ಅಪವಾದ ಎನಿಸಿರಲಾರಳು. | ಅನುವಾದಿಸಿರುವುದಿಲ್ಲ | ಕಟೂಕ್ತಿಯಾಗಿರುವ 'ವೃದ್ಧನಾರಿ ಪತಿವೃತ್ತಾ'ಯನ್ನು ಜನರು ಆಡುವ ಮಾತಿನಲ್ಲಿ ಬಳಸುತ್ತಾರೆ. 'ನಿತ್ಯ ಸುಮಂಗಲೆ' ಎಂಬುದು ಕೂಡ ವೇಶ್ಯೆಯರ ಕುರಿತಾದ ಹೇಳುವ ಮಾತು. ಇವುಗಳನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. ಪರ್ಯಾಯವಾದ ನುಡಿಗಟ್ಟುಗಳು ಉದ್ದಿಷ್ಟ ಭಾಷೆಯಲ್ಲಿ ಸಿಗಲಾರದಾಗ ಮೂಲಕಾದಂಬರಿಯ ಅನುವಾದ ಯಾಂತ್ರಿಕವಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೦೩ | ಅಧ್ಯಾಯ ೨, ಪುಟ. ೧೯<br>ಮುಖದಲ್ಲಿ ಮುಪ್ಪು ಕಾಣಿಸತೊಡಗಿದಾಗ, ತಲೆಯಲ್ಲಿ ನೆರಗೂದಲು ಒಂದೊಂದಾಗಿ ಮೂಡತೊಡಗಿದಾಗ, ತನ್ನ ಸಂಪತ್ತು ಊರ ನರಿನಾಯಿಗಳಿಗೆ ಹಂಚಿಹೋಗುವ ಬದಲು, ತನ್ನದೇ ವಂಶದ ಆ ಕೂಸಿಗಾದರೂ ಸಿಕ್ಕೀತಲ್ಲ ಎಂದು ಅನಿಸಿತು. | Chapter 3, Page 5<br>Here face ws becoming lined and her hair turning grey. Her house and money, would at least go to a child born in her own clan, instead of to dogs and jackals. | ಮೂಲಕಾದಂಬರಿಯಲ್ಲಿನ ಸಹಜವಾಗಿ ಮೂಡಿಬಂದಿರುವ ಈ ಸಾಲುಗಳು ಅನುವಾದದಲ್ಲಿ ಯಾಂತ್ರಿಕವೆನಿಸುತ್ತದೆ. 'ಮುಖದಲ್ಲಿ ಮುಪ್ಪು ಕಾಣಿಸತೊಡಗಿರಾಗ' 'ತಲೆಯಲ್ಲಿ ನೆರಗೂದಲು ಒಂದೊಂದಾಗಿ ಮೂಡ ತೊಡಗಿದಾಗ' – 'ನರಿ ನಾಯಿಗಳಿಗೆ ಹಂಚಿಹೋಗುವ ಬದಲು' ಈ ಮುಂತಾದ ವಿವರಣೆಗಳಲ್ಲಿರುವ ಮೂಲ ಭಾಷೆಯ ಸೊಗಡು ಅನುವಾದದಲ್ಲಿ ದೊರಯಲಾರದು. |
| ೦೩ | ಅಧ್ಯಾಯ ೩, ಪುಟ. ೨೯<br>ತಲೆಯೆತ್ತಿ ನಿಂತಿದ್ದ ಶಾರಿ ತನ್ನ ಕಾಲು ಬೆರಳನ್ನು ನೋಡುವ ಪ್ರಮೇಯ ಬಂತು. | Chapter 3, Page 9<br>Shari was aware of his presence but didnot raise her bowed head and instead Kept gazing at her toes. | 'ತನ್ನ ಕಾಲು ಬೆರಳನ್ನು ನೋಡುವ ಪ್ರಮೇಯ ಬಂತು' ಎಂದರೆ ನಾಚಿಕೆಯಾಗಿ ತಲೆತಗ್ಗಿಸಿದಳು ಎಂಬ ಅರ್ಥವನ್ನು ಕೊಡುವ ಈ ಸಾಲಿನ ಅರ್ಥವು ಅನುವಾದದಲ್ಲಿ ಸ್ಪಷ್ಟವಾಗುವುದಿಲ್ಲ. ಅನುವಾದದಲ್ಲಿ ಆಗುವ ಅರ್ಥವ್ಯತ್ಯಾಸವನ್ನು ಗುರುತಿಸಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೪ | ಅಧ್ಯಾಯ ೪, ಪುಟ. ೪೫<br>ಕಾಳಿಂಗಯ್ಯ ಎದ್ದು, ರೇಗಿ ನಿಂತ. "ನೆಸೆ ಕೊಟ್ಟ ನಾಯಿ ನೊಸಲು ನೆಕ್ಕತ್ತದೆ! ನಿನಗೆ ಇಷ್ಟೊಂದು ಪಾರುಪತ್ಯ ಕೊಟ್ಟದ್ದು ಯಾರು?" ಎಂದು ಕೇಳಿದ | Chapter 4, Page 16-17<br>Kalingayya was in a towering rage and shoGted. 'Oh, you seem to take too much liberty who gave you the authority over this house? | 'ನೆಸೆ ಕೊಟ್ಟ ನಾಯಿ ನೊಸಲು ನೆಕ್ಕುತ್ತದೆ! ಎಂಬುದು ಕನ್ನಡದಲ್ಲಿ ಬಳಸುವ ನುಡಿಗಟ್ಟಾಗಿದೆ. ಯಾರಿಗಾದರೂ ಸಲುಗೆ ಹೆಚ್ಚಾಗಿ ನೀಡಿದರೆ ಅವರು ನಮ್ಮನ್ನು ಮೀರಿ ನಿಲ್ಲುತ್ತಾರೆ. ವ್ಯತಿರಿಕ್ತವಾಗಿ ವರ್ತಿಸುತ್ತಾರೆ. ಎಂಬುದನ್ನು ವ್ಯಂಗ್ಯವಾಗಿ ಸೂಚಿಸುವ ಈ ನುಡಿಗಟ್ಟನ್ನು ಅನುವಾದದಲ್ಲಿ ಕೈಬಿಡಲಾಗಿದೆ. |
| ೦೫ | ಅಧ್ಯಾಯ ೫, ಪುಟ. ೬೧<br>ಮೂರು ವರ್ಷಗಳ ಕಾಲ ಆ ಮನೆಗೆ ಒಂಟಿ ಕಾವಲಾಗಿದ್ದ ಅವಳು, ನಿರಾಸೆಂಯ ಪರಮಾವಧಿಯನ್ನು ತಾಳಿದ್ದಳು. ಚಂದ್ರಿಯನ್ನು ಹೊತ್ತುಕೊಂಡು ಶಾರಿ ಮರಳಿ ಊರನ್ನು ಸೇರಿದಾಗ, ಆ ಒಂದು ಕೂಸು ಅವಳ ಬದುಕಿಗೆ ಪೂರ್ಣಚಂದ್ರವಾಗಿತ್ತು. | Chapter 5, Page 26<br>Three years of loneliness and despair disappeared when shari came back; Gangakka felt amply compensated to have the young Chandri back in her arms. | ಮೂಲಕಾದಂಬರಿಯಲ್ಲಿ ಬರುವ 'ಒಂಟಿ ಕಾವಲಾಗಿದ್ದ ಅವಳು' 'ಆ ಒಂದು ಕೂಸು ಅವಳ ಬದುಕಿಗೆ ಪೂರ್ಣ ಚಂದ್ರವಾಗಿತ್ತು'. ಇವುಗಳಲ್ಲಿನ ಭಾಷಾ ಸೌಂದರ್ಯ ಅನುವಾದದಲ್ಲಿ ಕಂಡು ಬರುತ್ತದೆ. ಅನುವಾದ ಸಾರಾಂಶ ರೂಪದಲ್ಲಿ ಬಂದಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೬ | ಅಧ್ಯಾಯ ೬, ಪುಟ. ೭೧<br>ಇವೆಲ್ಲ ಯಾರಿಗಾಗಿ – ಎಂಬ ವಿಚಾರ ಇದ್ದೇ ಇದೆ. ನನಗೆ ಮಕ್ಕಳಿಲ್ಲದ ಮೇಲೆ, ಇನ್ನಾರಿಗೂ ಅಲ್ಲ – ಅದು ನನ್ನ ಅಮ್ಮನಂತೆ ಹಳತಾಗಿ ಹೊತ್ತು ಹೋಗದ ಗಳಿಗೆಯಲ್ಲಿ ಇನ್ನೊಬ್ಬರ ರಾಮಾಯಣ ಮಾತನಾಡುತ್ತ ಕುಳಿತಿರುವ ಬದಲು, ನನ್ನ ಹನುಮಾಯಣ ನಾನೇ ಓದಿಕೊಳ್ಳಬಹುದು. | Chapter 6, Page 33-34<br>So I shall write - not for the children whom I do not have, or for the word, of which I am not too greatly enamoured, but for mysefl. For all I know, re-reading the account in my old age may help me pass my time, unlike my mother who had nothing better to do in her declining years than gossip | ಸಾರಾಂಶ ರೂಪದಲ್ಲಿ ಅನುವಾದಿಸಲಾಗದೆ. ಮೂಲಕೃತಿಯಲ್ಲಿ ಬರುವ 'ರಾಮಾಯಣ' 'ಹನುಮಾಯಣ'–ಸಾಂಕೇತಿಕವಾಗಿ ಬಳಸಿರುವ ಈ ಪದಗಳನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. 'ಹಳತಾಗಿ ಹೊತ್ತು ಹೋಗದ ಗಳಿಗೆಯಲ್ಲಿ' ಎಂದರೆ 'ವಯಸ್ಸಾದ ಮೇಲೆ ಸಮಯವನ್ನು ಕಳೆಯುವುದು ಕಷ್ಟ ಎನಿಸಿದಾಗ' ಎಂಬ ಅರ್ಥವನ್ನು ಕೊಡುವ ವಿಚಾರಗಳು ಅನುವಾದದಲ್ಲಿ ಕಂಡು ಬರುವುದಿಲ್ಲ. |
| ೦೭ | ಅಧ್ಯಾಯ ೭, ಪುಟ. ೧೦೧<br>'ಹೆಣ್ಣು ಗಂಡು ನವಿಲುಗಳು ಕೂಡಿ ನಲಿಯುವಾಗ, ಗಂಡು ಕುಣಿಯುವುದನ್ನು ಬಿಟ್ಟು, ಕುಕ್ಕುವುದಕ್ಕೆ ಹೋದಂತೆ ಅದು! ಹೆಣ್ಣು ಗಂಡು ಹರಿಣಗಳು | Chapter 7, Page 56<br>How would a peahen feel when, in wooing, the peacock gave up his dance? How would a doe which caressed the stag with its tongue feel when he butted her with his | ವೇಶ್ಯೆಯೊಬ್ಬಳ ಮನಸ್ಸಿನ ಇಂಗಿತವನ್ನು, ಅವಳ ಮನಸ್ಸಿನ ಭಾವನೆಗಳನ್ನು ಹೊರಹಾಕುವ ವಿಚಾರಗಳು ಇಲ್ಲಿವೆ. ಅವಳ ಬದುಕಿನಲ್ಲಿ ಕೇವಲ ಮೈಗಷ್ಟೆ ಮಹತ್ವವಲ್ಲ, ಅವಳ ಒಳಗಡೆ ನವಿರಾದ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಒಂದನ್ನೊಂದು ನೋಡುತ್ತಿದ್ದಾಗ, ಹರಿಣಿ ಗಂಡಿನ ಮೈಯನ್ನು ನೆಕ್ಕಿ, ತನ್ನ ಅದರ ತೋರಿಸಬಹುದು. ಗಂಡು ಪ್ರತಿಯಾಗಿ ಹಾಯುವುದಕ್ಕೆ ಬಂದರೆ? ನಮ್ಮ ಮನೆಗೆ ಅವರು ಅಷ್ಟು ಬಾರಿ ಬಂದಾಗಲೂ ಅವರ ಆಚರಣೆಯಲ್ಲಿ ಕಂಡುದು ಅಂಥ ರೀತಿಯನ್ನೇ. ನನ್ನ ದೇಹವನ್ನು ಹರಿದು ತಿನ್ನುವ ಹುಲಿಯಾಗುತ್ತಿದ್ದರೇ. ಹೊರತು, ಮನಸ್ಸಿನ ಆಳದಲ್ಲಿ ಒಂದು ನಯ, ನವಿರು, ಸೂಕ್ಷ್ಮವಾಗಲೀ, ವಿಲಾಸವಾಗಲೀ ಏನೇನೂ ಕಾಣಿಸಲಿಲ್ಲ. ಅವರಿಗೆ ನಾನು ಹೂವು, ಗಂಧ ಹಣ್ಣು, ಸೇರಿದ ಹರಿವಾಣವಾಗಿ ನೈವೇದ್ಯವಾಗುವ ಬದಲು, ಮಾರಿಯಮ್ಮನ ಮುಂದೆ ಕಡಿಯುವ ಕುರಿಯಾಗಬೇಕಾಗುತ್ತಿತ್ತು. ಬರಿಯ ಮಾಂಸದ ಹಸಿವೊಂದೇ ಅವರದ್ದು – ಎಂಬ ನಿರಾಶೆ ನನ್ನದು. | antlers? That is how I felt whenever he came to me. He sprang on me as a tiger on its prey. There was no tenderness, no winning words whispered in the ear, no velvet touch or a desire to feel through the fingers the softness of my body. I thought I would be like a baskel - of - bright and fragrant flowers offered in worship. Instead I was the goat - sacrificed to the demon. He was a hungry animal and I was only a lump of flesh. From the moment he set foot in my rooms he acted as if I was someone without a mind and feelings. | ಮನಸ್ಸೊದಿದೆ, ಅದಕ್ಕೆ ಬೆಲೆ ಕೊಡದೇ ಕೇವಲ ಅವಳನ್ನು ಬೋಗದ ವಸ್ತುವನ್ನಾಗಿ ಬಳಸಿಕೊಂಡವರ ಬಗೆಗೆ ನೊಂದುಕೊಂಡು ವ್ಯಕ್ತ ಪಡಿಸುವ ವಿಚಾರಗಳು ಅನುವಾದದಲ್ಲಿಯೂ ಕೂಡ ಮೂಲಕೃತಿಗೆ ತೀರ ಹತ್ತಿರವಾಗಿ ಮೂಡಿಬಂದಿದೆ. ಅನುವಾದದಲ್ಲಿ "I was someone without a mind and feelings' ಎಂಬ ಸೇರ್ಪಡೆಯಿಂದಾಗಿ ಮೂಲಕೃತಿಯ ಉದ್ಧೃತ ಭಾಗದ ಅರ್ಥ ಹೆಚ್ಚು ಸ್ಪಷ್ಟವಾಗುತ್ತದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೦೮ | ಅಧ್ಯಾಯ ೭, ಪುಟ. ೧೦೬<br>ಏನೋ ಸಂಸ್ಕೃತಿ ಶ್ಲೋಕ ಹೇಳಿ "ಈ ವರ್ಷ ನೂರು ಕೊಳಗ ಮಳೆ ಸಮುದ್ರಕ್ಕೆ, ಹದಿನಾರುವರೆ ಕೊಳಗ ಭೂಮಿಗೆ. ಅದರಲ್ಲಿ ಮುಕ್ಕಾಲು ಮೂರು ವೀಸ ಘಟ್ಟಕ್ಕೆ, ಬೆಟ್ಟಕ್ಕೆ, ಕೇವಲ ಕಾಲು ಅಂಶ ಬಯಲಿಗೆ, ತೋಟಕ್ಕೆ ಎನ್ನುತ್ತಿದ್ದರು. | Chapter 7, Page 59<br>He read some sanskrit verse and said in Kannada; "This year the seas will receive a hundred measures of rain, sixteen measures will fall on the land, out of which three - fourths will be wasted on mountains and forests." | ಪ್ರತಿವರ್ಷವೂ ಯುಗಾದಿ ಹಬ್ಬ ಬಂದಾಗ ಕಲಿ ಪುರುಷ ಒಂದು ದಿಕ್ಕನ್ನು ಹಿಡಿದು ಹೊರಡುತ್ತಾನೆ ಎಂಬ ನಂಬಿಕೆ ವೈದಿಕ ಸಂಪ್ರದಾಯದಲ್ಲಿ ಇದೆ. ಹಾಗೂ ಈ ಕಲಿಪುರಷ ಹೋದ ದಿಕ್ಕನ್ನು ಅನುಸರಿಸಿ ಇಡೀ ವರ್ಷದ ಮಳೆಬೆಳೆಗಳನ್ನು ನಿರ್ಧರಿಸುವ ಕ್ರಮವೂ ಇದೆ. ಮಳೆಯನ್ನು ಅಳತೆಯ ಮಾಪನವಾದ 'ಕೊಳಗ'ದಿಂದ ಅಳೆದಿರುವುದನ್ನು ಮೂಲಕೃತಿಯಲ್ಲಿ ಕಾಣಬಹುದು. ಅದಕ್ಕೆ ಅನುವಾದದಲ್ಲಿ 'measures' ಎಂದು ಪರ್ಯಾಪದವನ್ನು ನೀಡಲಾಗಿದೆ. ಭಿನ್ನವಾದ ಸಾಂಸ್ಕೃತಿಕ ಪರಿಸರದ ಓದುಗರಿಗೆ ಯುಗಾದಿಯ ಸಂದರ್ಭದಲ್ಲಿ ಭವಿಷ್ಯದ ಮಳೆ ಬೆಳೆಯನ್ನು ನಿರ್ಧರಿಸುವ ಈ ವಿಚಾರಗಳು ಸ್ಪಷ್ಟವಾಗಿ ಅರ್ಥವಾಗಲಿಕ್ಕಿಲ್ಲ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
| --- | --- | --- | --- |
| ೦೯ | ಅಧ್ಯಾಯ ೮, ಪುಟ. ೧೦೯<br>ಹೊನ್ನು, ಮಣ್ಣು, ಹೆಣ್ಣಿನ ಋಣಗಳೂ ಅದೃಷ್ಟವೊಲಿದರೆ ಉಂಟು, ಇಲ್ಲವಾದರೆ ಇಲ್ಲ. | Chapter 8, Page 62<br>Wealth, land and women goto the lucky, not to others. | ಕನ್ನಡದ ಭಾಷಿಕ ಪರಿಸರದಲ್ಲಿ ಹೊನ್ನು ಹೆಣ್ಣು ಮಣ್ಣಿನ ಋಣದ ಕುರಿತಾಗಿ ಹೇಳುತ್ತಾರೆ. ಸಾಮಾನ್ಯವಾಗಿ ಅದೃಷ್ಟವೊಲಿದರೆ ಮಾತ್ರ ಇವು ನಮ್ಮ ಪಾಲಿಗೆ ದಕ್ಕುತ್ತದೆ ಎಂಬುದು ಸಾಮಾನ್ಯವಾಗಿ ಎಲ್ಲರೂ ನಂಬಿರುವ ವಿಚಾರವಾಗಿದೆ. ಆದರೆ ಈ ವಿಚಾರಗಳು ತೀರಾ ಭಿನ್ನವೇ ಆದ ಇನ್ನೊಂದು ಸಾಂಸ್ಕೃತಿಕ ಪರಿಸರದಲ್ಲಿ ಜಾಗತಿಕ ಮಟ್ಟದಲ್ಲಿ ಎಷ್ಟೊಂದು ಪರಿಣಾಮಕಾರಿಯಾಗಿ ಅರ್ಥವಾಗಬಲ್ಲದು ಎಂಬುದು ಚರ್ಚಾಸ್ಪದ ವಿಷಯವಾಗಿದೆ. ಅನುವಾದದಲ್ಲಿ ಯಾಂತ್ರಿಕತೆಯನ್ನು ಕಾಣಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೦ | ಅಧ್ಯಾಯ ೮, ಪುಟ. ೧೧೪<br>ನನ್ನ ಗೆಳತಿಯರು 'ಈತ ಅಂಗದೇಶದರಸು', 'ಈತ ವಂಗದೇಶವ', ಈತ ಕುಂತಳದವ', 'ಮತ್ತೊಬ್ಬ ವುತ್ತೆಲ್ಲಿನವನೋ' ಎಂದು ಅವರವರ ಬಿರುದುಗಳನ್ನು ತಿಳಿಸುತ್ತಲೇ ಇದ್ದರು. | ಅನುವಾದಿಸಿರುವುದಿಲ್ಲ. | ಸ್ವಪ್ನದಲ್ಲಿ ಕಂಡ ದ್ರಶ್ಯವನ್ನು ವಿವರಿಸುವ ಸಂದರ್ಭದಲ್ಲಿ ಯಕ್ಷಗಾನದಲ್ಲಿ ವಿವಿಧ ದೇಶದ ರಾಜರುಗಳ ಪಾತ್ರವಹಿಸಿರುವುದನ್ನು ಗೆಳತಿಯರು ಮಂಜುಳೆಗೆ ಪರಿಚಯಿಸಿದಂತೆ ವಿವರಿಸಲ್ಪಟ್ಟಿರುವ ಈ ಸಂದರ್ಭವನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. |
| ೧೧ | ಅಧ್ಯಾಯ ೯, ಪುಟ. ೧೩೪<br>ಇಬ್ಬರಿಗೂ ಒಬ್ಬರೇ ಗುರುಗಳಲ್ಲವೇ! ವೆಂಕಟು ತಾನಾಗಿಯೇ, 'ಕೋಯಲಿಯ ಕುಂಕಾ ಸುನಾವೇ' ಚೀಸ್ ಹಾಡು ಎಂದ | Chapter 9, Page 78<br>As we had learnt from the same teacher, it did not surprise me that Venkatu suggested I sing 'Koylaliya Koonka sunave' in sohini. | ಹಿಂದಿಯಲ್ಲಿರುವ ಹಾಡಿನ ಸಾಲುಗಳನ್ನು ಇಂಗ್ಲಿಷನಲ್ಲಿ ಯಥಾಪ್ರಕಾರವಾಗಿ ಅನುವಾದಿಸಲಾಗಿದೆ. 'ಚೀಸ್' ಎಂಬುದಕ್ಕೆ 'sohini' ಎಂದು ಪರ್ಯಾಯ ಪದವನ್ನು ಬಳಸಲಾಗಿದೆ. |
| ೧೨ | ಅಧ್ಯಾಯ ೧೦, ಪುಟ. ೧೫೦<br>'ಹೌದಯ್ಯಾ ವೇಷಧಾರಿಗಳೇ! ನಿಮಗೆ ಒಂದು ಕೇಳುತ್ತೇನೆ. ಅರ್ಜುನನಾಗಿ ಬಂದಿರಿ, | Chapter 10, Page 84<br>"Oh so-and-so, when, as Arjuna, you approached Chirtrangada, I thought you | ಕರಾವಳಿ ಕರ್ನಾಟಕದ ಜಾನಪದ ಕಲೆಯಾಗಿರುವ ಯಕ್ಷಗಾನದ ಪ್ರಸಂಗದ ಉಲ್ಲೇಖ ಇದಾಗಿದೆ. ಇದು ಕರಾವಳಿ ಕರ್ನಾಟಕದಲ್ಲಿ ಪ್ರಚಲಿತವಿರುವ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಚಿತ್ರಾಂಗದೆಯ ಹತ್ತಿರ ನೀವು ಅದೇನು ಅಸಂಬದ್ಧ ಮಾತನಾಡಿದ್ದು? ಯಾರು ಚಿತ್ರಾಂಗದೆ? ಅರ್ಜುನನಿಗೆ ತಕ್ಕ ಹೆಂಡತಿ ಅವಳು ಎಂಬುದು ಗೊತ್ತಿರಲಿಲ್ಲವೆ? ಅರ್ಜುನ ತನ್ನ ಸ್ಥಾನದ ತೂಕ ಮರೆತನೋ" ಎಂದು ಕೇಳಿಯೇ ಬಿಡುತ್ತಾರೆ. | would lower your voice as any person of breeding does in a lady's presence" | ಪೌರಾಣಿಕ ಸಾಂಸ್ಕೃತಿಕ ವಿಚಾರವೂ ಹೌದು. ಮೂಲಕಾದಂಬರಿಯಲ್ಲಿ ಬರುವ 'ಚಿತ್ರಾಂಗದೆಯ ಹತ್ತಿರ ನೀವು ಅದೇನು ಅಸಂಬದ್ಧ ಮಾತನಾಡಿದ್ದು?' ಯಾರು ಚಿತ್ರಾಂಗದೆ? ಅರ್ಜುನನಿಗೆ ತಕ್ಕ ಹೆಂಡತಿ ಅವಳು. ಎಂಬುದು ಗೊತ್ತಿರಲಿಲ್ಲವೇ? ಅರ್ಜುನ ತನ್ನ ಸ್ಥಾನದ ತೂಕ ಮರೆತನೋ' ಎಂದು ಪಾತ್ರಧಾರಿಯ ಪಾತ್ರದ ಕುರಿತಾಗಿ ನಡೆಸುವ ವಿಶ್ಲೇಷಣೆ ಅನುವಾದದಲ್ಲಿ ಬಂದಿಲ್ಲ. ಒಟ್ಟು ಸಾರಾಂಶ ರೂಪದಲ್ಲಿ ನೀಡಲಾಗಿದೆ. |
| ೧೩ | ಅಧ್ಯಾಯ ೧೧, ಪುಟ. ೧೬೯ ದೀವಾಳಿಗೆ ದಿನ ನಾಳೆ ಎಂದಾಗ ನನ್ನ ಮನಸ್ಸಿನಲ್ಲಿ ಕತ್ತಲು ಕವಿದಿದ್ದರೆ ಆಶ್ಚರ್ಯವಿಲ್ಲ. ಕೆಲಸದ ಸುಬ್ಬಿ ಬಿಸಿ ನೀರಿನ ಹಂಡೆ ಉಜ್ಜಿ, ಹೊಳಪಿಸಿ ಒಲೆಯ ಮೇಲಿಟ್ಟು ಸಿಂಗರಿಸಿ, ನೀರು ತುಂಬಿಸಿ | Chapter 11, Page 94 The Festival of Lights found me in a rather gloomy frame of mind. My maid had gone through the ceremony of washing and polishing the hot-water cauldron, | ದೀಪಾವಳಿ ಹಬ್ಬದ ಆಚರಣೆಯ ಕುರಿತಾದ ವಿವರ ಇಲ್ಲಿ ಇದೆ. ಒಂದು ಪ್ರದೇಶದ ಸಾಂಸ್ಕೃತಿಕತೆಯನ್ನು ವ್ಯಕ್ತಪಡಿಸುವ ಈ ವಿಚಾರಗಳು ಅನುವಾದದಲ್ಲಿ ಸರಳವಾದ ಅನುವಾದವಾಗಿ ಮೂಡಿಬಂದಿದೆ. ಹಬ್ಬ ಹರಿದಿನಗಳು ಒಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | – ಎಲೆ ಅಡಿಕೆ ತಿನ್ನಲು ಹರಿವಾಣ ಎಳೆದುಕೊಂಡು "ಅಕ್ಕ, ನಾಳೆ ಮೀಯುವುದಿದೆ; ಎಷ್ಟು ಹೊತ್ತಿಗೆ ಎಬ್ಬಿಸಲಿ?" ಎಂದು ಕೇಳಿದಳು, "ಬೂದು ನೀರು ಮೀಯುವುದಕ್ಕೆ ಅಲ್ಲವೇ! ಗಡಿಬಿಡಿಯೇನು? ಇಬ್ಬರಿರುವುದು ಮನೆಯಲ್ಲಿ. ಮೊದಲು ನಿನ್ನ ಸ್ನಾನ ಮುಗಿಯಲಿ! ಆ ಮೇಲೆ ನನ್ನದು" ಎಂದೆ. | decorating it with flowers, and filling it with fresh water for the next day. Putting a plug of betel leaf in her month she announced that she would wake me up early the next morning for the ritual oil-bath. I had countered her announcement with! "What is the hurry? we are only two in this house; you and I. You finish your bath first and I shall follow' | ಪ್ರದೇಶದಲ್ಲಿ ತಮ್ಮದೇ ಆದ ಸಾಂಸ್ಕೃತಿಕತೆಯನ್ನು ಹೊಂದಿರುವುದರಿಂದ ಇನ್ನೊಂದು ಪ್ರದೇಶಕ್ಕೆ ಅದನ್ನು ಪರಿಚಯಿಸಲು ಇರುವ ಭಾಷೆಯ ಮಿತಿಯನ್ನು ಗುರುತಿಸಬಹುದಾಗಿದೆ. ಇಲ್ಲಿ ಬರುವ 'ನಾಳೆ ಮೀಯುವುದಿದೆ', "ಬೂದು ನೀರು ಮೀಯುವುದಕ್ಕೆ ಅಲ್ಲವೇ" ಮುಂತಾದ ವಿಚಾರಗಳು ಹಬ್ಬದ ಆಚರಣೆಯನ್ನು ವ್ಯಕ್ತಪಡಿಸುವ ಸಂಸ್ಕೃತಿವಾಹಕ ಸಾಲುಗಳಾಗಿದ್ದು ಇದನ್ನು ಅನುವಾದಿಸಲಾಗಿಲ್ಲ. |
| ೧೪ | ಅಧ್ಯಾಯ ೧೨, ಪುಟ. ೧೯೦–೧೯೧<br>ಒಂದು ಗಾಡಿಯಂತು ಅವರ ಮನೆಯದೇ ಗಾಡಿ. ಆ ಎತ್ತುಗಳನ್ನು ಕಂಡೇ ಆಶ್ಚರ್ಯವಾಯಿತು. ನನ್ನನ್ನು ಕರೆಯಿಸಿದವರ ದೊಡ್ಡಸ್ತಿಕೆ, ಗಾಡಿಯ ಚಕ್ರ, ಬಿಳಿ ಎತ್ತಿನ ಅಂಥ ಒಂದು ಜೋಡಿ, ಅವಕ್ಕೆ | Chapter 12, Page 109<br>One was Nanjappa's own and had been excellently furnished, the other was a hired one. Nanjappa's cart had rather large wheels and was pulled by a pair of | ಎತ್ತಿನ ಗಾಡಿಯ ವರ್ಣನೆಗೆ ಸಂಬಂಧಪಟ್ಟ ಈ ವರ್ಣನೆ ಅನುವಾದದಲ್ಲಿಯೂ ಮೂಲವನ್ನೇ ಹೆಚ್ಚಾಗಿ ಹೋಲುತ್ತದ್ದಾರೂ, ಆ ಗಾಡಿಯ ವರ್ಣನೆಯಿಂದಾಗಿ ಅದು ಶ್ರೀಮಂತಿಕೆಯನ್ನು ಅಳೆಯುವ ಒಂದು ಸಾಧನವಾಗಿ ಅನುವಾದದಲ್ಲಿ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | ಕಟ್ಟಿದ ಘಂಟೆ – ಇವನ್ನು ಕಂಡರೇ ತಿಳಿಯಬೇಕು. ಗಾಡಿಯೊಳಗಡೆ ದಪ್ಪಕ್ಕೆ ಹುಲ್ಲು ಹಾಸಿ, ಅದರ ಮೇಲೆ ಎರಡೆರಡು ಮೆತ್ತನೆಯ ಮುಂಡುಕದ ಚಾಪೆಗಳನ್ನು ಹಾಸಿದ್ದರು. ಒಂದರಲ್ಲಿ ನಾನು ಮತ್ತು ಪದ್ಮನಾಭ ಕುಳಿತೆವು ಇನ್ನೊಂದರಲ್ಲಿ ಶಿವಪ್ಪ ಮತ್ತು ದಾಮು ಹೋಗಿ ಕುಳಿತರು. | white bullocks of majestic build and gait. The bells round their necks and the cloths over their backs were impressive. The sitting area was cushioned with a heavy layer of straw, over which soft carpets had been spread. Shivappa and Domodara got into the hired cart, leaving the luxurious one to Padmanabha and me. | ಮೂಡಿಬಂದಿಲ್ಲ. ಮೂಲದ ವರ್ಣನೆಯಲ್ಲಿ ಬರುವ 'ಆ ಎತ್ತುಗಳನ್ನು ಕಂಡೇ ಆಶ್ಚರ್ಯವಾಯಿತು'. 'ನನ್ನನ್ನು ಕರೆಯಿಸಿದವರ ದೊಡ್ಡಸ್ತಿಕೆ, ಗಾಡಿಯ ಚಕ್ರ, ಬಿಳಿ ಎತ್ತಿನ ಅಂಥ. ಒಂದು ಜೋಡಿ, ಅವಕ್ಕೆ ಕಟ್ಟಿದ ಘಂಟೆ – ಇವನ್ನು ಕಂಡರೇ ತಿಳಿಯಬೇಕು" – ಎತ್ತಿನ ಗಾಡಿಯ ವೈಭವವನ್ನು ವರ್ಣಿಸುವ, ಜತೆಗೆ ಅದರ ಮಾಲಿಕರ ಸ್ಥಾನಮಾನವನ್ನು ಪ್ರತಿನಿಧಿಸುವ ಈ ಸಾಲುಗಳನ್ನು ಅನುವಾದಿಸಿಲ್ಲ. |
| ೧೫ | ಅಧ್ಯಾಯ ೧೩, ಪುಟ. ೨೦೯<br>ಅದು ಹೆಗ್ಗಂಡೊಂದು ಸಂಧಿಸಿದಾಗ ದೇಹ ಸುಖವೇ ಸರ್ವಸ್ವ ಎಂಬ ಭ್ರಮೆಯೂ ಆಗಿತ್ತು. ಒಲಿಸುವ ನಾಟಕವನ್ನೂ ಅರಿಯದಂಥ ಒಂದು ಗಂಡಿಗೆ ಬಲಿಯಾದೆ. | Chapter 13, Page 122<br>A he - man had only to make an advance and I would capitulate. But my dominant feeling at the time was of physical exuberance. one of the men had not even bothered to court me. | ಮೂಲಕಾದಂಬರಿಯಲ್ಲಿ ಬರುವ ಹೆಗ್ಗಂಡು ಎಂಬ ಪದಕ್ಕೆ ಅನುವಾದದಲ್ಲಿ ಪರ್ಯಾಯವಾಗಿ 'he-man' ಎಂದು ಬಳಸಲಾಗಿದೆ. ಇದು ಔಚಿತ್ಯ ಪೂರ್ಣವಾದ ಪರ್ಯಾಯ ಪದವಾಗಿದೆ. 'ಒಲಿಸುವ ನಾಟಕವನ್ನು ಅರಿಯದಂಥ ಒಂದು |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಗಂಡಿಗೆ ಬಲಿಂಯಾದೆ' ಎಂಬ ಮೂಲಕಾದಂಬರಿಯಲ್ಲಿನ ಸಾಲನ್ನು 'One of the men had not even bothered to court me' ಎಂದು ಅನುವಾದಿಸಲಾಗಿದ್ದು ಇಲ್ಲಿ ಮೂಲದಲ್ಲಿನ ಸಾಲುಗಳು ನೀಡುವ ಅರ್ಥಕ್ಕೂ ಅನುವಾದದಲ್ಲಿನ ಸಾಲುಗಳು ನೀಡುವ ಅರ್ಥಕ್ಕೂ ವ್ಯತ್ಯಾಸವಿರುವುದನ್ನು ಗಮನಿಸಬಹುದಾಗಿದೆ. |
| ೧೬ | ಅಧ್ಯಾಯ ೧೩, ಪುಟ. ೨೧೧<br>ನನ್ನ ಪಾಲಿನ ದೈವವಾದ ಉಳ್ಳೂರರಿಂದ ಪತ್ರ ಬಂದಿತು. | Chapter 13, Page 123<br>A letter came from Ullor which said..... | ಮೂಲಕಾದಂಬರಿಯಲ್ಲಿ ಬರುವ ಈ ಸಾಲಿನಲ್ಲಿ 'ನನ್ನ ಪಾಲಿನ ದೈವವಾದ' ಎಂಬ ವಿಚಾರವನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. ಅನುವಾದದಲ್ಲಿ ಯಾಂತ್ರಿಕತೆಯನ್ನು ಕಾಣಬಹುದಾಗಿದೆ. |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| ೧೭ | ಅಧ್ಯಾಯ ೧೪, ಪುಟ. ೨೩೧ ಮಾಮೂಲಿನಂತೆ ಕೃಷ್ಣನಿಗೆ ಶಂಖ, ಚಕ್ರ, ಗದಾ, ಪದ್ಮ ಕೊಡದೆ ಮನಸ್ಸನ್ನು ಮಾತಾಡಿಸುವ ಒಂದು ಸಾಧನ ಕೊಳಲು ಎಂದು ಕೊಟ್ಟರು. | Chapter 14, Page 136 'I have not seen God or known anyone who has. But I visualise hime not as Vishnu who holds the disc, the mace, the lotus and the conch in his four hands but as Krishna who holds the flute'. | ಮೂಲಕಾದಂಬರಿಯಲ್ಲಿನ 'ಮನಸ್ಸನ್ನು ಮಾತಾಡಿಸುವ ಒಂದು ಸಾಧನ ಕೊಳಲು' ಎಂಬ ಕೊಳಲಿನ ಗುಣ ವಿಶೇಷವನ್ನು ಹೇಳುವ ಈ ಸಾಲನ್ನು ಅನುವಾದದಲ್ಲಿ ಕೈ ಬಿಡಲಾಗಿದೆ. |
| ೧೮ | ಅಧ್ಯಾಯ ೧೫, ಪುಟ. ೨೫೧ ಮೈ ಮಾರಬೇಕು; ಮನವನ್ನಲ್ಲ ಅಂಥ ಕಸುಬು ನಮ್ಮದು – ಎಂಬ ಮಾತು. ಸುದೈವಕ್ಕೆ ಆ ಕಸುಬು ನನಗೆ ಬೇಡವಾಗಿತ್ತು. ಮೈ ಬೇರೆಯೇ, ಮನ ಬೆರೆಯೇ – ಎಂಬ ಗಳಿಗೆ ಬಾರದಿರಲಿ ಎಂಬ ಪ್ರಾರ್ಥನೆ ನನ್ನದು. | Chapter 15, Page 144 Was woman merely the object, the receptacle? My mother's words seemed so sound - that my mind was to be my own even if I had no offer my body to others. | ಮಂಜುಳೆಯು ಇತರ ವೇಶ್ಯೆಯರಿಗಿಂತ ತನ್ನ ವೃತ್ತಿಯ ಬಗ್ಗೆ ಭಿನ್ನವಾದ ಭಾವನೆಯನ್ನು ಹೊಂದಿದವಳಾಗಿದ್ದಳು ಎಂಬುದನ್ನು ಸಾಭೀತುಪಡಿಸುವ ಈ ಸಾಲುಗಳು ಅನುವಾದದಲ್ಲಿ ಈ ವಿಚಾರವನ್ನು ಸಂಪೂರ್ಣವಾಗಿ ಧ್ವನಿಸುವುದಿಲ್ಲ. 'ಮೈ ಬೇರೆಯೇ, ಮನ ಬೇರೆಯೇ ಎಂಬ ಗಳಿಗೆ ಬಾರದಿರಲಿ' ಎಂದು ಪ್ರಾರ್ಥಿಸುವ ಮಂಜುಳೆಯ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಮನದಾಳದ ಇಂಗಿತ ಅನುವಾದದಲ್ಲಿ ಪರಿಣಾಮಕಾರಿಯಾಗಿ ವ್ಯಕ್ತವಾಗುವುದಿಲ್ಲ. |
| ೧೯ | ಅಧ್ಯಾಯ ೧೫, ಪುಟ. ೨೫೨ "ಇದು ಆನಂದದ ಕಣ್ಣೀರು! ಸಮಾಧಿ ಸ್ಥಿತಿ ಹೇಗಿದ್ದೀತು – ಎಂದು ತೋರಿಸಿದ ಗುರು ನೀನು ಎಂದರು. | Chapter 15, Page 145 'We had heard about tears of joy. Now we know what they are. Majula, you have made use experience samadhi. | ಕನ್ನಡ ಹಾಗೂ ಇಂಗ್ಲೀಷ ಭಾಷೆಗಳ ರಚನಾ ಕ್ರಮದಲ್ಲಿ ವ್ಯತ್ಯಾಸವಿರುವುದನ್ನು ಅನುವಾದದ ಈ ಸಾಲುಗಳಿಂದ ತಿಳಿಯಬಹುದಾಗಿದೆ. ಲಕ್ಷಣ ತೀರ್ಥಸ್ವಾಮಿಗಳ ಈ ಮಾತುಗಳಲ್ಲಿ ಬಳಸಿರುವ 'We' ಎಂಬ ಇಂಗ್ಲೀಷ ಭಾಷೆಯ ನಾಮಪದ 'ನಾನು' ಎಂಬ ಅರ್ಥದಲ್ಲಿ ಬಳಸಲ್ಪಟ್ಟಿದ್ದರೂ 'ನಾವು' ಎಂಬ ಅರ್ಥವನ್ನೇ ಧ್ವನಿಸುತ್ತದೆ. ಕನ್ನಡ ಭಾಷೆಯಲ್ಲಿ ಸ್ವಾಮಿಗಳು ಮಾತನಾಡುವಾಗ 'ನಾವು' ಎಂದು ಬಳಸುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ವಿಚಾರ. ಇದು ಭಾಷೆಯ ಮಿತಿಯನ್ನು ತೋರಿಸುತ್ತದೆ. 'ಸಮಾಧಿ' ಎಂಬ |

| ಕ್ರ.ಸಂ. | ಮೂಲದಲ್ಲಿನ ವಿವರಣೆ | ಅನುವಾದದಲ್ಲಿನ ವಿವರಣೆ | ವಿಶ್ಲೇಷಣೆ |
|---|---|---|---|
| | | | ಶಬ್ಧಕ್ಕೆ 'samadhi' ಎಂದೇ ಬಳಸಲಾಗಿದೆ. |
| ೨೦ | ಅಧ್ಯಾಯ ೧೬, ಪುಟ. ೨೬೧<br>ಆ ಹುಡುಗಿಗೆ ಈ ಕತೆಯು ಚರ್ಮವನ್ನು ಆಕಳ ಚಕಳ ಗೊಳಿಸಿದ್ದರಿಂದ ಮುಂದೇನು, ಮುಂದೇನು – ಎಂದು ಓದತೊಡಗಿದಳು. | Chapter 16, Page 149<br>but the book gave her a new perspective..... | ಮೂಲಕಾದಂಬರಿಯಲ್ಲಿ ಬರುವ 'ಚರ್ಮವನ್ನು ಆಕಳ–ಚಕಳಗೊಳಿಸಿದ್ದರಿಂದ' ಎಂಬ ಸಾಲನ್ನು ಅನುವಾದಿಸಲಾಗಿಲ್ಲ. ಭಾಷಾಂತರದಲ್ಲಿ ಭಾಷೆಯ ಮಿತಿಯನ್ನು ಗಮನಿಸಬಹುದಾಗಿದೆ. |
| ೨೧ | ಅಧ್ಯಾಯ ೧೬, ಪುಟ. ೨೬೩<br>"ಉಳ್ಳೂರು ಲಕ್ಷ್ಮಮ್ಮನ ಕತೆ ಓದಿದೆಯಲ್ಲ; ಇನ್ನೊಬ್ಬರಾಗಿದ್ದರೆ ಹಿಡಿಸೂಡಿ ಹಿಡಿದು ನಿನ್ನ ಅಜ್ಜಿಯನ್ನು ಓಡಿಸುತ್ತಿದ್ದರು. ಆ ಕತೆ ನಿಜವಿರಬಹುದೇ?" | Chapter 16, Page 150<br>'Do you think it possible that ulloor's wife could openly have so acknowledged his relationship with grand - aunt? | ಮೂಲಕಾದಂಬರಿಯಲ್ಲಿನ ವಿಚಾರಗಳನ್ನು ಯಥಾವತ್ತಾಗಿ ಅನುವಾದದಲ್ಲಿ ಪಡಿಮೂಡಿಸುವುದು ಭಾಷೆಯ ಮಿತಿಯಿಂದಾಗಿ ಕಷ್ಟ ಸಾಧ್ಯ ಎಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. 'ಇನ್ನೊಬ್ಬರಾಗಿದ್ದರೆ ಹಿಡಿಸೂಡಿ ಹಿಡಿದು ನಿನ್ನ ಅಜ್ಜಿಯನ್ನು ಓಡಿಸುತ್ತಿದ್ದರು'; ಎಂಬ ಮಾತುಗಳನ್ನು ಅನುವಾದಿಸಲಾಗಿಲ್ಲ. |

ಇದುವರೆಗೆ ಕಾರಂತರ ಮೂಲಕಾದಂಬರಿಗಳು ಮತ್ತು ಅವುಗಳ ಇಂಗ್ಲಿಷ ಅನುವಾದಗಳನ್ನು ತೌಲನಿಕವಾಗಿ ಪರಾಮರ್ಶಿಸಿ, 'ಭಾಷೆ ಮತ್ತು ಸಂಸ್ಕೃತಿಗಳ ತಾತ್ವಿಕ ಸಂಬಂಧಗಳ' ಹಿನ್ನಲೆಯಲ್ಲಿ ಭಾಷಾಂತರ ಸಮಸ್ಯೆಗಳೇನೆಂಬುದನ್ನು ವಿಚಾರ ಮಾಡಲಾಗಿದೆ. ಅನುವಾದಗೊಂಡ ಪ್ರತಿಯೊಂದು ಕಾದಂಬರಿಗಳ ಆಯ್ದ ಭಾಗಗಳನ್ನಷ್ಟೆ ಮೂಲದೊಂದಿಗೆ ತುಲನೆ ಮಾಡಿನೋಡಲಾಗಿದೆ. ಇಂತಹ ಅನೇಕ ಉದಾಹರಣೆಗಳು ಕಾದಂಬರಿಗಳುದ್ದಕ್ಕೂ ಕಂಡು ಬರುತ್ತವೆ. ಬಹುತೇಕ ಅನುವಾದಿತ ಕಾದಂಬರಿಗಳಲ್ಲಿ ಆಯಾ ಕಾದಂಬರಿಗಳ ಆಶಯಗಳ ಪ್ರತಿಪಾದನೆಗೆ ಹೆಚ್ಚಿನ ಒತ್ತು ನೀಡಲಾಗಿದೆ. ಆದರೆ ಅದಕ್ಕೆ ಪೂರಕವಾದ ಸಾಂಸ್ಕೃತಿಕ ವಿವರಗಳ ಕೊರತೆ ಎದ್ದು ಕಾಣುತ್ತದೆ. ಯಾವುದೇ ಒಂದು ಕಾದಂಬರಿ ಕಲಾತ್ಮಕ ಕೃತಿ ಎನಿಸಿಕೊಳ್ಳಬೇಕಾದರೆ ಆಶಯದ ಜೊತೆಗೆ ಪೂರಕ ಸಾಂಸ್ಕೃತಿಕ ವಿವರಗಳು ಸನ್ನಿವೇಶ ಚಿತ್ರಣಗಳು ಮುಖ್ಯವಾಗಿರುತ್ತವೆ. ಈ ಹಿನ್ನಲೆಯಲ್ಲಿ ಅನುವಾದಿತ ಕಾದಂಬರಿಗಳ ಮೂಲಕೃತಿಗಳಿಗೆ ಎಷ್ಟರಮಟ್ಟಿಗೆ ನಿಷ್ಠವಾಗಿವೆ ಎನ್ನುವುದು ಚರ್ಚಾಯೋಗ್ಯ ವಿಷಯವಾಗಿದೆ.

ಕಾರಂತರ ಕಾದಂಬರಿಗಳ ಇಂಗ್ಲಿಷ ಅನುವಾದಗಳನ್ನು ಓದಿದ ಓದುಗರ ಪ್ರತಿಕ್ರಿಯೆಗಳು ನಮಗೆ ಬರಹರೂಪದಲ್ಲಿ ಲಭ್ಯವಾಗಿಲ್ಲ. ಒಂದು ವೇಳೆ ಲಭ್ಯವಾಗಿದ್ದಲ್ಲಿ ಅವರ ಅಭಿಪ್ರಾಯಗಳೇನೆಂಬುದು ನಮಗೆ ತಿಳಿಯುತ್ತಿತ್ತು. ಅದರಿಂದ ಪ್ರಸ್ತುತ ಅಧ್ಯಯನಕ್ಕೂ ಹೆಚ್ಚಿನ ಉಪಯೋಗವಾಗುತ್ತಿತ್ತು. ಆದರೆ ಕಾರಂತರ ಕಾದಂಬರಿಗಳ ಮರಾಠಿ ಅನುವಾದಗಳನ್ನು ಓದಿದ ಓದುಗರು ಅವುಗಳ ಬಗೆಗೆ ವ್ಯಕ್ತ ಪಡಿಸಿದ ಅಭಿಪ್ರಾಯ – ಪ್ರತಿಕ್ರಿಯೆ – ವಿಮರ್ಶೆಗಳು ಬರಹರೂಪದಲ್ಲಿ ಲಭ್ಯವಿದೆ. ಅವುಗಳ ಅನುವಾದ ಕೂಡ 'ಕಾರಂತರ ಕಾದಂಬರಿಗಳು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ' ಎಂಬ ಹೆಸರಿನ ಪುಸ್ತಕವಾಗಿ ಪ್ರಕಟವಾಗಿದೆ. ಮರಾಠಿ ಓದುಗರು ಕಾರಂತರ ಕಾದಂಬರಿಗಳನ್ನು ತುಂಬ ಮಿತಿಯೊಳಗಡೆಯೇ ಅರ್ಥಮಾಡಿಕೊಂಡಿದ್ದಾರೆ ಎಂಬುದು ಆ ಲೇಖನಗಳಿಂದ ಸ್ಪಷ್ಟವಾಗುತ್ತದೆ. ಬಹುಶ: ಇದಕ್ಕೆ ಅನುವಾದಗಳಲ್ಲಿನ ಮಿತಿಗಳೇ ಕಾರಣವಾಗಿರಬಹುದು ಎಂದು ತೋರುತ್ತದೆ. ಪ್ರಸ್ತುತ ಇಂಗ್ಲಿಷ ಕಾದಂಬರಿಗಳ ಅನುವಾದದ ಸಂದರ್ಭದಲ್ಲೂ ಈ ಮಾತುಗಳನ್ನು ಅನ್ವಯಿಸಿಕೊಳ್ಳಬಹುದಾಗಿದೆ. ಅನುವಾದಗಳಲ್ಲಿನ ಮಿತಿಯಿಂದಾಗಿ ಅವುಗಳ ಓದುಗರು ಮಿತಿಯೊಳಗಡೆಯೇ ಕಾದಂಬರಿಗಳನ್ನು ಅರ್ಥಮಾಡಿಕೊಳ್ಳಬೇಕಾದ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಒಂದರ್ಥದಲ್ಲಿ ಇದು ಮೂಲಕೃತಿಗೆ, ಅದೇ ರೀತಿ ಕೃತಿಕಾರನ ಆಶಯಕ್ಕೆ ಅಪಚಾರವೆಸಗಿದಂತೆ. ಇಷ್ಟೆಲ್ಲಾ ಮಿತಿಗಳ ನಡುವೆಯೂ ಕನ್ನಡದ ಪ್ರಾದೇಶಿಕ ಕಾದಂಬರಿಗಳು ಅನುವಾದದ ಮೂಲಕ ಜಾಗತಿಕ ಮಟ್ಟಕ್ಕೆ ತಲುಪಿದವೆಂಬುದು ನಿಜಕ್ಕೂ ಹೆಮ್ಮೆ ಪಡಬೇಕಾದ ಸಂಗತಿಯಾಗಿದೆ.

# ಅಧ್ಯಾಯ - ೭

## ಉಪಸಂಹಾರ

ಪ್ರಸ್ತುತ ಅಧ್ಯಯನದಲ್ಲಿ ಇಂಗ್ಲಿಷ ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳನ್ನು ತೌಲನಿಕವಾಗಿ ಪರಾಮರ್ಶಿಸಿ ಅನುವಾದಗಳ ಔಚಿತ್ಯ ಸಾಧನೆ ಹಾಗೂ ಪ್ರಸ್ತುತತೆಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಮಾತ್ರವಲ್ಲದೇ ಪ್ರಾದೇಶಿಕ ಭಾಷೆಯ ಕೃತಿಗಳು ಜಾಗತಿಕ ಭಾಷೆಗೆ ಅನುವಾದಗೊಂಡಾಗ ಭಾಷೆ ಮತ್ತು ಸಂಸ್ಕೃತಿಗಳ ಅಂತರ್‌ಸಂಬಂಧ ಹಿನ್ನೆಲೆಯಲ್ಲಿ ಉದ್ಭವವಾಗುವ ಸಾಂಸ್ಕೃತಿಕ ತೊಡಕುಗಳು, ಉದ್ದಿಷ್ಟ, ಭಾಷೆಯ ಮಿತಿ, ಭಾಷಾಂತರ ಕಾರ್ಯದಲ್ಲಿನ ಮಿತಿ ಇತ್ಯಾದಿಗಳನ್ನು ವಿವೇಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಂಡ ಒಟ್ಟಾರೆ ಫಲಿತಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದಾಗಿದೆ.

- ಕಾರಂತರ ಕಾದಂಬರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಹಲವಾರು ಭಾಷೆಗಳಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ. ತೆಲುಗು, ತಮಿಳು, ಮರಾಠಿ, ಮಲಯಾಳಂ, ಸ್ಪಾನಿಶ್, ಹಿಂದಿ, ತುಳು, ಒರಿಯಾ, ಬಂಗಾಲಿ, ಗುಜರಾತಿ, ಮೈಥಿಲಿ, ಪಂಜಾಬಿ, ಕೊಂಕಣಿ, ಇಂಗ್ಲಿಷ ಹೀಗೆ ಒಟ್ಟು ೧೪ ಭಾಷೆಗಳಲ್ಲಿ ಕಾರಂತರ ಕಾದಂಬರಿಗಳು ಅನುವಾದಗೊಂಡಿವೆ.
- 'ಮರಳಿ ಮಣ್ಣಿಗೆ', 'ಚೋಮನ ದುಡಿ', 'ಕುಡಿಯರ ಕೂಸು', 'ಮೂಕಜ್ಜಿಯ ಕನಸುಗಳು', 'ಸರಸಮ್ಮನ ಸಮಾಧಿ', 'ಮೈಮನಗಳ ಸುಳಿಯಲ್ಲಿ' ಹೀಗೆ ಒಟ್ಟು ಆರು ಕಾದಂಬರಿಗಳು ಇಂಗ್ಲಿಷ ಭಾಷೆಗೆ ಅನುವಾದಗೊಂಡಿವೆ.
- ಅನ್ಯ ಭಾಷೆಗಳಿಗೆ ಭಾಷಾಂತರಗೊಂಡ ಕಾರಂತರ ಕಾದಂಬರಿಗಳ ಶೀರ್ಷಿಕೆಗಳನ್ನು ಮೂಲ ಕಾದಂಬರಿಗಳ ಶೀರ್ಷಿಕೆಗಳನ್ನು ಒತ್ತೊಟ್ಟಿಗೆ ಗಮನಿಸಿದಾಗ ಅನುವಾದದಲ್ಲಿನ ಕೆಲವು ಶೀರ್ಷಿಕೆಗಳು ಮೂಲ ಶೀರ್ಷಿಕೆಗಳ ಅಕ್ಷರಶಃ ಭಾಷಾಂತರಗಳಾಗಿ ಕಂಡು ಬರುತ್ತವೆ.
- ಅನ್ಯ ಭಾಷೆಗಳಲ್ಲಿ ಅನುವಾದಗೊಂಡ ಕಾದಂಬರಿಗಳಲ್ಲಿ ಮರಾಠಿ ಭಾಷೆಗೆ ಕಾರಂತರ ಅತಿ ಹೆಚ್ಚು ಕಾದಂಬರಿಗಳು ಅನುವಾದಗೊಂಡಿವೆ. ಒಟ್ಟು ಏಳು ಕಾದಂಬರಿಗಳು ಮರಾಠಿ ಭಾಷೆಯಲ್ಲಿ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ.

- ‘ಮೂಕಜ್ಜಿಯ ಕನಸುಗಳು’ ಕಾದಂಬರಿ ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಕೃತಿಯಾದರೂ ಅತಿ ಹೆಚ್ಚು ಭಾಷೆಗಳಲ್ಲಿ ಅನುವಾದಗೊಂಡ ಕಾರಂತರ ಕಾದಂಬರಿ ‘ಮರಳಿ ಮಣ್ಣಿಗೆ’ ಆಗಿದೆ.
- ಅನ್ಯ ಭಾಷೆಗಳಿಗೆ ಅನುವಾದಗೊಂಡ ಕಾರಂತರ ಹೆಚ್ಚಿನ ಕಾದಂಬರಿಗಳು ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ನಂತರವೇ ಅನುವಾದಗೊಂಡಿರುವುದನ್ನು ಕಾಣಬಹುದಾಗಿದೆ.
- ಕನ್ನಡ ಸಾಹಿತ್ಯದ ಕಾದಂಬರಿಕಾರರಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಅನ್ಯ ಭಾಷೆಗಳಲ್ಲಿ ಅನುವಾದಗಳನ್ನು ಹೊಂದಿದ ಕಾದಂಬರಿಕಾರರು ಕಾರಂತರಾಗಿದ್ದಾರೆ.
- ಮರಾಠಿ ಭಾಷೆಯಲ್ಲಿ ಅನುವಾದಗೊಂದ ಕಾರಂತರ ಕಾದಂಬರಿಗಳ ಕುರಿತಾದ ಸ್ವಲ್ಪ ಪ್ರಮಾಣದ ವಿಮರ್ಶೆ ನಡೆದುದನ್ನು ಬಿಟ್ಟರೆ ಹೆಚ್ಚಿನ ಇತರ ಭಾಷೆಗಳಲ್ಲಿ ಕಾರಂತರ ಕಾದಂಬರಿಗಳ ಅನುವಾದದ ಕುರಿತಾದ ಚರ್ಚೆ ಸಾಕಷ್ಟು ಆಗಿಲ್ಲ ಎಂಬುದು ಕಂಡು ಬರುತ್ತದೆ.
- ಕನ್ನಡದಲ್ಲಿ ಕಾರಂತರು ರಚಿಸಿರುವ ಕಾದಂಬರಿಗಳಿಗೆ ಹೋಲಿಸಿದರೆ ಅವರ ಇಂಗ್ಲಿಷಗೆ ಅನುವಾದಗೊಂಡ ಕಾದಂಬರಿಗಳ ಸಂಖ್ಯೆ ತೀರಾ ಕಡಿಮೆಯಾಗಿದೆ.
- ಇಂಗ್ಲಿಷ ಭಾಷೆಗೆ ಅನುವಾದಗೊಂಡ ಕಾರಂತರ ಕಾದಂಬರಿಗಳು ಹೆಚ್ಚಾಗಿ ಅವರಿಗೆ ಜನಪ್ರೀಯತೆಯನ್ನು, ಪ್ರಶಸ್ತಿಗಳನ್ನು ತಂದುಕೊಟ್ಟ ಕಾದಂಬರಿಗಳೇ ಆಗಿವೆ.
- ಕಾರಂತರ ಕಾದಂಬರಿಗಳಲ್ಲಿ ಕರಾವಳಿ ಕರ್ನಾಟಕ ಸಂಸ್ಕೃತಿಯ ವಿಚಾರಗಳು ದಟ್ಟವಾಗಿ ಹರಡಿಕೊಂಡಿದ್ದರೂ ಅವುಗಳಲ್ಲಿರುವ ಜಾಗತಿಕ ಸತ್ಯದ ವಿಚಾರಗಳು ಈ ಕಾದಂಬರಿಗಳ ಅನುವಾದದ ಮೂಲಕ ಜಗತ್ತಿಗೆ ಪರಿಚಯವಾಗಬಲ್ಲುದಾಗಿದೆ.
- ಅದೇ ರೀತಿಯಲ್ಲಿ ಕಾರಂತರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಕರಾವಳಿ ಕರ್ನಾಟಕದ ಸಾಂಸ್ಕೃತಿಕ ಸಾಮಾಜಿಕ ಹಾಗೂ ನೈಸರ್ಗಿಕ ಇತ್ಯಾದಿ ವೈಶಿಷ್ಟ ಪೂರ್ಣ ವಿಚಾರಗಳು ಅನುವಾದದ ಮೂಲಕ ಈಡೀ ಜಗತ್ತಿಗೆ ಪರಿಚಿತವಾಗುತ್ತವೆ.
- ಕಾರಂತರ ಪ್ರಾದೇಶಿಕ ಕಾದಂಬರಿಗಳಲ್ಲಿ ಚಿತ್ರತವಾಗಿರುವ ಮಾನವತಾ ವಿಚಾರಗಳು, ಸ್ತ್ರೀವಾದಿ ನಿಲುವುಗಳು, ಸಾಮಾಜಿಕ ಮೌಲ್ಯಗಳ ಪ್ರತಿಪಾದನೆ ಈ ಮುಂತಾದ ವಿಚಾರಗಳು ಅನುವಾದದ ಮೂಲಕ ಜಾಗತಿಕ ಮಟ್ಟಕ್ಕೆ ತಲುಪಿದಂತಾಗಿದೆ.
- ಪ್ರಾದೇಶಿಕ ಕಾದಂಬರಿಯನ್ನು ಜಾಗತಿಕ ಭಾಷೆಯಲ್ಲಿ ಅನುವಾದಿಸುವಾಗ

ಭಾಷಾಂತರಕಾರನು ಈ ಎರಡು ಭಾಷೆಗಳಲ್ಲಿ ಅಡಕವಾಗಿರುವ ವಿಭಿನ್ನ ಸಂಸ್ಕೃತಿಯನ್ನು ಎದುರಿಸಬೇಕಾಗುತ್ತದೆ.

- ಭಾಷಾಂತರದ ಸಂದರ್ಭದಲ್ಲಿ ಭಾಷೆಯ ಮಿತಿಯನ್ನು ಹಾಗೂ ಭಾಷಾಂತರದ ಮಿತಿಯನ್ನು ಕಾಣಬಹುದಾಗಿದೆ.

ಹಲವಾರು ತೊಡಕುಗಳನ್ನು ಹೊಂದಿದ್ದರೂ ಪ್ರಾದೇಶಿಕ ಕಾದಂಬರಿಗಳು ಜಾಗತಿಕ ಭಾಷೆಯಲ್ಲಿ ಅನುವಾದಗೊಂಡಿರುವುದು ಸಾಧನೆಯಾಗಿದೆ.

ಇವು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಂಡ ಒಟ್ಟಾರೆ ಫಲಿತಗಳಾಗಿವೆ. ಆದರೆ ಈ ರೀತಿಯ ಯಾವುದೇ ಅಧ್ಯಯನವೂ ತನ್ನಷ್ಟಕ್ಕೆ ತಾನೆಯೇ ಪರಿಪೂರ್ಣ ಅಥವಾ ಅಂತಿಮ ಎನಿಸುವುದಿಲ್ಲ. ಅಧ್ಯಯನಕ್ಕೆ ಹಾಕಿಕೊಂಡ ನಿರ್ದಿಷ್ಟ ಚೌಕಟ್ಟಿನ ಕಾರಣದಿಂದಾಗಿಂಯೇ, ನಿರ್ದಿಷ್ಟ ಪರಿಕಲ್ಪನೆ ಅಥವಾ ವೈಧಾನಿಕತೆಂಯು ಕಾರಣದಿಂದಲಾಗಿಯೋ ಅವು ಒಂದಲ್ಲ ಒಂದು ಬಗೆಯ ಮಿತಿಗೆ ಒಳಪಟ್ಟಿರುತ್ತವೆ. ಆದುದರಿಂದ ಸಹಜವಾಗಿಯೇ ಸಂಶೋಧನಾ ಕ್ಷೇತ್ರದಲ್ಲಿ ಇನ್ನಷ್ಟು ವ್ಯಾಪಕ ಅಧ್ಯಯನಗಳಿಗೆ ಅವಕಾಶವಿರುತ್ತದೆ. ಪ್ರಸ್ತುತ ಕಾರಂತರ ಕಾದಂಬರಿಗಳ ಇಂಗ್ಲಿಷ ಅನುವಾದಗಳ ಅಧ್ಯಯನದ ಸಂದರ್ಭದಲ್ಲೂ ಈ ಮಾತು ಅನ್ವಯವಾಗುತ್ತದೆ. ಈಗಾಗಲೇ ಗಮನಿಸಿದಂತೆ ಇಲ್ಲಿ ಕಾರಂತರ ಕಾದಂಬರಿಗಳ ಇಂಗ್ಲಿಷ ಅನುವಾದಗಳು ಗಳಿಸಿದ ಸಿದ್ದಿ ಸಾಧನೆಗಳನ್ನು ಅನುವಾದದಲ್ಲಿನ ಸಾಂಸ್ಕೃತಿಕ ತೊಡಕುಗಳನ್ನು ಮುಖ್ಯವಾಗಿ ಪರಿಶೀಲಿಸಲಾಗಿದೆ. ಆದರೆ ಇನ್ನಷ್ಟು ವಿಭಿನ್ನ ನೆಲೆಗಳಿಂದಲೂ ಕಾರಂತರ ಕಾದಂಬರಿಗಳ ಅನುವಾದಗಳ ಕುರಿತು ವಿಶ್ಲೇಷಿಸಲು ಅವಕಾಶವಿದೆ.

ಪ್ರಸ್ತುತ ಅಧ್ಯಯನವು ಬಹುಮಟ್ಟಿಗೆ ಕನ್ನಡದ ಓದುಗನ ನೆಲೆಯಿಂದ ಸಾಗಿದಂತಿದೆ. ಆದರೆ ಕನ್ನಡ ಬಾರದ ಕೇವಲ ಇಂಗ್ಲಿಷ ಅನುವಾದಗಳನ್ನಷ್ಟೇ ಓದಿ ಅರ್ಥಮಾಡಿಕೊಳ್ಳಬಲ್ಲವರ ಪ್ರತಿಕ್ರಿಯೆಗಳೇನೆಂಬುದನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡಿಲ್ಲ. ಅದು ಸಾಧ್ಯವಾದಲ್ಲಿ ಇಂತಹ ಅಧ್ಯಯನಗಳಿಗೆ ವಿಶಿಷ್ಟ ಆಯಾಮಗಳು ಪ್ರಾಪ್ತವಾಗಬಹುದು.

ಕಾರಂತರ ಕಾದಂಬರಿಗಳು ಇಂಗ್ಲಿಷ ಭಾಷೆಗೆ ಮಾತ್ರವಲ್ಲದೇ ದ್ರಾವಿಡದ ಇತರ ಭಾಷೆಗಳಿಗೂ ಅನುವಾದಗೊಂಡಿವೆ. ಅದೇ ರೀತಿ ದ್ರಾವಿಡೇತರ ಭಾರತದ ಇತರ ಭಾಷೆಗಳಿಗೂ ಅನುವಾದಗೊಂಡಿವೆ. ಹಾಗಾಗಿ ದ್ರಾವಿಡ ಭಾಷೆಗಳ ಅನುವಾದಗಳನ್ನು ಮೂಲದೊಂದಿಗೆ ಇಟ್ಟು ಪರಸ್ಪರ ತೌಲನಿಕವಾಗಿ ಅಧ್ಯಯನ ನಡೆಸಬಹುದಾಗಿದೆ. ಇದೇ ರೀತಿಯಲ್ಲಿ

ದ್ರಾವಿಡೇತರ ಭಾಷೆಗಳ ಅನುವಾದಗಳನ್ನು ಮೂಲ ಕನ್ನಡ ಕಾದಂಬರಿಗಳೊಂದಿಗೆ ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಅಷ್ಟು ಮಾತ್ರವಲ್ಲದೆ ಭಾಷಾಂತರದ ವಿವಿಧ ಸಿದ್ಧಾಂತ ಪರಿಕಲ್ಪನೆಗಳ ಆಧಾರಗಳಾದ ಭಾಷಾಂತರ, ರೂಪಾಂತರ, ಸಾಂಸ್ಕೃತಿಕ ಭಾಷಾಂತರ, ಸೃಜನಶೀಲ ಭಾಷಾಂತರ, ಪುನರಲೇಖನ ಈ ಮುಂತಾದ ಪ್ರಬೇಧಗಳ ಆಧಾರದಲ್ಲೂ ಕಾರಂತರ ಅನುವಾದಿತ ಕಾದಂಬರಿಗಳನ್ನು ಅಧ್ಯಯನ ನಡೆಸಬಹುದಾದ ಸಾಧ್ಯತೆ ಇದೆ.

ಇವುಗಳೆಲ್ಲ ಕಾರಂತರ ಕಾದಂಬರಿಗಳ ಅನುವಾದಗಳಿಗೆ ಸಂಬಂಧಪಟ್ಟಂತೆ ಮುಂದೆ ಕೈಗೊಳ್ಳಬಹುದಾದ ಅಧ್ಯಯನಗಳ ಒಂದು ಮುನ್ನೋಟವೆನ್ನಬಹುದು. ಅದೇನೆ ಇದ್ದರೂ ಈ ಕ್ಷೇತ್ರದಲ್ಲಿ ವಿವಿಧ ಪರಿಕಲ್ಪನೆಗಳನ್ನಾಧರಿಸಿ ನಡೆಯಬಹುದಾದ ಮುಂದಿನ ಅಧ್ಯಯನಗಳಿಗೆ ಪ್ರಸ್ತುತ ಮಹಾಪ್ರಬಂಧವು ಪ್ರೇರಕವಾಗಬಲ್ಲುದು ಎಂಬ ವಿಶ್ವಾಸವನ್ನು ಹೊಂದಲಾಗಿದೆ.

*****

# ಅನುಬಂಧ

## ಆಕರಗ್ರಂಥ ಸೂಚಿ

### ಅ. ಪ್ರಧಾನ ಆಕರಗಳು


**I.** ಕಾರಂತರ ಕಾದಂಬರಿಗಳ ಇಂಗ್ಲಿಷ್ ಅನುವಾದಗಳು

1. Moorthy Rao A.N. (Trn); 1950; **Back to the soil**; Harsha Printery & Publications, Puttur.
2. Padma Ramachandra Sharma (Trn); 2002; **Return to Earth**; Sahitya Akademi, Bangalore.
3. Sanjeeva Rao T.S. (Trn); 1979; **Mookajji's Visions**; IBH Prakashana, Bangalore.
4. Kalkur U.R. (Trn); 1984; **The Shrine**; Arnold – Heineman, New Delhi.
5. Kalkur U.R. (Trn); 1984; **Choma's Drum** ; Arnold Heineman; New Delhi.
6. Sharada Prasad H.Y. (Trn); 1979; **The Headman of the Little Hill**; IBH Prakashana, Bangalore.
7. Sharada Prasad H.Y. (Trn); 1997; **The Woman of Basrur**; Ravi Dayal Publisher, Delhi.

**II.** ಕಾರಂತರ ಮೂಲ ಕಾದಂಬರಿಗಳು

೧. ೧೯೮೩ (ಮ.ಮು); ಮರಳಿ ಮಣ್ಣಿಗೆ; ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು

೨. ೧೯೮೬ (ಮ.ಮು); **ಕುಡಿಯರ ಕೂಸು**; ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು

೩. ೧೯೮೮ (ಮ.ಮು); **ಸರಸಮ್ಮನ ಸಮಾಧಿ**; ಐಬಿಎಚ್ ಪ್ರಕಾಶನ, ಬೆಂಗಳೂರು

೪. ೧೯೭೨ (ಮ.ಮು); **ಮೈಮನಗಳ ಸುಳಿಯಲ್ಲಿ**; ಎಸ್‌ಬಿಎಸ್ ಪಬ್ಲೀಷರ್ಸ್ ಡಿಸ್ಟ್ರೀಬ್ಯೂಟರ್ಸ್, ಬೆಂಗಳೂರು.

೫. ೧೯೯೯ (ಮ.ಮು); **ಚೋಮನದುಡಿ**; ಎಸ್‌ಬಿಎಸ್ ಪಬ್ಲೀಷರ್ಸ್ ಡಿಸ್ಟ್ರೀಬ್ಯೂಟರ್ಸ್; ಬೆಂಗಳೂರು

೬. ೨೦೦೭ (ಮ.ಮು); **ಮೂಕಜ್ಜಿಯ ಕನಸುಗಳು**; ಎಸ್‌ಬಿಎಸ್ ಪಬ್ಲಿಷರ್ಸ್ ಡಿಸ್ಟ್ರೀಬ್ಯೂಟರ್ಸ್, ಬೆಂಗಳೂರು

## ಆ. ಆನುಷಂಗಿಕ ಆಕರಗಳು

### ೧. ಕನ್ನಡ ಕೃತಿಗಳು

೧. ಅನಂತನಾರಾಯಣ ಎಸ್; ೧೯೪೮; **ಕಾರಂತರ ಕಾದಂಬರಿಗಳು**; ಉಷಾ ಸಾಹಿತ್ಯಮಾಲೆ, ಮೈಸೂರು.

೨. ಅನಂತನಾರಾಯಣ ಎಸ್; ೧೯೯೨; **ಕಾರಂತರ ಕಾದಂಬರಿಗಳಲ್ಲಿ ನಿಸರ್ಗ**; ಕರ್ನಾಟಕ ಸಂಘ, ಪುತ್ತೂರು

೩. ಅಶೋಕ ಟಿ.ಪಿ; ೧೯೯೨; **ಶಿವರಾಮ ಕಾರಂತ ಎರಡು ಅಧ್ಯಯನಗಳು**; ಅಕ್ಷರ ಪ್ರಕಾಶನ; ಸಾಗರ

೪. ಅಶೋಕ ಟಿ.ವಿ. (ಸಂ); ೧೯೯೩; **ಕನ್ನಡ ಸಾಹಿತ್ಯ ; ಈ ಶತಮಾನದ ನೋಟ – ಶಿವರಾಮ ಕಾರಂತ**; ಕನ್ನಡ ವಿಶ್ವವಿದ್ಯಾಲ, ಹಂಪಿ

೫. ಅಶೋಕ ಟಿ.ವಿ. (ಸಂ); ೧೯೯೪; **ಕಾರಂತ ಮಂಥನ**; ಕರ್ನಾಟಕ ಸಂಘ, ಪುತ್ತೂರು

೬. ಇನಾಂದಾರ ವಿ.ಎಂ. ೧೯೭೮; **ಶಿವರಾಮ ಕಾರಂತ ಬದುಕು–ಬರೆಹ**; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

೭. ಉಪೇಂದ್ರ ಸೋಮಯಾಜಿ ನಿ. (ಸಂ); ೨೦೦೩; **ಎಲ್ಲರಂತಲ್ಲ**; ಮಿತ್ರವ ಮಂಡಳಿ, ಕೋಟ

೮. ಕರೀಗೌಡ ಬೀಚನಹಳ್ಳಿ (ಸಂ); ೧೯೯೯; **ಭಾಷಾಂತರದ ಸಾಂಸ್ಕೃತಿಕ ನೆಲೆಗಳು**; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಕರುಣಾಕರ ಶೆಟ್ಟಿ ಎನ್; ೨೦೦೩; **ಕಾರಂತ ಮತ್ತು ಪ್ರೇಮಚಂದ**; ಅಭಿಜ್ಞಾ ಪ್ರಕಾಶನ; ಮುಂಬಯಿ

೧೦. ಕೀರ್ತಿನಾಥ ಕುರ್ತುಕೋಟಿ; ೧೯೯೨; **ಬಯಲು ಆಲಯ**; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ; ಹಂಪಿ;

೧೧. ಕುಳ್ಳಿ ಜಿ.ಎಸ್. ಮುರುಡಿ ಜಿ.ಪಿ; ೧೯೭೫; **ಅನುವಾದ ಕಲೆ**; ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೨. ಕೇಶವ ಶರ್ಮ ಕೆ. ೨೦೦೦; **ರಚನೆ ನಿರಚನೆ**; ಅಭಿನವ ಪ್ರಕಾಶನ; ಬೆಂಗಳೂರು

೧೩. ಗುರುಲಿಂಗ ಕಾಪಸೆ (ಸಂ); ೨೦೦೩; **ಶಿವರಾಮ ಕಾರಂತ ಸಾಂಸ್ಕೃತಿಕ ಅನುಸಂಧಾನ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೪. ಚೆನ್ನಪ್ಪ ಎಸ್. ೧೯೮೩; **ಕಾರಂತ ಹಕ್ಕಿ ನೋಟ**; ಅರ್ಕಾವತಿ ಪ್ರಕಾಶನ, ಮೈಸೂರು

೧೫. ಜಯಪ್ರಕಾಶ ಮಾವಿನಕುಳಿ (ಸಂ); ೧೯೯೯; **ಕಾರಂತ ಯುಗಾಂತ**; ಶಿವರಾಮ ಕಾರಂತ ಅಧ್ಯಯನ ಪೀಠ ವಿವೇಕಾನಂದ ಕಾಲೇಜು, ಪುತ್ತೂರು

೧೬. ತಾರಕೇಶ್ವರ ವಿ.ಬಿ. ೨೦೦೬; **ವಸಾಹತು ಶಾಹಿ ಮತ್ತು ಭಾಷಾಂತರ**; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ನರಸಿಂಹಮೂರ್ತಿ ಬಿದರಹಳ್ಳಿ; ೧೯೯೩; **ಕಡಲಂತೆ ಕಾರಂತ**; ಕರ್ನಾಟಕ ಸಂಘ, ಪುತ್ತೂರು

೧೮. ನಾಗ ಐತಾಳ (ಸಂ); ೨೦೦೦; **ಕಾರಂತ ಚಿಂತನ ಕಡಲಾಚೆಯ ಕನ್ನಡಿಗರಿಂದ** ; ಅಕ್ಷರ ಪ್ರಕಾಶನ, ಸಾಗರ

೧೯. ನಾಗಭೂಷಣ ಸ್ವಾಮಿ ಓ.ಎಲ್. ; ೧೯೯೩; **ಭಾಷಾಂತರ**; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦. ನಾಯಕ ಜಿ.ಎಚ್. ೨೦೦೩; **ಸ್ಥಿತಪ್ರಜ್ಞೆ**; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ನಾಯಕ ಹಾ.ಮಾ. (ಸಂ) ; ೧೯೮೪; **ಕನ್ನಡ ಗ್ರಂಥ ಸೂಚಿ; ಅನುವಾದ ಸಾಹಿತ್ಯ**; ಸಂ.೭; ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೨. ನಿಕೇತನ ೨೦೦೫; **ಸ್ತ್ರೀದೃಷ್ಟಿ**; ರಾಶಿ ಪ್ರಕಾಶನ, ಉಡುಪಿ

೨೩. ಪ್ರಧಾನ ಗುರುದತ್ತ; ೧೯೮೬; **ಅನುವಾದ ಆಧುನಿಕ ಜಗತ್ತಿನಲ್ಲಿ** ; ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು

೨೪. ಪ್ರಧಾನ ಗುರುದತ್ತ ; ೧೯೮೯; **ಭಾಷಾಂತರ ಕಲೆ**; ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೨೫. ಪ್ರಧಾನ ಗುರುದತ್ತ ; ೨೦೦೪; **ಅನಾವರಣ ಕನ್ನಡ ಪುಸ್ತಕ ಪ್ರಾಧಿಕಾರ**; ಬೆಂಗಳೂರು

೨೬. ಭಾಸ್ಕರ ಮಯ್ಯ ಜಿ. ; ೧೯೮೪; **ಮೂಕಜ್ಜಿಯ ಕನಸುಗಳು ಮತ್ತು ಮಾನವಶಾಸ್ತ್ರ**; ಆತ್ರೇಯ ಪ್ರಕಾಶನ, ಸಾಲಿಗ್ರಾಮ

೨೭. ಮನು ಬಳಿಗಾರ; ೧೯೯೯; **ಬಹುಮುಖಿ**; ಪರಮಶಂಕರ ಪ್ರಕಾಶನ ; ಶಿಗ್ಲಿ (ಬೆಳಗಾವಿ)

೨೮. ಮಹಾಬಲೇಶ್ವರ ರಾವ್; ೧೯೯೨; **ಶಿಕ್ಷಣ ಕಾರಂತರ ದೃಷ್ಟಿ ಸೃಷ್ಟಿ** ; ಕರ್ನಾಟಕ ಸಂಘ ಪುತ್ತೂರು

೨೯. ಮಹೇಶ್ವರಪ್ಪ ; ೧೯೭೩; **ಭಾಷಾಂತರ ಪ್ರವೇಶಿಕೆ**; ರವೀಂದ್ರ ಪ್ರಕಾಶನ ; ಕಾರ್ಗಲ್

೩೦. ಮಾಲಿನಿಮಲ್ಯ ; ೧೯೮೭; **ನಾನು ಕಂಡ ಕಾರಂತರು** ; ಪ್ರಕಾಶನ, ಸಾಗರ

೩೧. ಮಾಲಿನಿಮಲ್ಯ ; ೧೯೯೨; **ಶಿವರಾಮ ಕಾರಂತ ವಾಙ್ಮಯ ವೃತ್ತಾಂತ** ; ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

೩೨. ಮಾಲಿನಿಮಲ್ಯ ; ೧೯೯೫; **ಶಿವರಾಮ ಕಾರಂತರ ಕಿನ್ನರಲೋಕ** ; ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

೩೩. ಮಾಲಿನಿಮಲ್ಯ (ಸಂ) ; ೧೯೯೭, ಶಿವರಾಮ ಕಾರಂತರ ಕೃತಿ ಕೈಪಿಡಿ ; ಎಂ. ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

೩೪. ಮಾಲಿನಿಮಲ್ಯ (ಸಂ) ; ೧೯೯೯; **ಕಾರಂತ ಉವಾಚ** ; ಶಿವರಾಮ ಕಾರಂತ ಅಧ್ಯಯನ ಕೇಂದ್ರ ವಿವೇಕಾನಂದ ಕಾಲೇಜು, ಪುತ್ತೂರು

೩೫. ಮಾಲಿನಿಮಲುಯ (ಸಂ) ; ೨೦೦೧; **ಶಿವರಾಮ ಕಾರಂತ** ; ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು

೩೬. ರವಿಕುಮಾರ ನ. (ಸಂ) ; ೧೯೯೨; **ಕಾದಂಬರಿ ಕಣ್ಣಲ್ಲಿ ಕಾರಂತರು** ; ಪ್ರತಿಭಾಯುವ ವೇದಿಕೆ, ಬೆಂಗಳೂರು

೩೭. ರಾಮಚಂದ್ರನ್ ಸಿ.ಎನ್. ; ೧೯೯೬; **ಕಾರಂತರ ಕಾದಂಬರಿಗಳಲ್ಲಿ ನಿರೂಪಕ**; ಕರ್ನಾಟಕ ಸಂಘ, ಪುತ್ತೂರು

೩೮. ರೇವಯ್ಯ ಒಡೆಯರ ; ೨೦೦೮; **ಶಿವರಾಮಕಾರಂತರ ಕಾದಂಬರಿಗಳಲ್ಲಿ ಮಾನವೀಕರಣದ ನೆಲೆಗಳು**; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೯. ಲಕ್ಷ್ಮೀನಾರಾಯಣ ಆರೋರಾ; ೧೯೯೫; **ಭಾಷಾಂತರ ಸೌರಭ**; ಸ್ವಾತಿ ಪ್ರಕಾಶನ; ಮೈಸೂರು

೪೦. ವಸಂತಕುಮಾರ ತಾಳ್ತಾಜೆ ; ೨೦೦೩; **ಶಿವರಾಮ ಕಾರಂತ** ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪೧. ವಿರೂಪಾಕ್ಷ ಕುಲಕರ್ಣಿ (ಸಂ / ಅನು) ; ೧೯೯೦; ಕಾರಂತರ ಕಾದಂಬರಿಗಳು **ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ** ; ಕರ್ನಾಟಕ ಸಂಘ, ಪುತ್ತೂರು

೪೨. ವಿವಿಧ ಲೇಖಕರು ; ೧೯೯೨; **ಕಾದಂಬರಿ ಕಣ್ಣಲ್ಲಿ ಕಾರಂತರು**; ಪ್ರತಿಭಾಯುವ ವೇದಿಕೆ, ಬೆಂಗಳೂರು

೪೩. ವಿವೇಕ ರೈ ಬಿ.ಎ. ; (ಸಂ) ೨೦೦೨; **ಶತಮಾನದ ಕೊನೆಯಲ್ಲಿ ಶಿವರಾಮ ಕಾರಂತ**; ಡಾ. ಶಿವರಾಮ ಕಾರಂತ ಪೀಠ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು

೪೪. ವಿಷ್ಣು ನಾಯ್ಕ ; ೧೯೯೯; **ಪ್ರಮಾಣ**; ರಾಘವೇಂದ್ರ ಪ್ರಕಾಶನ, ಅಂಕೋಲಾ

೪೫. ಶಂಪಾ ರೈತೋಟ ; ೧೯೯೪; **ಕಾರಂತರು ಮತ್ತು ಪರಿಸರ** ; ಕರ್ನಾಟಕ ಸಂಘ, ಪುತ್ತೂರು

೪೬. ಶಂಬುಲಿಂಗಪ್ಪ ಗು. ಮಸಳಿ (ಸಂ) ; ೨೦೦೩; **ಕನ್ನಡ ಸಂಶೋಧನಾ ಸೂಚಿ**; ಕನ್ನಡ ವಿಭಾಗ ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ

೪೭. ಶಿವರಾಮ ಕಾಡನಕುಪ್ಪೆ (ಸಂ); ೧೯೮೨; **ಶಿವರಾಮ ಕಾರಂತ – ಹತ್ತು ಅಧ್ಯಯನಗಳು** ಭಾರತೀ ಪ್ರಕಾಶನ, ಮೈಸೂರು

೪೮. ಶಿವರುದ್ರಪ್ಪ ಜಿ.ಎಸ್. (ಸಂ) ; ೧೯೮೩; **ಕಾದಂಬರಿಕಾರರಾಗಿ ಕಾರಂತ**; ಕನ್ನಡ ವಿಭಾಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೪೯. ಶೇಷಗಿರಿರಾವ್ ಎಲ್.ಎಸ್. (ಸಂ) ; ೧೯೭೮; **ಕಾರಂತ ಕಿರಣ**; ಅಭಿನಂದನ ಉತ್ಸವ ಸಮಿತಿ, ಬೆಂಗಳೂರು

೫೦. ಶೇಷಗಿರಿರಾವ್ ಎಲ್.ಎಸ್. ; ೧೯೮೮; **ಡಾ। ಶಿವರಾಮ ಕಾರಂತ** ; ಭಾರತೀಯ ಸ್ಟೇಟ್ ಬ್ಯಾಂಕ್ ಸ್ಥಳೀಯ ಪ್ರಧಾನ ಕಚೇರಿ, ಅಧಿಕೃತ ಭಾಷಾ ವಿಭಾಗ, ಬೆಂಗಳೂರು

೫೧. ಸೀತಾರಾಮ ಅಡಿಗ ಕೂರಾಡಿ ; ೨೦೦೧; **ಬದ್ಧತೆಯ ಬದುಕು** ; ಶಿವರಾಮ ಕಾರಂತ ಅಧ್ಯಯನ ಕೇಂದ್ರ ವಿವೇಕಾನಂದ ಕಾಲೇಜು, ಪುತ್ತೂರು

೫೨. ಸೀತಾರಾಮಯ್ಯ ವಿ. ; ೧೯೫೬; **ಶಿವರಾಮ ಕಾರಂತ**; ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ

೫೩. ಸೀತಾರಾಮಯ್ಯ ವಿ. ಆಚಾರ್ಯ ಪಾ.ವೆಂ; ೧೯೯೩; **ಜ್ಞಾನಪೀಠಪ್ರಶಸ್ತಿ ವಿಜೇತ ಕನ್ನಡಿಗರು**; ಶಿವರಾಮ ಕಾರಂತ; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಎಂ.ಜಿ.ಎಂ ಕಾಲೇಜು, ಉಡುಪಿ.

೫೪. ಸುನೀತಾ ಶೆಟ್ಟಿ ಎಂ. ; ೨೦೦೨; **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ**; ಕನ್ನಡ ವಿಭಾಗ ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ

೫೫. ಸುಮಿತ್ರಾ ಬಾಯಿ ಎಸ್. ೧೯೯೩; **ಅಂಗದೊಳಗಿನ ಕಡಲು**, ಕರ್ನಾಟಕ ಸಂಘ, ಪುತ್ತೂರು

## ೨. ಇಂಗ್ಲಿಷ ಕೃತಿಗಳು

1. Basavaraj Naikar; 2005; **Indian Literature in English Translation**; National Publishing House, New Delhi.

2. Niranjan Tejaswini; 1992; **Siting Translation; History, Post structuralism and the colonial context**; Orient Longman,

3. Ramachandran C.N. 2001; **K. Shivarama Karanth**; Sahitya Academy, New Delhi.

4. Ramachandran C.N., Thirumaleshwara Bhat N. (Ed); 2002; **Colonial Discourse & the Indian Novel Shivarama Karanth** Birth Centenary Celebration Committee, Udupi

5. Savory T.H. Jonathan Cape; 1969; **The Art of Translations**; 30 Bedford Square, Londan

6. Sharadaprasad H.Y. (Trn) ; 1996; **Life The Only Light**; SBS Publishers Distributions, Bangalore

7. Tytler A.F; 1907; **Essay on the Principles of Translation**; An Dent and Sons Limited Londan

## ೩. ಅಪ್ರಕಟಿತ ಸಂಶೋಧನಾ ಮಹಾಪ್ರಬಂಧಗಳು

೧. ನಾಗೇಂದ್ರ ಕುಮಾರ ಬಿ.ಸಿ; **ಶಿವರಾಮ ಕಾರಂತರ ಸಂಸ್ಕೃತಿ ಪರಿಕಲ್ಪನೆಯ ನೆಲೆಗಳು**; ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಮುನಿಯಪ್ಪ, ೨೦೦೪; **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ರಾಜಕೀಯ ಪ್ರಜ್ಞೆ: ಒಂದು ಅಧ್ಯಯನ**; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩. ಶಾರದಾ ಬೋಪಟ್ಟಿನವರ; **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಜಾನಪದೀಯ ಅಂಶಗಳು** (ಎಮ್.ಫಿಲ್ ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪. ಸುಮಿತ್ರಾ ಎಲ್.ಸಿ. ೨೦೦೦; **ಕುವೆಂಪು ಮತ್ತು ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ**; ತೌಲನಿಕ ಅಧ್ಯಯನ ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ

## ೪. ನಿಯತಕಾಲಿಕ

ಅ. ಕನ್ನಡ ಅಧ್ಯಯನ ; ಸಂಪುಟ ೧೩ ; ಸಂಚಿಕೆ ೦೨; ೨೦೦೩; ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ೫. ನಿಘಂಟುಗಳು

01. Sally wetimeier (Ed) ; 2000 ; OXFORD advanced Learner's DICTIONARY ; OXFORD University Press ; New York.

02. STANDARD DICTONARY ; 1993 ; SANKESHWAR PRINTERS. PVT LTD;GADAG.

03. WEBSTER'S DICTIONARY ; Ohenheimer publishers, Inc.USA

## ೬. ಇತರೇ

೧. ಮಾಲಿನಿ ಮಲ್ಯ ಅವರು ಮಾಡಿದ **ಮರಳಿ ಮಣ್ಣಿಗೆ** ಕಾದಂಬರಿಯ ಇಂಗ್ಲಿಷ ಅನುವಾದ RETURN TO EARTHದ ವಿಶ್ಲೇಷಣೆ (ಅಪ್ರಕಟಿತ)


*-*-*-*-*-*

